ಪ್ರಥಮ ವಿಶ್ವ ಕನ್ನಡ ಸಮ್ಮೇಳನ ಸಾಹಿತ್ಯ ಮಾಲೆ 71

ವಿಚಾರ ಸಾಹಿತ್ಯ

# ಡಿ. ಎಲ್. ಎನ್. ಅವರ ಆಯ್ದ ಲೇಖನಗಳು

ಕಮಲಾ ಹಂಪನಾ






ಕರ್ನಾಟಕ ಸರ್ಕಾರ 1983

# ಡಿ. ಎಲ್. ಎನ್. ಅವರ ಆಯ್ದ ಲೇಖನಗಳು

(ಸಂಕಲನ)

ಸಂಪಾದಕರು

**ಕಮಲಾ ಹಂಪನಾ**



ವಿಶ್ವ ಕನ್ನಡ ಸಮ್ಮೇಳನ

14-3 ಎ, ನೃಪತುಂಗ ರಸ್ತೆ,

ಬೆಂಗಳೂರು-560 002

Vishwa Kannada Sahithya Male

SELECTED ARTICLES OF D. L. N.
By Kamala Hampana

Published by K. Jayacharya, K.A.S., Additional D'... ...torate
of Kannada & Culture (Vishwa Kannada Samr...
14/3, Nrupathunga Road, Bangalore-560







ಮುದ್ರಣ :
ಅಶ್ವಥ್ ಪ್ರಿಂಟರ್ಸ್
ಜಯನಗರ
ಬೆಂಗಳೂರು - 82



**ಆರ್. ಗುಂಡೂರಾವ್**
**ಮುಖ್ಯಮಂತ್ರಿ**




**ವಿಧಾನಸೌಧ**
**ಬೆಂಗಳೂರು**

**ದಿನಾಂಕ : ೧೮-೯-೮೨**

## ಸಂಕಲ್ಪ....ಸಿದ್ಧಿ

ಸುಮಾರು ಎರಡು ಸಾವಿರ ವರ್ಷಗಳಿಗೂ ಹೆಚ್ಚು ದೀರ್ಘವಾದ ಐತಿಹಾಸಿಕ ಪರಂಪರೆ ಕನ್ನಡ ನಾಡಿನದು. ಈ ಅವಧಿಯಲ್ಲಿ ಕನ್ನಡ ಭಾಷೆ, ಸಾಹಿತ್ಯ, ಕಲೆ, ಸಂಸ್ಕೃತಿಗಳು ಸಮೃದ್ಧವಾಗಿ, ಶ್ರೀಮಂತವಾಗಿ ಬೆಳೆದು, ಈ ನಾಡಿನ ಇತಿಹಾಸವನ್ನು ಭವ್ಯವಾಗಿಸಿವೆ.

ಒಂದು ನಾಡಿನ ಅಂತಃಸತ್ವ ಅಡಕವಾಗಿರುವುದೇ ಅದರ ಸಾಂಸ್ಕೃತಿಕ ನೆಲೆಗಟ್ಟಿನಲ್ಲಿ. ಈ ನೆಲೆಗಟ್ಟು ಭದ್ರವಾಗಿರಬೇಕಾದರೆ ಸಾಂಸ್ಕೃತಿಕ ಪರಂಪರೆಉತ್ಕರ್ಷಕ್ಕೆ ಏರಲು ಔನ್ನತ್ಯ ಸಾಧಿಸಲು ನಿರಂತರವಾಗಿ ಪ್ರಯತ್ನಗಳು ನಡೆಯಬೇಕು.

ಭಾರತೀಯ ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿ ಬೆಸೆದುಕೊಂಡಿದ್ದರೂ ಕನ್ನಡ ತನ್ನದೇ ಆದ ವಿಶಿಷ್ಟ ಸಂಸ್ಕಾರಗಳನ್ನು, ಸಂಸ್ಕೃತಿಯನ್ನು ಹೊಂದಿದೆ.

ಕನ್ನಡ ನಾಡಿನ ಭವ್ಯ ಪರಂಪರೆಯನ್ನು ಜಾಗತಿಕ ಹಿನ್ನೆಲೆಯಲ್ಲಿ ಚಿತ್ರಿಸಿ, ವಿಶ್ವಕ್ಕೆ ಕನ್ನಡ ಸಂಸ್ಕೃತಿಯ ಹಿರಿಮೆಯನ್ನು ಸಾರುವ ಸದುದ್ದೇಶದಿಂದ ಪ್ರಥಮ ವಿಶ್ವ ಕನ್ನಡ ಸಮ್ಮೇಳನವನ್ನು ಕರ್ನಾಟಕದ ಪ್ರಮುಖ ಸಾಂಸ್ಕೃತಿಕ ಕೇಂದ್ರವಾದ ಮೈಸೂರಿನಲ್ಲಿ ಏರ್ಪಡಿಸಿದ್ದೇವೆ. ಇದೊಂದು ಚರಿತ್ರಾರ್ಹವಾದ ಸಂದರ್ಭವೆಂದು ನನ್ನ ನಂಬಿಕೆ. ಈ ಚರಿತ್ರಾರ್ಹ ಸಮ್ಮೇಳನ ಸಾರ್ಥಕವಾಗಲು ಮತ್ತು ಬಹುಕಾಲ ಇದರ

ಸವಿ ನೆನಪು ಉಳಿಯಲು ಹಲವು ಯೋಜನೆಗಳನ್ನು ರೂಪಿಸಿದ್ದೇವೆ. ಕನ್ನಡದ ಖ್ಯಾತ ಲೇಖಕರ ಮಹತ್ವದ ಕೃತಿಗಳನ್ನು ಪ್ರಕಟಿಸಿ, ಸುಲಭ ಬೆಲೆಗೆ ಒದಗಿಸುವುದು ಈ ಯೋಜನೆಗಳಲ್ಲಿ ಒಂದು. ಇದರಂತೆ ಒಂದುನೂರಾ ಎರಡು ಕೃತಿಗಳನ್ನು, ಹದಿನೇಳು ಸಂಕಲನಗಳನ್ನು ಆಯ್ಕೆ ಮಾಡಿ ಪ್ರಕಟಿಸುತ್ತಿದ್ದೇವೆ. ಈ ಸಾಹಿತ್ಯ ಮಾಲಿಕೆಯಲ್ಲಿ ಕವನ, ಕಾದಂಬರಿ, ನಾಟಕ, ವಿಚಾರ ಸಾಹಿತ್ಯ ಕೃತಿಗಳಲ್ಲದೆ ಕನ್ನಡ ಸಾಹಿತ್ಯದ ಸತ್ವವನ್ನು, ವೈವಿಧ್ಯವನ್ನು ಪ್ರತಿಫಲಿಸುವ ವಿವಿಧ ಬಗೆಯ ಸಂಕಲನಗಳು ಇವೆ. ಅನ್ಯಭಾಷಿಕರಿಗೆ ಕನ್ನಡ ಸಾಹಿತ್ಯದ ಕಂಪು ಬೀರುವಂತೆ ಕೆಲವು ಆಯ್ದ ಕೃತಿಗಳ ಇಂಗ್ಲಿಷ್ ಭಾಷಾಂತರವನ್ನು ಕೂಡ ಪ್ರಕಟಿಸುತ್ತಿದ್ದೇವೆ. ಸಾಹಿತ್ಯಮಾಲೆಯ ಈ ಕೃತಿರತ್ನಗಳನ್ನು ಸಹೃದಯ ವಾಚಕರು ಓದಿ ಆಸ್ವಾದಿಸಿದರೆ ನಮ್ಮ ಶ್ರಮ ಸಾರ್ಥಕ; ಸಮ್ಮೇಳನ ಅರ್ಥಪೂರ್ಣವಾಗುವುದೆಂದು ನನ್ನ ಅಭಿಲಾಷೆ.

ಈ ಕೃತಿಗಳನ್ನು ಆಯ್ಕೆ ಮಾಡುವಲ್ಲಿ ಸಾಹಿತ್ಯ ಸಮಿತಿಯ ಪರಿಣತ ಸದಸ್ಯರು ಸಾಕಷ್ಟು ಶ್ರಮಿಸಿದ್ದಾರೆ. ಸುದೈವದಿಂದ ಕನ್ನಡದಲ್ಲಿ ಪ್ರತಿಭಾವಂತ ಲೇಖಕರ ಅಮೂಲ್ಯ ಕೃತಿಗಳಿಗೆ ಕೊರತೆ ಇಲ್ಲ. ಈ ಹಿನ್ನೆಲೆಯಲ್ಲಿ ನಿಶ್ಚಿತ ಸಂಖ್ಯೆಯಲ್ಲಿ ಸಾಹಿತ್ಯ ಕೃತಿಗಳನ್ನು ಆಯ್ಕೆ ಮಾಡುವುದು ಸುಲಭದ ಕೆಲಸವಲ್ಲ. ಆದರೂ ಬಹುಜನರಿಗೆ ಒಪ್ಪಿಗೆಯಾಗುವಂತ ಸಾಹಿತ್ಯ ಸಮಿತಿ ತನ್ನ ಕರ್ತವ್ಯ ನಿರ್ವಹಿಸಿದೆಯೆಂದು ಭಾವಿಸುತ್ತೇನೆ. ಈ ಸಮಿತಿಗೆ ಕೃತಜ್ಞತೆಗಳನ್ನು ಅರ್ಪಿಸುವುದು ನನ್ನ ಕರ್ತವ್ಯ. ಈ ಕೃತಿಗಳನ್ನು ಪ್ರಕಟಿಸಲು ಅನುಮತಿ ನೀಡಿ, ಲೇಖಕರು ಉಪಕರಿಸಿದ್ದಾರೆ. ಅವರ ಉದಾರ ಉಪಕಾರವನ್ನು ಈ ಸಂದರ್ಭದಲ್ಲಿ ಕೃತಜ್ಞತಾಪೂರ್ವಕವಾಗಿ ನೆನೆಯುತ್ತೇನೆ.

ಈ ಗ್ರಂಥಮಾಲೆ ಕನ್ನಡಿಗರ ಮನಸ್ಸನ್ನು ತಟ್ಟಿ, ಹೃದಯಸ್ಪಂದನ ಮಾಡಿದರೆ ನಮ್ಮ ಸಂಕಲ್ಪಕ್ಕೆ ಸಿದ್ಧಿ ದೊರಕಿದಂತೆ. ಈ ಪ್ರಯತ್ನ 'ನ ಭೂತೋ' ಎಂದು ಹೆಮ್ಮೆಯಿಂದ ಹೇಳಬಲ್ಲೆ. ತಾಯಿ ಭುವನೇಶ್ವರಿ ಈ ಪ್ರಯತ್ನವನ್ನು ಹರಸಿ, ಮಂಗಳವುಂಟುಮಾಡಲೆಂದು ವಿನೀತ ಪ್ರಾರ್ಥನೆ ಸಲ್ಲಿಸುತ್ತೇನೆ.

ರಾ. ಕೃಷ್ಣ ಹೆಗಡೆ [illegible]

ಮುಖ್ಯಮಂತ್ರಿ

# ದೊಡ್ಡಬೆಲೆ ಆಚಾರ್ಯರು

ನಾನು ಇದುವರೆಗಿನ ನನ್ನ ಬದುಕಿನಲ್ಲಿ ನೋಡಿದ ಹಿರಿಯರಲ್ಲಿ ಒಬ್ಬರು, ಮೆಚ್ಚಿದ ಗುರುಗಳಲ್ಲಿ ಒಬ್ಬರು, ಎತ್ತರದ ಬದುಕಿನವರು, ಮರೆಯಲಾಗದವರು, ಮರೆಯಬಾರದವರು, ತಮ್ಮ ಹೆಸರನ್ನು ಸಾರ್ಥಕಪಡಿಸಿಕೊಂಡವರು ದೊಡ್ಡಬೆಲೆ ಲಕ್ಷ್ಮೀನರಸಿಂಹಾಚಾರ್ಯರು. ಆಚಾರ್ಯರೆಂದರೆ ಅನ್ವರ್ಥಕವೇ. ಹಳೆಯ ಗುರುಕುಲ ಪದ್ಧತಿಯಲ್ಲಿದ್ದರೆಂದು ನಾವು ಕೇಳುವ,ಓದಿ ತಿಳಿಯುವ ಆದರ್ಶಪ್ರಾಯ ಆಚಾರ್ಯರಿಗೆ ಹತ್ತಿರವಾದವರು – ಜೀವನ ಬೋಧನೆ ಬರವಣಿಗೆ ಶಿಷ್ಯಾನುರಾಗ, ಪ್ರವಚನ ವಾತ್ಸಲ್ಯ, ಶುಚಿ, ಚಾರಿತ್ರ್ಯ ಶುದ್ಧಿ–ಎಲ್ಲ ಹಳೆಯ ತಲೆಮಾರಿನ ಶಿಸ್ತು. ಇಂದು ಅದು ಯಾವುದೂ ಇಲ್ಲ, ಹಸಿರು ನೆನಪು ಒಂದೇ. ಆ ನೆನಪು ಮುಪ್ಪಿಲ್ಲದ್ದು. ನನಗೆ ನನ್ನಂಥ ಸಹಸ್ರ ಶಿಷ್ಯರಿಗೆ ಬತ್ತದ ತೊರೆ.

ಆಚಾರ್ಯರಲ್ಲಿ ಆಚಾರ್ಯರೆನಿಸಿಕೊಂಡ ದೊಲನರವರ ಬದುಕು ಆದರ್ಶಗೊಡ್ಡಿದ ರನ್ನಗನ್ನಡಿ. ನಡೆ–ನುಡಿಗಳಲ್ಲಿ ಅಂತರಕ್ಕೆ ಎಡೆಯಿಲ್ಲ. ಅವರು ಹಳಗನ್ನಡದ ಪುನರುತ್ಥಾನಕ್ಕೆಂದೇ ಹುಟ್ಟಿದವರು.

ತುಮಕೂರು ಜಿಲ್ಲೆ ಸಾಹಿತಿಗಳ ತವರು. ಆ ಜಿಲ್ಲೆಯ ಚೂಡಾಮಣಿ ದೊಲನರವರು, ಈ ಶತಮಾನದ ಆರಂಭ ದಶಕದಲ್ಲಿ ಹುಟ್ಟಿ

ದವರು. ಅವರ ಜನನ ೨೭-೧೦-೧೯೦೬, ಚಿಕ್ಕನಾಯಕನ ಹಳ್ಳಿ ಯಲ್ಲಿ. ದೊಡ್ಡಬೆಲೆ ಅವರ ಅಜ್ಜಂದಿರ ಊರೇ ಹೊರತು ಹುಟ್ಟಿ ಬೆಳೆದ ಗ್ರಾಮವಲ್ಲ. ತಂದೆಯವರಾದ ಶ್ಯಾಮಯ್ಯಂಗಾರ್ಯರು ಸಬ್ ರಿಜಿಸ್ಟ್ರಾರರ ಕಚೇರಿಯಲ್ಲಿ ಗುಮಾಸ್ತರು. ತಂದೆ ಸರಕಾರಿ ಚಾಕರಿ ಯಲ್ಲಿದ್ದುದರಿಂದ ಅವರೂ ಅನೇಕ ಊರುಗಳನ್ನು ಕಂಡರು. ಶ್ಯಾಮಯ್ಯಂಗಾರ್ಯರ ಮಗನಾದ್ದರಿಂದ ಬರಬೇಕಾದ 'ಎಸ್' ಎಂಬ ಆದ್ಯಕ್ಷರದ ಬದಲು 'ಎಲ್'ಎಂಬುದು ಸೇರಿಕೊಂಡದ್ದಕ್ಕೂ ಸ್ವಾರಸ್ಯ ಎದೆ. ತಂದೆ ಇಟ್ಟ ಹೆಸರು ಲಕ್ಷ್ಮೀನರಸಿಂಹಾಚಾರ್ಯ ಎಂದು. ಅದು ಅವರ ಮನೆದೇವರ ಹೆಸರೂ ಹೌದು. ಇದನ್ನು ಶಾಲಾಧ್ಯಾಪಕರು ಹಾಜರಿ ಪುಸ್ತಕದಲ್ಲಿ ಬರೆಯಲೂ, ನಿತ್ಯ ಕರೆಯಲೂ ಉದ್ದವಾಯಿ ತೆಂದು ಮೊಟಕುಗೊಳಿಸಿ ಡಿ. ಎಲ್. ನರಸಿಂಹಾಚಾರ್ ಎಂದು ಕರೆದರು. ಹೀಗಾಗಿ ಹುಟ್ಟೂರಾದ ಚಿಕ್ಕನಾಯಕನಹಳ್ಳಿಯ ಚಕಾರ ವಾಗಲಿ, ಶ್ಯಾಮಯ್ಯಂಗಾರ್ಯರ ಶಕಾರವಾಗಲಿ ಅವರ ಹೆಸರಿನ ಆದ್ಯಕ್ಷರ ದಲ್ಲಿ ಸೊಲ್ಲೆತ್ತಲಾಗಲಿಲ್ಲ.

ಈ ಹುಡುಗ ಉನ್ನತೋನ್ನತನಾಗಿ ಬೆಳೆದು ಮುಂದೆ ತಾನೂ ಕಲಿಸುವ ಓಜರಾದ ಮೇಲೆ ಶಿಷ್ಯರ ಬಾಯಲ್ಲಿ ಅವರ ಹೆಸರು ಮತ್ತೂ ಕಿರಿದಾಯಿತು, ದೊಲನ (ಡಿ.ಎಲ್.ಎನ್.) ಎಂದಾಯಿತು. ಈ ಮೂರಕ್ಷರಗಳಲಿ ಅವರ ಪ್ರಭಾವ ಪಡಿಮೂಡಿತ್ತು, ಕರಿಯು ಕನ್ನಡಿ ಯಲ್ಲಿ ಅಡಗಿತ್ತು, ಸಾಸುವೆಯ ಮೇಲೆ ಸಾಗರ ಹರಿದಿತ್ತು. ಅವರ ಹೆಸರು ಹೇಳಿದವರ ಹತ್ತಿರವೂ ಕುಟಿಲತೆ, ಕ್ರೌರ್ಯ, ದಗಲಬಾಜಿತನ, ಶಿಷ್ಯವಂಚನೆ ಸುಳಿಯದಂತಾಯಿತು. ದೊಡ್ಡಬೆಲೆ ನರಸಿಂಹಾ ಚಾರ್ಯರ ಮನೆಯ ಬಳಿ ಸಣ್ಣಬುದ್ಧಿಯ ಬೇಳೆ ಬೇಯದಂತಾಯಿತು. ಪಾವಗಡದಲ್ಲಿ ವಿದ್ಯಾರ್ಥಿಯಾಗಿ ಸೇರಿ, ಮಧುಗಿರಿ, ಶಿರಾಗಳಲ್ಲಿ ಓದು ಮುಂದುವರಿಯಿತು. ಅವರ ಅಜ್ಜಂದಿರಾದ ಅಣ್ಣಾಸ್ವಾಮಿಯವರು ಭಾರತವಾಚನದಲ್ಲಿ ಎತ್ತಿದ ಕೈ. ಮೊಮ್ಮಗ ಅದನ್ನು ಕೇಳಿ ಪ್ರಭಾ ವಿತರಾದರು. ಕೇವಲ ಹನ್ನೆರಡನೆಯ ಕಿರಿಯಂದು ಜೈಮಿನಿ ಭಾರತ

ವನ್ನು ಓದಿಮುಗಿಸಿದರು. ಮುಂದಿನ ವ್ಯಾಸಂಗ ತುಮಕೂರು. ಪ್ರೌಢ ಶಾಲೆ ದಾಟುವ ವೇಳೆಗೆ ರನ್ನನ ಗದಾಯುದ್ಧ, ನಾಗವರ್ಮನ ಛಂದೋಂಬುಧಿ ಹಾಗೂ ಪದ್ಯಸಾರದ ಎರಡನೆಯ ಭಾಗ–ಇಷ್ಟನ್ನೂ ಪಠಿಸಿದ್ದರು. ಆ ಹೊತ್ತಿಗೇ ಓಲೆಗರಿಗಳತ್ತ ಗಮನ ಹರಿಯಿತು. ತುಮಕೂರು ಪ್ರೌಢಶಾಲೆಯ ಇಂಗ್ಲಿಷ್-ಕನ್ನಡ ಲೇಖನಗಳ 'ಸ್ಕೂಲ್ ಫೋಕ್' ಪತ್ರಿಕೆಯಲ್ಲಿ ಇಂಗ್ಲಿಷ್-ಕನ್ನಡ ಎರಡರಲ್ಲೂ ಲೇಖನ ಬರೆದರು. ಇದೇ ಅವಧಿಯಲ್ಲಿ ಕೊಂಚ ಸಂಸ್ಕೃತವನ್ನೂ ಕಲಿತರು. ೧೯೨೪ರಲ್ಲಿ ಎಂಟ್ರೆನ್ಸ್ ಪರೀಕ್ಷೆಯಲ್ಲಿ ಉತ್ತೀರ್ಣರಾದರು.

ದೊಲನರವರು ಕಾಲೇಜಿನಲ್ಲಿ ಪದವಿಯ ಹಂತದವರೆಗೆ ಕಲಿತದ್ದು ವಿಜ್ಞಾನವನ್ನು. ೧೯೨೪ರಿಂದ ೧೯೨೮ರವರೆಗೆ ದಕ್ಷಿಣ ಭಾರತದ ಹೆಸರಾಂತ ಸೆಂಟ್ರಲ್ ಕಾಲೇಜಿನಲ್ಲಿ ಭೌತಶಾಸ್ತ್ರ, ಗಣಿತ ಶಾಸ್ತ್ರ ಮತ್ತು ಐಚ್ಛಿಕ ಕನ್ನಡ ಓದಿದರು. ವಿಜ್ಞಾನ ಓದಿದ ಪದವೀಧರರಿಗೂ ಬಿ. ಎ. ಎಂಬ ಎರಡಕ್ಷರ ಕೊಡುತ್ತಿದ್ದ ಕಾಲ. ಬಿ. ಎ. ಆದ ಮೇಲೆ ಮುಂದೇನು ಎಂಬುದರಲ್ಲಿ ಆದೇ ತಾನೆ, ಇವರಿಗೆ, ಇವರಂಥವರಿಗಾಗಿ ತೆರೆಯಿತೊ ಎಂಬಂತೆ ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಆರಂಭಗೊಂಡ ಕನ್ನಡ ಎಂ. ಎ. ತರಗತಿ ಕೈಬೀಸಿ ಕರೆಯಿತು. ಬುದ್ಧಿ ಬಂದಾರಭ್ಯ ಕನ್ನಡ ಗ್ರಂಥಗಳನ್ನು ಹೆಚ್ಚು ಮುತುವರ್ಜಿಯಿಂದ, ಮಾಮೂಲೀ ಓದಿಗಿಂತ ಬೇರೆಯಾದ ರೀತಿಯಲ್ಲಿ ಓದಿ ತನ್ನ ಒಲವು ಯಾವುದು, ಎಲ್ಲಿ ಎಂಬುದನ್ನು ಗುರುತಿಸಿದ್ದ ಮನಸ್ಸಿಗೆ ಮಹಾರಾಜಾ ಕಾಲೇಜು ಆಡುಂಬೊಲವಾಯಿತು. ಅವರು ನೀರಿಗೆ ಬಿಟ್ಟ ಮೀನಾದರು. ಮೈಸೂರೇ ಅವರ ಕಡೆಯ ಉಸಿರು ಇರುವವರೆಗೆ ನಡೆಮುಡಿ ಹಾಸಿತ್ತು, ಅವರನ್ನು ತಬ್ಬಿತ್ತು. ಟಿ.ಎಸ್. ವೆಂಕಣ್ಣಯ್ಯ, ಬಿ.ಎಂ. ಶ್ರೀಕಂಠಯ್ಯ, ಎ. ಆರ್. ಕೃಷ್ಣಶಾಸ್ತ್ರಿ ಮುಂತಾದವರ ಮಾರ್ಗದರ್ಶನದಲ್ಲಿ ಸ್ವಪಥವನ್ನು ಕಂಡುಕೊಂಡರು. ನಡುಗನ್ನಡ, ಹಳಗನ್ನಡ ಕವಿಗಳ ಒಡನಾಡಿ ಒಡನೋಡಿ ಒಡೆತನ ಬೆಳೆಸಿಕೊಂಡರು. ಹಳಗನ್ನಡದೊಡೆಯರಾದರು. ಓಲೆಗರಿ ಗ್ರಂಥ ಪಠನ, ಮುದ್ರಿತ

ಪುಸ್ತಕ ವಾಚನದಂತೆ ಅವರಿಗೆ ವಾಚೋವಿಧೇಯವಾಯಿತು, ಅಪ್ರಕಟಿತ ಹಸ್ತಪ್ರತಿ ಭಂಡಾರ ಅವರಿಗೆ ಕೈವೊಕ್ಕ ನಿಧಿಯಾಯಿತು. ೧೯೨೯ರಲ್ಲಿ ಕನ್ನಡ ಎಂ. ಎ. ಸ್ನಾತಕೋತ್ತರ ಪದವಿ ಸುವರ್ಣಪದಕಗಳೊಡನೆ ಕೊರಳಿಗೆ ಏರಿತು. ಪ್ರಥಮಶ್ರೇಣಿ ಅನಾಯಾಸವಾಗಿ ಬಂದಿತ್ತು. ವಚನ ಸಾಹಿತ್ಯದ ಮೇಲೊಂದು ವಿದ್ವತ್ ಪ್ರಬಂಧವನ್ನು ಸಿದ್ಧಪಡಿಸಿ ಮೈಸೂರು ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದರು. ಎಂಟು ತಿಂಗಳ ಅವಧಿಯಲ್ಲಿ ಬರೆದೊಪ್ಪಿಸಿದ ಆ ಪ್ರಬಂಧ ಅವರ ಮುಂದಿನ ಸಾಧನೆಗೆ ಕನ್ನಡಿ ಹಿಡಿದಿತ್ತು; ಬರೆದರೆ ಗುರು ಮೆಚ್ಚಿ ಅಹುದು ಎನ್ನುವಂಥ ವಿದ್ವತ್ಕಾರ್ಯವಾಗಿತ್ತು, ಬೆಳೆಯುವ ಪೈರು ಮೊಳಕೆಯಲ್ಲಿ ತನ್ನ ಐಸಿರಿ ತೋರಿತ್ತು.

ಮುಂದಿನ ಬದುಕು ಬೇರೊಂದು ದಾರಿಗೆ ಹೊರಳಲು ಬೇಕಾದ ಜ್ಞಾನದ ಬುತ್ತಿ ಕಟ್ಟುವುದಕ್ಕೆ ಕಾರಣವಾಯಿತು. ಮೈಸೂರಿನ ಪ್ರಾಚ್ಯವಸ್ತು ಸಂಶೋಧನ ಸಂಸ್ಥೆಯಲ್ಲಿ ಅವರಿಗೆ ಕನ್ನಡ ಪಂಡಿತರಾಗಿ ನೇಮಕವಾಯಿತು. ಅವರು ಸಾರಸ್ವತ ಭಂಡಾರದ ಮುದ್ರೆಯನ್ನು ಒಡೆದರು. ಅಸ್ಪೃಶ್ಯವಾಗಿದ್ದ ತಾಳೆಗರಿ ಕಟ್ಟು ಕಳಚಿದರು. ಧೂಳು ತುಂಬಿ ಮಲಧಾರಿಗಳಾಗಿದ್ದ ಹಸ್ತಪ್ರತಿಗಳಿಗೆ ಸ್ನಾನ ಮಾಡಿಸಿದರು. ಶಿಲೆಯಾಗಿ ಮೌನವೇದನೆಯಲ್ಲಿದ್ದ ಹಳಗನ್ನಡ ಗ್ರಂಥಗಳನ್ನು ಮುಟ್ಟಿ ಸಪ್ರಾಣಿಸಿದರು. ಅನಾಥ-ಅಜ್ಞಾತ ಕವಿಗಳು ಶಬ್ದಗಳೂ ಸನಾಥ-ಸುಜ್ಞಾತರಾದರು. ಅವರ ಪಾಲಿಗೆ ಪ್ರಾಚ್ಯ ಭಂಡಾರ ಅಕ್ಷಯ ಭಂಡಾರವಾಯಿತು. ಕಾಲಪುರುಷನ ರಹಸ್ಯಗಳನ್ನು ಭೇದಿಸಿ ಅನಾವರಣ ಮಾಡಿ ಸತ್ತ ಕವಿಗಳನ್ನು ಪಾಂಡಿತ್ಯದ ಕಾಯಕಲ್ಪದಿಂದ ಎದ್ದುಕೂಡುವಂತೆ ಮಾಡಿದರು.

ಅವರ ವಿದ್ವತ್ ಬತ್ತಳಿಕೆಯಿಂದ ಒಂದೊಂದೇ ಶಬ್ದ ಹೊರಬರತೊಡಗಿತು. ಅವರ ಸಂಶೋಧನ ಬುಟ್ಟಿಯಿಂದ ಒಬ್ಬೊಬ್ಬರೇ ಹೊರಬರತೊಡಗಿದರು. ಹಳಗನ್ನಡ ಸಾಹಿತ್ಯ ತನ್ನ ಬೆಡಗನ್ನು

ಅವರಿಗೆ ಒಪ್ಪಿಸಿತು, ಅವರು ಆಡಿಸಿದಂತೆ ಆಡಿತು. ಅವರೊಲಿದರೆ ಕವಿ ಕೊನರುವಂತಾಯಿತು. ಬೆಳಕು ಬೇಕೆಂದು ಹಳೆಯ ಕಾವ್ಯಗಳು ಅವರಿಗೆ ದುಂಬಾಲು ಬಿದ್ದುವು. ಅವರ ಮಾತು, ಕತೆ, ಸಂಭಾಷಣೆ, ಹೃದಯ ಸಂವಾದ ಈ ಗತಕಾಲದವರೊಡನೆ, ಇಷ್ಟು ಹಿನ್ನೆಲೆ ಹೊತ್ತುಬಂದ ಜಂಗಮಜ್ಞಾನಿಗೆ ೧೯೩೨ರಿಂದ ಮೈಸೂರು ಮಹಾ ರಾಜಾ ಕಾಲೇಜು ನೀರು ನೆರಳು ನೀಡಿತು. ಏಳು ವರ್ಷ ಕನ್ನಡ ಪಂಡಿತರಾದರು. ವಿಪುಲವಾದ, ಪುಷ್ಕಳವಾದ ವಿದ್ವತ್ತಿನಿಂದ ಪಂಡಿತ ಶಬ್ದದ ಮೂಲಾರ್ಥವನ್ನು ಸಾಕ್ಷಾತ್ಕಾರಗೊಳಿಸಿದರು. ೧೯೩೯ರಲ್ಲಿ ಮೈಸೂರಿನ ಇಂಟರ್ ಮೀಡಿಯೆಟ್ ಕಾಲೇಜಿನಲ್ಲಿ (ಯುವರಾಜಾ ಕಾಲೇಜು) ಕನ್ನಡ ಅಧ್ಯಾಪಕರಾದರು. ಮುಂದೆ ಉಪಪ್ರಾಧ್ಯಾಪಕ ರಾಗಿ ಸ್ವಲ್ಪಕಾಲ ೧೯೪೫ರಿಂದ ೧೯೪೮ರವರೆಗೆ ಬೆಂಗಳೂರಿಗೆ ಸೆಂಟ್ರಲ್ ಕಾಲೇಜಿಗೆ ವರ್ಗ. ಮತ್ತೆ ೧೯೪೮ರಿಂದ ೧೯೬೪ರವರೆಗೆ ಮಹಾರಾಜಾ ಕಾಲೇಜಿನಲ್ಲಿ ಬೋಧನೆ. ನಡುವೆ ನಾಲ್ಕು ವರ್ಷ ಕನ್ನಡ ನಿಘಂಟಿನ ಸಂಪಾದಕರಾಗಿ ಕಾರ್ಯ ನಿರ್ವಹಣೆ, ಬೆಂಗಳೂರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ. ೧೯೬೨ರಲ್ಲಿ ನಿವೃತ್ತರಾದ ಮೇಲೆ ಸಾಯುವವರೆಗೆ (೭-೫-೧೯೭೧) ಅದೇ ಕನ್ನಡ ನಿಘಂಟಿನ ಉಪಾಧ್ಯಕ್ಷ ರಾಗಿ, ಅಧ್ಯಕ್ಷರಾಗಿ ಸೇವೆ ಸಲ್ಲಿಸಿದರು. ಸೇವೆ ಎಂಬ ಶಬ್ದ ಸವೆದ ನಾಣ್ಯ, ಬಹುಜನರ ವಿಚಾರದಲ್ಲಿ; ಅವರ ವಿಚಾರದಲ್ಲಿ ಅದು ಚಲಾ ವಣೆಯ ಮನ್ನಣೆಯ ನಾಣ್ಯ. ನಿಘಂಟು ಅವರ ಜೀವದುಸಿರು, ಪ್ರಾಣ. ಶಬ್ದವಿಹಾರ ಅವರ ನಿತ್ಯನೇಮ. ಅದು ಅಂಬಲಿಯ ನೇಮವಲ್ಲ, ಹಾಲ ನೇಮವಲ್ಲ. ಕೇವಲ ಶಬ್ದನೇಮ. ಕಾಚಾ ವಾಚಾ ಮನಸಾ ಕನ್ನಡ ಕಾವ್ಯಗಳಲ್ಲಿ ನಿಮಗ್ನರಾಗಿ ತಮ್ಮನ್ನು ತಾವು ತೊಡಗಿಸಿ ಕೊಂಡರು, ಸಮರ್ಪಿಸಿಕೊಂಡರು.

ದೊಲನ ವಿಜ್ಞಾನದ ವಿದ್ಯಾರ್ಥಿಯಾಗಿ ಕನ್ನಡಕ್ಕೆ ಬಂದವರು; ಇಲ್ಲಿನ ಗೊಡ್ಡುತನವನ್ನು ಗುಡಿಸಿ ಹಾಕಿದರು. ಜಡ್ಡುಗಟ್ಟಿದ ಪದ್ಧತಿಗೆ ಚುರುಕು ಮುಟ್ಟಿಸಿದರು. ಹೊಸ ಹೊಸ ಕ್ಷಿತಿಜ ತೆರೆದರು. ಹಳಗನ್ನಡ

ಗ್ರಂಥ ಸಂಪಾದನೆಗೆ ಕೊರತೆಗಳನ್ನು ನಿವಾರಿಸಿ ಒಂದು ಹೆದ್ದಾರಿ ನಿರ್ಮಿಸಿದರು. ಅದಕ್ಕೊಂದು ಲಕ್ಷಣ ಹೇಳಿ ಲಕ್ಷ್ಯಗಳನ್ನು ಕೊಟ್ಟು ವಿದ್ವಾಂಸರ ಲಕ್ಷ್ಯ ಸೆಳೆದರು. ಸಂಶೋಧಕರಿಗೆ ಮರ್ಯಾದೆ ತಂದು ಕೊಟ್ಟರು. ಸಂಶೋಧನೆ ಎನ್ನುವುದು ಬೀದಿವರಿಯ ಗೊರವರ ಡುಂಡುಚಿಯಲ್ಲ, ಕಪೋಲಕಲ್ಪಿತ ಕಗ್ಗವಲ್ಲ, ವಿಶೇಷ ಅರ್ಹತೆ, ಅದ್ಯತೆ ಇರುವ, ಬಲ್ಲಿದರ– ಮೇಧಾವಿಗಳ ಕಾರ್ಯಕ್ಷೇತ್ರವೆಂಬ ಗೌರವ ಗಳಿಸಿ ಕೊಟ್ಟರು. ವೈಜ್ಞಾನಿಕ ದೃಷ್ಟಿಯನ್ನು ಹೊಂದಿ, ವೈಚಾರಿಕ ಪ್ರಜ್ಞೆಯನ್ನು ಮೈಗೂಡಿಸಿಕೊಂಡು ಶುಷ್ಕ ಪಾಂಡಿತ್ಯವನ್ನು ರಘಾಡಿಸಿ ಅದಕ್ಕೊಂದು ಹೊಸ ತಿರುವು ಕೊಟ್ಟರು. ಇಂಗ್ಲಿಷ್, ಸಂಸ್ಕೃತ, ತಮಿಳು, ಭಾಷಾ ಪರಿಚಯದತ್ತವಾದ ಹೊಸ ತಿಳುವಳಿಕೆ ಬೆಳಕಿನಲ್ಲಿ ಹಳಗನ್ನಡ ಕವಿಗಳನ್ನು, ಕಾವ್ಯಗಳನ್ನು ಹಿಡಿದುನೋಡಿದರು. ಅವರ ನಿಜವಾದ ಬಣ್ಣವನ್ನು, ಸತ್ವವನು ವಸ್ತುನಿಷ್ಠ ದೃಷ್ಟಿಯಿಂದ ನೋಡಿ ನಲಿದರು. ಅವರ ಪ್ರಾಮಾಣಿಕ, ಪಾರದರ್ಶಕ ಹಾಗೂ ಆರೋಗ್ಯಕರ ಬರವಣಿಗೆಯ ರುಚಿ ಎಂದೂ ಚಪ್ಪರಿಸುವಂತಹುದು. ಅವರ ಪಾಂಡಿತ್ಯ ಪ್ರಖರತೆಗೆ ಮೆಚ್ಚಿ ತಲೆದೂಗದವರಿಲ್ಲ. ಪ್ರಬುದ್ಧ ಕರ್ನಾಟಕವನ್ನು ತಮ್ಮ ಸಂಪಾದಕ ಹೊಣೆಯಲ್ಲಿ ಹಲವು ವರ್ಷ ನಿರ್ವಹಿಸಿದರು. ಕನ್ನಡ ನಿಘಂಟಿಗೆ ತಮ್ಮ ಜ್ಞಾನ ಸಂಪಾದನೆಯ ಸಾರವನ್ನು ಸುರಿದರು. ಅಭಿಷೇಕ ಮಾಡಿದರು. ಸಹಸ್ರ ಸಂಖ್ಯೆಯ ವಿದ್ಯಾರ್ಥಿಗಳಿಗೆ ಕನ್ನಡ ಸಾಹಿತ್ಯದ ದರ್ಶನ ಮಾಡಿಸಿದರು. ಅವರ ಸಿದ್ಧಿ ಸಾಧನೆಗಳನ್ನು ಅವರು ಪಡೆದ ಪದವಿ ಪ್ರಶಸ್ತಿಗಳಿಂದ ಅಳೆಯಬೇಕಾದ್ದಿಲ್ಲ. ಅವರ ಬರವಣಿಗೆಯೇ ತಲಸ್ಪರ್ಶಿಯಾದ ವಿದ್ವತ್ತಿನ ಆಳ ನಿರಾಳದ ನಗಾರಿ ಬಾರಿಸುತ್ತದೆ. ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದವರಲ್ಲಿ (ಅವರ ನಿಡುಬಾಳಿನ ಸನ್ಮಿತ್ರ ತೀನಂಶ್ರೀ ಅವರೂ ಅಷ್ಟೆ). ಹಾಗೆಂದು ಬಂದ ಗೌರವ ಕಡಮೆಯೇನಲ್ಲ. ೧೯೬೦ರಲ್ಲಿ ದೂರದ ಬೀದರ್‌ನಲ್ಲಿ ನಡೆದ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. ೧೯೭೦ರಲ್ಲಿ ಮೈಸೂರು ವಿಶ್ವವಿದ್ಯಾಲಯ ಗೌರವ ಡಾಕ್ಟರೇಟ್ ಪಡೆದರು. ವಿದ್ಯಾರ್ಥಿ ವರ್ಗ, ಅಭಿಮಾನಿ ಬಳಗ 'ಉಪಾಯನ' – 'ಜ್ಞಾನೋಪಾಸಕ' ಸಂಭಾವನೆಯ ಗ್ರಂಥಗಳನ್ನಿತ್ತು ಹರ್ಷಿಸಿತು. ಮುಕ್ತ

ಹೃದಯದ ಮಹಾನುಭಾವರೆಂದು ಮುಗ್ಧ ಶಿಷ್ಯ ಸಮುದಾಯ ಕೈವಾರಿಸಿತು. ದೊಲನ ಎಂಬುದು ಈ ಶತಮಾನದ ಕನ್ನಡ ವಿದ್ವತ್ ಕ್ಷೇತ್ರದ ಉದ್ದಗಲಕ್ಕೂ ತಿಳಿವೆಳಗಳನ್ನು ಚೆಲ್ಲಿದ ದೀಪಸ್ತಂಭ.

ದೊಲನರವರ ಒಟ್ಟು ಲೇಖನ ರಾಶಿಯಲ್ಲಿ ಕೆಲವನ್ನು ಆರಿಸಿ ಸಂಗ್ರಹ ಸಿದ್ಧಪಡಿಸುವುದು ಸುಲಭವೂ ಹೌದು, ಕಷ್ಟವೂ ಹೌದು. ಸುಲಭ ಹೇಗೆಂದರೆ, ಯಾವುದನ್ನು ಆರಿಸಿಕೊಳ್ಳಬೇಕೆಂದು ನಿರ್ಧರಿಸಲು ಯಾವ ಕಷ್ಟವೂ ಇಲ್ಲ – ಯಾವುದನ್ನು ಎತ್ತಿಕೊಂಡರೂ ಅದು ಉತ್ಕೃಷ್ಟವೇ ಆಗಿರುತ್ತದೆ. ಕಷ್ಟ ಯಾವುದೆಂದರೆ : ಯಾವುದನ್ನು ಬಿಡುವುದು ಎಂದು ತೀರ್ಮಾನಿಸುವುದು. ಅವರ ಹಾಳತವಾದ ಬರವಣಿಗೆಯ ಹದದ ಜಾಡು ಹಿಡಿದು ನೋಡಿ ಆಯ್ಕೆಯನ್ನು ನಿಶ್ಚಯಿಸಬೇಕಾಗುತ್ತದೆ. ಅವರ ಇತರ, ಅಂದರೆ ಈ ಸಂಗ್ರಹದಲ್ಲಿ ಸೇರಿರದ, ಬರವಣಿಗೆಯನ್ನು ಚೆನ್ನಾಗಿ ಬಲ್ಲವರಿಗೆ ಒಮ್ಮೊಮ್ಮೆ ಇಲ್ಲಿನ ಆಯ್ಕೆ ಹಾಗೂ ಸಂಯೋಜನೆ ಸಂಪೂರ್ಣ ತೃಪ್ತಿ ಕೊಡದಿರಬಹುದು. "ಇದರ ಬದಲು ಆ ಲೇಖನ ಸೇರಿಸಬಹುದಾಗಿತ್ತಲ್ಲವೇ? ಈ ಲೇಖನವನ್ನು ಬಿಟ್ಟಿದ್ದು ಸರಿಯಾಯಿತೇ?" ಎಂದೆಲ್ಲಾ ಹೊಳೆಯಬಹುದು. ಇದು ಸಹಜವೇ. ದೊಲನರವರ ಬರವಣಿಗೆಯೇ ಅಂತಹುದು; ತೂಕ, ಸತ್ವ, ಮೌಲಿಕತೆ, ಹರಹು, ಹವಣು ಅಂತಹುದು. ಆದರೆ ಇಂಥ ಅಭಿಪ್ರಾಯ ಬೇರೆ ಯಾರೇ ಸಿದ್ಧಪಡಿಸಿದ ಸಂಪಾದಿತ ಕೃತಿಗೂ ಅನ್ವಯಿಸುವ ಮಾತು. ಆದಷ್ಟೂ ತನ್ನ ಇತಿಮಿತಿಗಳನ್ನು ಅರಿತು ಈ ಸಂಗ್ರಹ ಕೇವಲ ವಸ್ತುನಿಷ್ಠವಾಗಿರುವಂತೆ ಪ್ರಯತ್ನಿಸಿದ್ದೇನೆ. ಓದಿದಾಗ ದೊಲನರವರ ದೊಡ್ಡ ವ್ಯಕ್ತಿತ್ವ, ಬಹುಮುಖ ಪಾಂಡಿತ್ಯ ವ್ಯಾಸಂಗದ ವ್ಯಾಪ್ತಿ ಪರಿಚಯವಾಗಬೇಕೆಂಬ ಆಶಯದಿಂದ ಸಿದ್ಧಪಡಿಸಿದ್ದೇನೆ. ಈ ಪುಸ್ತಕ ಓದಿದವರಲ್ಲಿ ಇಂಥ ಭಾವನೆ ಮೂಡಿದರೆ, ನನ್ನ ಉದ್ದೇಶ ಈಡೇರಿದಂತೆ.

— ಕಮಲಾ ಹಂಪನಾ

## ವಡ್ಡಾರಾಧನೆ : ಪೀಠಿಕೆ*

ಮೈಸೂರಿನ ಪ್ರಾಚ್ಯ ಪುಸ್ತಕ ಭಂಡಾರದಲ್ಲಿ ವೊಡ್ಡಾರಾಧಣ[1] ಎಂಬ ಹೆಸರುಳ್ಳ ೪೧೧೫ ಸಂಖ್ಯೆಯುಳ್ಳ ಒಂದು ಓಲೆಯ ಪುಸ್ತಕವಿರುವುದು. ಈ ಗ್ರಂಥವನ್ನು ಪ್ರತಿಮಾಡಿದಾತನು ಮಲ್ಲರಸನೆಂಬವನು. ಆತನು ಆ ಪುಸ್ತಕದ ಕೊನೆಯ ಭಾಗದಲ್ಲಿ ಹೀಗೆಂದು ಬರೆದಿರುವನು ;

"ಈ ಪೇಳ್ದ ಪತ್ತೊಂಭತ್ತು ಕಥೆಗ... ಟ್ಯಾಚಾರ್ಯರು ಪೇಳ್ದಾ ವೊಡ್ಡಾರಾಧಣಂ ಸಂಪೂರ್ಣಂ. ಶುಭಮಸ್ತು. ಆನಂದ ಸಂವತ್ಸರದ ಕಾರ್ತೀಕ ಬಹುಳ ಪಾಡ್ಯ ಸೋಮವಾರದಲು ಮಲ್ಲರಸನು ಬರೆದ ವೊಡ್ಡಾರಾಧನೆ ಸಮಾಪ್ತಂ".

ಇಲ್ಲಿ ಹೇಳಿರುವ ಆನಂದ ಸಂವತ್ಸರವು ಯಾವ ಆನಂದ ಸಂವತ್ಸರವೊ ಅದು ಖಚಿತವಾಗಿ ಗೊತ್ತಾಗುವುದಿಲ್ಲ. ಆದರೆ ಡಾ॥ ಸ್ವಾಮಿಕಣ್ಣು ಪಿಳ್ಳೆ

---

*ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ, ಅಕ್ಟೋಬರ್ ೧೯೩೧.

[1]ಇದು ಸಂಸ್ಕೃತದ 'ವೃದ್ಧಾರಾಧನ', ಅಥವಾ "ಬೃಹದಾರಾಧನ" ಎಂಬುದರ ಪ್ರಾಕೃತ ರೂಪವಿರಬಹುದು. [ಆರಾಧನ—(ಧಾತು) ರಾಧ—ಸಾಧ, ಸಂಸಿದ್ಧಾ—ಸಿದ್ಧಿ, ಪ್ರಾಪ್ತಿ, ಸಾಧನೆ—ಇತ್ಯಾದಿ]

ಈ ಗ್ರಂಥವನ್ನು ರಚಿಸಿದವನು ಯಾರೆಂಬುದನ್ನು ಇನ್ನು ಕಂಡುಹಿಡಿಯ ಬೇಕಾಗಿದೆ. ಓಲೆಯ ಪ್ರತಿಯಲ್ಲಿ ೪ ಅಕ್ಷರಗಳಷ್ಟು ಭಾಗವು ಒಡೆದು ಹೋಗಿರುವುದರಿಂದ ಗ್ರಂಥವನ್ನು ಹೇಳಿದವನ ಹೆಸರು ಪೂರ್ತಿಯಾಗಿ ತಿಳಿದು ಬರುವುದಿಲ್ಲ. "ಟ್ಯಾಚಾರ್ಯ" ಎಂದು ಮಾತ್ರ ಹೆಸರಿನ ಕೊನೆಯ ಭಾಗವು ಕಂಡುಬರುತ್ತದೆ. ಈತನ ಪೂರ್ಣವಾದ ಹೆಸರು ಯಾವುದಿರಬೇಕು ?

ಗತಿಸಿದ ಡಾ॥ ಫ್ಲೀಟ್ ಅವರು ತಮ್ಮ ಒಂದು ಲೇಖನದಲ್ಲಿ,[3] "ನಿಸಿಧಿಗೆ" ಮತ್ತು 'ಗುಡ್ಡ' ಎಂಬೆರಡು ಕನ್ನಡ ಪದಗಳ ಅರ್ಥವನ್ನು ಚರ್ಚಿಸಿರುತ್ತಾರೆ. ಈ ಲೇಖನದಲ್ಲಿ ಪ್ರೊ॥ ಕೆ. ಬಿ. ಪಾಠಕರವರು 'ನಿಸಿಧಿ' ಎಂಬ ಶಬ್ದವು ಪ್ರಯುಕ್ತವಾಗಿರುವ ಒಂದು ವಾಕ್ಯವನ್ನು ತಮ್ಮ ದೃಷ್ಟಿಗೆ ತಂದರೆಂದೂ, ಆ ವಾಕ್ಯವು "ಉಪಸರ್ಗ ಕೇವಲಿಗಳ ಕಥೆ" ಎಂಬ ಗ್ರಂಥದಲ್ಲಿ ದೊರೆಯುವು ದೆಂದೂ ಡಾ॥ ಫ್ಲೀಟ್ ಅವರು ಬರೆದಿರುವರು. ಆ ವಾಕ್ಯವು ಹೀಗಿದೆ :

"ರಿಸಿ ಸಮುದಾಯಮೆಲ್ಲಂ ದಕ್ಷಿಣಾಪಥದಿಂ ಬಂದು ಭಟಾರರ ನಿಸಿಧಿ ಯನೆಯ್ದಿದಾಗಳ್"

ಈ ವಾಕ್ಯವು ವೊಡ್ಡಾರಾಧಣದಲ್ಲಿರುವ 'ಭದ್ರಬಾಹು ಭಟ್ಟಾರರ ಕಥೆ" ಯಲ್ಲಿ ದೊರೆಯುತ್ತದೆ. ಇದನ್ನು ಅದರ ಹಿಂದೆ ಮುಂದೆ ಇರುವ ಭಾಗ ಗಳೊಡನೆ ಇಲ್ಲಿ ಬರೆಯಬಹುದು :

"ಬಡಗ ನಾಡ ಪಸವು ತಿಳಿದುದೆಂಬುದನಾ ನಾಡಿಂದಂ ಬಂದರ್ ಪೇಟಿ ಕೇಳ್ದದಿದು ಭಟಾರರ ನಿಸಿಧಿಗೆಯುಂ ಬಂದಿಸಿ ಪೋಪಮೆಂದು ವಿಶಾಖಾಚಾರ್ಯರ್ ಮೊದಲಾಗೊಡೆಯ ರಿಸಿಸಮುದಾಯಮೆಲ್ಲಂ ದಕ್ಷಿಣಾಪಥದಿಂದಂ ಬಂದು ಭಟಾರರ ನಿಸಿಧಿಯನೆಯ್ದಿದಾಗಳ್ ಚಂದ್ರಗುಪ್ತ ಮುನಿಯುಂ ರಿಸಿಯರ್ಕಳ ಬರವಂ ಕಂಡಿದಿರಂ ಬಂದು ರಿಸಿಸಮುದಾಯಮೆಲ್ಲಮಂ ಬಂದಿಸಿದೊಡೆ ರಿಸಿಯರ್ಕಳಿಂತೆಂದು ಬಗೆದರ್."

---

[3]The Indian Antiquary, Vol. XII, P. 99.

ಇದರಿಂದ ಪ್ರೊಡ್ಡಾರಾಧಣಕ್ಕೆ 'ಉಪಸರ್ಗ ಕೇವಲಿಗಳ ಕಥೆ' ಎಂಬ ಮತ್ತೊಂದು ಹೆಸರು ಇದ್ದಿತೆಂಬುದು ಸ್ಪಷ್ಟವಾಗದೆ ಇರಲಾರದು. ಅಲ್ಲದೆ ಆ ಹೆಸರೇನೂ ಈ ಗ್ರಂಥಕ್ಕೆ ಅನುಚಿತವಲ್ಲ. ಪ್ರತಿಯೊಂದು ಕಥೆಯ ನಾಯಕನಾದ ಒಬ್ಬೊಬ್ಬ ಜೈನ ಸಂನ್ಯಾಸಿಯೂ ಯಾವುದೋ ಒಂದು ವಿಧವಾದ ಉಪಸರ್ಗಕ್ಕೆ[4] ಕಟ್ಟುಬಿದ್ದು ಅದರಿಂದಲೇ ಸತ್ತು ಸ್ವರ್ಗ ಸುಖವನ್ನು ಸಂಪಾದಿಸುವನು. ಆ ಚರಿತ್ರೆಯು ಈ ಕಥೆಗಳಲ್ಲಿ ಅಡಗಿರುವುದರಿಂದ ಇದನ್ನು 'ಉಪಸರ್ಗ ಕೇವಲಿಗಳ ಕಥೆ' ಎಂದು ಕರೆದಿರುವುದು ಉಚಿತವಾಗಿಯೇ ಇರುವುದು.

ಪ್ರೊ॥ ಕೆ. ಬಿ. ಪಾಠಕರವರು ತೊಱೆಗಲ್ಲಿನ ಒಂದು ಕನ್ನಡ ಶಾಸನವನ್ನು ಕುರಿತು ಒಂದು ಲೇಖನವನ್ನು[5] ಬರೆದಿದ್ದಾರೆ. ಈ ಲೇಖನದಲ್ಲಿ ಅವರು 'ಪಂಚ ಮಹಾಶಬ್ದ' ಎಂಬ ಪದದ ಅರ್ಥದ ವಿಚಾರವಾಗಿ ಸ್ವಲ್ಪ ವಿವರಣೆಯನ್ನು ಬರೆದಿರುವರು. ಹಾಗೆ ಬರೆಯುವಂದು ರೇವಾಕೋಟ್ಯಾಚಾರ್ಯನ ಗ್ರಂಥದಲ್ಲಿಯ ಈ ಕೆಳಗೆ ಕಾಣಿಸಿರುವ ಭಾಗವನ್ನು ಎತ್ತಿ ಬರೆದಿರುತ್ತಾರೆ :

"ಪೆಂಡವಾಸದ ಸೂಳೆಯರ್ ಪೆಜಿಗನೇಱ ಇಕ್ಕೆಲದೊಳಂ ಚಾಮರಂಗಳನಿಕ್ಕುತುಂ ಬರೆ ಬೆಳ್ಗೊಡೆಗಳುಂ[6] ಪಾಳಿಕೇತನ ಧ್ವಜಂಗಳುಂ ಚಂದ್ರಾದಿತ್ಯರ್ಕಳುಂ ಸಿಂಹವ್ಯಾಘ್ರ ಮಕರ ಮತ್ಸ್ಯ ಧ್ವಜಂಗಳುಂ ಮೊದಲಾಗೊಡೆಯ ರಾಜ ಚಿಹ್ನಂಗಳುಂ ಮುಂದೆ ಪರಿಯೆ ಪಂಚ ಮಹಾ ಶಬ್ದಂಗಳುಂ ಬದ್ದವಣದ ಪಟಿಗಳುಂ ಬಾಜಿಸೆ ವಂದಿಮಾಗಧ ಯಾಚಕ ಪ್ರಭೃತಿ ಜನಂಗಳ್ಗಂ ದಿನಾನಾಥರ್ಕಳ್ಗಂ ತುಷ್ಟಿದಾನಮಂ

---

[4]'ಉಪಸರ್ಗ' ಎಂಬುದು ಜೈನಧರ್ಮದ ಪಾರಿಭಾಷಿಕ ಶಬ್ದ. ದೇವನಾರಕತಿರ್ಯಙ್ಮನುಷ್ಯರಿಂದುಂಟಾಗುವ ಹಿಂಸೆ, ತೊಂದರೆ, ಕೇಡು, ಅಟ್ಟುಳಿ ಎಂದು ಈ ಪದಕ್ಕೆ ಅರ್ಥ.

[5]The Indian Antiquary, Vol. XII, P. 96.

[6]ಕವಿಚರಿತೆಯಲ್ಲಿ (೧.೨೮೨) 'ಬೆಳ್ಗೊಡೆಗೆ' ಎಂದು ತಪ್ಪಾಗಿ ಅಚ್ಚಾಗಿದೆ.

ಕುಡುತ್ತುಂ ಪೋಗಿ ಸಹಸ್ರ ಕೂಟ ಜೈತ್ಯಾಲಯ ಮನೆಯ್ದಿ ಪಟ್ಟವರ್ಧನ ದಿಂದಿಟಿಿದು ಬಸದಿಯಂ ತ್ರಿಪ್ರದಕ್ಷಿಣಂ ಗೆಯ್ದು ದೇವರಂ ಬಂದಿಸಿ...ಇಂತೆಂದಂ" (ವಿದ್ಯುಚ್ಚೋರಂ).

ಈ ಭಾಗವನ್ನೇ ಕವಿಚರಿತೆಕಾರರು ತಮ್ಮ ಗ್ರಂಥದಲ್ಲಿ ಸೇರಿಸಿಕೊಂಡಿರುವರು. ಆದರೆ ಪ್ರೊ॥ ಪಾಠಕರವರು ಆ ಗ್ರಂಥದ ಹೆಸರೇನೆಂಬುದನ್ನು ಇಲ್ಲಿ ಹೇಳಿಲ್ಲ. ಅವರು ಉದ್ಧರಿಸಿರುವ ವಾಕ್ಯವು ವೊಡ್ಡಾರಾಧಣದಲ್ಲಿಯ ಹತ್ತೊಂಬತ್ತು ಕಥೆಗಳಲ್ಲಿ ಒಂದಾದ 'ವಿದ್ಯುಚ್ಚೋರನೆಂಬ ರಿಸಿಯ ಕಥೆ'ಯಲ್ಲಿ ಈ ರೀತಿ ಇದೆ :

"ಪೆಂಡವಾಸದ ಸೂಳೆಯರಿರ್ಬರ್ ಪೆಜಿಗೇಱಿರ್ಕೆಲದೊಳಂ ಚಾಮರಂಗಳ, ಸಿಕ್ಕುರ್ತ್ತಂ ಬೆಳ್ಗೊಡೆಗಳುಂ ಪಾಳಿಧ್ವಜಂಗಳುಂ ತಜಿನೆ ಪಟಿಯಿಗೆಗಳುಂ ಚಂದ್ರಾದಿತ್ಯರ್ಕ್ಕಳುಂ ಸಿಂಹ ವ್ಯಾಘ್ರ ಮಕರ ಮತ್ಸ್ಯಂಗಳೆಂದಿವು ಮೊದಲಾಗೊಡೆಯ ಚಿಹ್ನಂಗಳುಂ ಮುಂದೆ ಪಂಚಮಹಾಶಬ್ದಂಗಳುಂ ಬದ್ದವಣದ ಪಟಿಿಗಳುಂ ಬಾಜಿಸೆ ವಂದಿಮಾಗಧ ಯಾಚಕ ಪ್ರಭೃತಿಗಳ್ಗಂ ದೀನಾನಾಥಾಂಧರ್ಕಳ್ಗಂ ತುಷ್ಟಿದಾನಮಂ ಕೊಡುತ್ತಂ ಪೋಗಿ ಸಹಸ್ರಕೂಟ ಚೈತ್ಯಾಲಯ ಮನೆಯ್ದಿ ಪಟ್ಟವರ್ಧನ ದಿಂದಿಟಿಿದು ಬಸದಿಯಂ ತ್ರಿಪ್ರದಕ್ಷಿಣಂ ಗೆಯ್ದು ದೇವರಂ ನಿವೇದಿಸಿ ಗುಣಧರರೆಂಬಾಚಾರ್ಯರಂ ಗುರು ಭಕ್ತಿಗೆಯ್ದು ಬಂದಿಸಿ ಇಂತೆಂದಂ ಭಟಾರಾ ಸಂಸಾರಮೆಂಬ ಸಮುದ್ರದೊಳ್ ಮುಳುಗುತ್ತಿರ್ದೆನ್ನಂ ಮುಳುಗಲೀಯದಿತ್ತಿ" ಇತ್ಯಾದಿ.

ಇದರಿಂದ, ರೇವಾಕೋಟ್ಯಾಚಾರ್ಯನು ಬರೆದ ಗ್ರಂಥವು ವೊಡ್ಡಾರಾಧಣವೇ ಆಗಿರಬೇಕೆಂದು ಸ್ಪಷ್ಟವಾಗುತ್ತದೆ.

ಒಟ್ಟಿನಲ್ಲಿ, ವೊಡ್ಡಾರಾಧಣವೆಂಬ ಕೃತಿಗೆ "ಉಪಸರ್ಗ ಕೇವಲಿಗಳ ಕಥೆ" ಎಂಬ ಹೆಸರಿದ್ದಿತೆಂದೂ ಅದನ್ನು ರಚಿಸಿದವನು ರೇವಾಕೋಟ್ಯಾಚಾರ್ಯನೆಂದೂ ಸಿದ್ಧವಾಯಿತು. ಇದನ್ನೇ ವೊಡ್ಡಾರಾಧಣದ ಪ್ರತಿಯ ಅಂತ್ಯದಲ್ಲಿರುವ...ಟ್ಯಾಚಾರ್ಯ ಎಂಬ ಅಸಂಪೂರ್ಣವಾದ ಹೆಸರೂ ಸಮರ್ಥಿಸುತ್ತದೆ,

ಇನ್ನು ರೇವಾಕೋಟ್ಯಾಚಾರ್ಯನು ಯಾವ ಕಾಲದಲ್ಲಿ ಜೀವಿಸುತ್ತಿದ್ದನೆಂಬುದನ್ನು ವಿಚಾರಿಸಬೇಕಾಗಿದೆ. ಇವನು ತನ್ನ ವಿಷಯವಾಗಿ ಏನನ್ನೂ ಹೇಳಿಕೊಂಡಿಲ್ಲ. ಇವನು ಇಂತಹ ಕಾಲದಲ್ಲಿದ್ದನೆಂದು ಹೇಳುವುದಕ್ಕೆ ಪ್ರಬಲವಾದ ಆಧಾರವಾವುದೂ ಇಲ್ಲ. ಕವಿಚರಿತೆಕಾರರು ಇವನ ಕಾಲವು ಸು. ೧೧೮೦ ಆಗಿರಬಹುದೆಂದು ಅಭಿಪ್ರಾಯಪಟ್ಟಿರುವರು. ಇವರಿಗೆ ಆಧಾರ ಪ್ರೊ॥ ಕೆ. ಬಿ. ಪಾಠಕರವರು ಬರೆದಿರುವ ಈ ವಾಕ್ಯ :

**"I will now quote a passage from a Jaina author who lived in times when the expression panchamahasabda was still in use in a living language."**

ಇವರು ಪ್ರಕಟಿಸಿರುವ ತೊಱೆಗಲ್ಲು ಶಾಸನದ ಕಾಲ. ಕ್ರಿ.ಶ. ೧೧೮೮. ಈ ಶಾಸನದ ಎರಡನೆಯ ಪಙ್ಕ್ತಿಯಲ್ಲಿ 'ಪಂಚ ಮಹಾಶಬ್ದ' ಎಂಬುದು ಕಂಡುಬರುತ್ತದೆ. ಆದುದರಿಂದ ಕವಿಚರಿತೆಕಾರರು ರೇವಾಕೋಟ್ಯಾಚಾರ್ಯನ ಕಾಲವನ್ನು ಸು. ೧೧೮೦ ಎಂದು ಕೊಟ್ಟಿರುವುದಾಗಿ ನಮಗೆ ತೋರುತ್ತದೆ. ವಿಚಾರಿಸಿ ನೋಡಿದಲ್ಲಿ, ಇದೇನೂ ಪ್ರಬಲವಾದ ಆಧಾರವಲ್ಲ. ರೇವಾಕೋಟ್ಯಾಚಾರ್ಯನು ೧೧೮೦ ಕ್ಕಿಂತ ಹಿಂದೆಯಾಗಲಿ, ಆ ಕಾಲಕ್ಕಿಂತ ಈಚೆಗಾಗಲಿ ಇದ್ದಿರಬಹುದೆಂಬುದಾಗಿ ಹೇಳುವುದಕ್ಕೆ ಯಾವ ಅಭ್ಯಂತರವೂ ತೋರುವುದಿಲ್ಲ. ಆತನು ೧೪೩೪ ಕ್ಕಿಂತ ಹಿಂದಿನವನಾಗಿರಬೇಕೆಂದು ಮಾತ್ರ ಧಾರಾಳವಾಗಿ ಹೇಳಬಹುದು. ಹೀಗಿರುವಲ್ಲಿ, ಇವನ ಕಾಲವು ಯಾವುದಿರಬಹುದು ?

ಈ ಕವಿಯ ಕಾಲವನ್ನು ಸ್ವಲ್ಪ ಹೆಚ್ಚು ಕಡಿಮೆ ಊಹಿಸಿ ಹೇಳುವುದಕ್ಕೆ ಆಧಾರವು ಇವನ ಗ್ರಂಥದಲ್ಲಿ ದೊರೆಯುವ ಕೆಲವು ಪ್ರಾಚೀನ ಪ್ರಯೋಗಗಳು. ೧೪೩೪ ರಲ್ಲಿ ಲಿಖಿತವಾದ ಈ ಪ್ರತಿಯಲ್ಲಿಯೇ ಅಂತಹ ಹಳೆಯ ಪ್ರಯೋಗಗಳಿರುವುವೆಂಬುದನ್ನು ನೋಡಿದರೆ, ರೇವಾಕೋಟ್ಯಾಚಾರ್ಯನ ಬಾಯಿಂದ ಹೊರಟ ಭಾಷೆಯ ಸ್ವರೂಪವು ಹೇಗಿದ್ದಿರಬೇಕೆಂದು ವಾಚಕರೇ ಊಹಿಸಿಕೊಳ್ಳಬಹುದಾಗಿದೆ. ಅಂತಹ ಕೆಲವು ಹಳೆಯ ಪ್ರಯೋಗಗಳನ್ನು ಇಲ್ಲಿ ಕೊಟ್ಟಿದೆ ;—

(೧) ಹಳಗನ್ನಡದಲ್ಲಿ ಪ್ರಥಮ ಪುರುಷ ಪುಂಸ್ತ್ರೀಲಿಂಗಳ ಆಖ್ಯಾತ ವಿಭಕ್ತಿ ಪ್ರತ್ಯಯಗಳು—(ಏಕ) 'ಅಂ', 'ಅಳ್'; (ಬಹು) 'ಅರ್'. ಇವು ಕೆಲವು ವೇಳೆ 'ಒಂ', 'ಒಳ್' ಮತ್ತು 'ಒರ್' ಎಂಬ ರೂಪಗಳನ್ನು ಕ್ರಮವಾಗಿ ಧರಿಸುತ್ತವೆ. 'ಅಟಿವೊಂ, ಕೆಯ್ದೊಂ, ಸಲ್ದೊಂ' ಎಂಬ ರೂಪಗಳು ಕ್ರಿ.ಶ. ೭೮೦-'೯೬ನೆಯ ಒಂದು ಶಾಸನದಲ್ಲಿಯೂ, 'ಕಿಡಿಪೊಂ' ಎಂಬ ರೂಪವು ೭೦೭ನೆಯ ಒಂದು ಶಾಸನದಲ್ಲಿಯೂ, 'ಅಪ್ಪೊರ್. ಉಳ್ಳೊರ್' ಎಂಬ ರೂಪಗಳು ೭೫೦-೮೧೪ನೆಯ ಒಂದು ಶಾಸನದಲ್ಲಿಯೂ. 'ಎಂಬೊಳ್' ಎಂಬ ರೂಪವು ೭೭೮ನೆಯ ಒಂದು ಶಾಸನದಲ್ಲಿಯೂ ಇವೆ ಎಂದು ತಿಳಿದುಬರುತ್ತದೆ[7] ನಪುಂಸಕ ಲಿಂಗದಲ್ಲಿ ಕೂಡ 'ಒದು' ಪ್ರತ್ಯಯವಿದೆ (ಶಾಸನ ಪದ್ಯ ಮಂಜರಿ, ಪು. ೨, ಪದ್ಯ ೬). ಈ ಒಕಾರಯುಕ್ತವಾದ ರೂಪಗಳು ಪೊನ್ನನ (ಸು. ೯೫೦) ಶಾಂತಿ ಪುರಾಣದಲ್ಲಿಯೂ, ಚಾವುಂಡರಾಯ ಪುರಾಣದಲ್ಲಿಯೂ (೯೭೮) ವಿಪುಲವಾಗಿ ದೊರೆಯುತ್ತವೆ. ಈ ಕಾಲವಾದ ಮೇಲೆ ಹುಟ್ಟಿದ ಚಂಪೂಗ್ರಂಥಗಳಲ್ಲಿ ಈ ಒಕಾರಯುಕ್ತವಾದ ರೂಪಗಳು ದೊರೆಯುವುದು ಅಪೂರ್ವ[8]. ಹತ್ತನೆಯ ಶತಮಾನದ ಚಂಪೂ ಕಾವ್ಯಗಳಲ್ಲಿ ಕೂಡ ಇಂತಹ ರೂಪಗಳು ಗದ್ಯಭಾಗಗಳಲ್ಲಿ ವಿಶೇಷವಾಗಿ ದೊರೆಯುವುವೇ ಹೊರತು ಪದ್ಯ ಭಾಗಗಳಲ್ಲಿ ಹೆಚ್ಚಾಗಿ ದೊರೆಯುವಂತಿಲ್ಲ. ಆದುದರಿಂದ ಈ ಒಕಾರಯುಕ್ತವಾದ ಪ್ರಯೋಗಗಳು ದೊರೆಯುವುದು ಗದ್ಯ ಗ್ರಂಥಗಳ ವೈಲಕ್ಷಣ್ಯವಿರಬಹುದೆಂದು ತೋರುತ್ತದೆ. ವೊಡ್ಡಾರಾಧಣದಲ್ಲಿಯಾದರೋ ಇಂತಹ ರೂಪಗಳು ಹೆಚ್ಚಾಗಿ ದೊರೆಯುತ್ತವೆ. ಈ ಗ್ರಂಥದಿಂದ ಮುಂದೆ ತೆಗೆದು ಬರೆದಿರುವ ಮೂರು ಕಥೆಗಳಿಂದ ವಿಷಯವು ಸ್ಪಷ್ಟವಾಗುತ್ತದೆ.

(೨) 'ಇರ್ದನ್, ಪೊರ್ದ್ದಿದನ್ ಎಂಬ ಪದಗಳ ರೂಪಗಳು ವೊಡ್ಡಾರಾಧಣದಲ್ಲಿ 'ಇಟ್ದೊನ್, ಪೊಟ್ದಿದೊನ್' ಎಂದಾಗಿವೆ, ಇವುಗಳನ್ನು

---

[7]Kitel's Kannada grammar, P.119

[8]'ಅವನ್' ಎಂಬುಪಕ್ಕೆ 'ಅವೊನ್' ಎಂಬ ರೂಪವನ್ನು ನಾಗಚಂದ್ರದ (ಸು. ೧೧೦೦) ಆವೊಂ ವಾದಿ ಕಥಾತ್ರಯ ಪ್ರವಣದೊಳ್..................ಎಂಬಲ್ಲಿ ನೋಡಬಹುದು.

ಯವರ ಪಂಚಾಂಗದ ಪ್ರಕಾರ (Indian Ephemeris) ಗುಣಿಸಿ ನೋಡಿದಲ್ಲಿ ಆನಂದ ಸಂವತ್ಸರ ಕಾರ್ತಿಕ ಬಹುಳ ಪಾಡ್ಯ ಸೋಮವಾರವು ಕೆಳಗೆ ಕಾಣಿಸಿರುವ ವರ್ಷಗಳಲ್ಲಿ ಪ್ರಾಪ್ತವಾಗುವುದು.[2]

(೧) ಕ್ರಿ. ಶ. ೧೪೩೪ನೆಯ ಅಕ್ಟೋಬರ್ ೧೮ನೆಯ ತಾರೀಕು ಸೋಮವಾರ.

(೨) ಕ್ರಿ. ಶ. ೧೬೧೪ ನೆಯ ನವೆಂಬರ್ ೭ ನೆಯ ತಾರೀಕು ಸೋಮವಾರ.

ಮಲ್ಲರಸನು ಈ ಗ್ರಂಥವನ್ನು ಸಂಪ್ರತಿಸಿದ ಕಾಲವು ಈ ಎರಡು ಇಸವಿಗಳಲ್ಲಿ ಯಾವುದೋ ಒಂದಾಗಿರಬೇಕು. ಅದು ಇಂತಹುದೇ ಎಂಬುದನ್ನು ನಿರ್ಧರಿಸಿ ಹೇಳಲು ಸಾಕಾದಷ್ಟು ಆಧಾರವಿಲ್ಲವಾದರೂ ಕೆಳಗೆ ತೋರಿಸಿರುವ ಎರಡು ಕಾರಣಗಳಿಂದ ಆ ಕಾಲವು ಕ್ರಿ. ಶ. ೧೪೩೪ ನೆಯ ವರ್ಷವೇ ಆಗಿರಬೇಕೆಂಬುದರಲ್ಲಿ ಸಂಶಯವಿಲ್ಲ :

(೧) ಈ ಪ್ರತಿಯಲ್ಲಿರುವ ಅಕ್ಷರಗಳು ವಿಜಯನಗರದ ದೊರೆಗಳ ಕನ್ನಡದ ಶಾಸನಾಕ್ಷರಗಳನ್ನು ಬಹುಮಟ್ಟಿಗೆ ಹೋಲುತ್ತವೆ. ತೆಲುಗು ವರ್ಣಮಾಲೆಯ 'ಉ' ಕಾರವೂ, 'ತ' ಕಾರವೂ, 'ಹ' ಕಾರವೂ ಇಲ್ಲಿ ದೊರೆಯುತ್ತವೆ.

ಆದುದರಿಂದ ಮಲ್ಲರಸನು ಕ್ರಿ. ಶ. ೧೪೩೪ ರಲ್ಲಿ ಈ ಗ್ರಂಥವನ್ನು ಸಂಪ್ರತಿಸಿರಬೇಕು: ಗ್ರಂಥರಚನಾ ಕಾಲವಾದರೋ ೧೪೩೪ ಕ್ಕಿಂತ ಹಿಂದಿನದೆಂದು ಸ್ಪಷ್ಟವಾಗಿದೆ.

---

[2] ಈ ವಿಷಯವನ್ನು ನನಗೆ ದಯವಿಟ್ಟು ತಿಳಿಸಿದ ಶಾಸನದ ಇಲಾಖೆಯ ಶ್ರೀಮಾನ್ ಆರ್. ರಾಮರಾಯರು ಬಿ. ಎ. ಅವರಿಗೆ ಕೃತಜ್ಞನಾಗಿದ್ದೇನೆ.

ನೋಡಿದರೆ, 'ಇರ್, ಪೊರ್ದು' ಎಂಬ ಧಾತುಗಳ ರೂಪಗಳು' ಇಟ್, ಪೊಟ್ಟು ಎಂದಿರಬೇಕೆಂದು ತೋರುತ್ತದೆ. ಆದರೆ ಈ ರೂಪಗಳು ಎಲ್ಲಿಯೂ ಪ್ರಯೋಗವಾಗಿರುವಂತೆ ಕಂಡು ಬರುವುದಿಲ್ಲ. ಹತ್ತನೆಯ ಶತಮಾನಕ್ಕೆ ಹಿಂದೆ ಹುಟ್ಟಿದ ಕೆಲವು ಶಾಸನಗಳಲ್ಲಿ[9] 'ಇಟ್' ಧಾತುವಿನಿಂದ ಜನ್ಯವಾದ ಕೆಲವು ರೂಪಗಳಿವೆ. ರೇಫೆವೆರಸಿದ ಕೆಲವು ದಡ್ಡಕ್ಕರಗಳು ಮೊದಲು ಟಕಾರ ಯುಕ್ತವಾಗಿದ್ದುವು. ಉದಾ :—ಕರ್ಚು, ಕಟ್ಚು, ಇತ್ಯಾದಿ. ಇಂತಹ ಕೆಲವು ಶಬ್ದಗಳ ಮಾದರಿಯ ಮೇಲೆ 'ಇರ್ದು' ಎಂಬ ಪದವನ್ನು 'ಇಟ್ದು' ಎಂದಿರಬೇಕೆಂದು ಲೇಖಕರು ಭಾವಿಸಿದಹಾಗೆ ತೋರುತ್ತದೆ[10]. ಈ ವಿಧವಾದ ಪ್ರಯೋಗಗಳು ಹತ್ತನೆಯ ಶತಮಾನದಲ್ಲಿ ಪ್ರಚುರವಾಗಿದ್ದುವು.

(೩) 'ಅಮ್ಮ' ಎಂಬ ಪದವು 'ಅಪ್ಪ' ಎಂಬ ಅರ್ಥದಲ್ಲಿ ಹಲವು ಕಡೆ ಪ್ರಯೋಗಿಸಲ್ಪಟ್ಟಿದೆ :

(೧) ಇದಲ್ತಿದಱಮ್ಮನುಮೆನ್ನನಾಂಪುದೇ

(ಪಂಪಭಾರತ XI–೭೩)

(೨) ತಾನಕ್ಕೆ ತಮ್ಮಮ್ಮನಕ್ಕೆಸಲಂಬಂ ತಿರುವಾಯ್ಗೆ ತಂದಱಿವರೇ

(ಗದಾಯುದ್ಧ, II–೧೧)

(೩) ಗುರುಸೂನು ತಾನುಮಣಮಮ್ಮನಲಂಪುವಾದತ್ತವೋದುದೋ
(ಗ. ಯು.–IV–೫೦)

---

9 ಶ್ರವಣಬೆಳಗೊಳ (ಪ್ರಥಮ ಮುದ್ರಣ), ೨೬, ೯೮, ೧೦೮ (ಕಾಲ. ಸು. ೭೦೦)

10 'ಎರ್ದೆ' ಎಂಬ ಪದಕ್ಕೆ ಎಟ್ದೆ, ಎಳ್ದೆ' ಎಂಬ ರೂಪಗಳಿದ್ದ ಹಾಗೆ ತಿಳಿಯ ಬರುತ್ತದೆ, ಶ್ರವಣಬೆಳಗೊಳ ೫೯ನೆಯ ಶಾಸನ—"ಸುಡಿದನೆ ಕಾವುದನೇ ಎಟ್ದೆಗಿಡದಿರು ........" ಶಬ್ದಮಣಿದರ್ಪಣದಲ್ಲಿ ಉದಾಹೃತವಾಗಿರುವ ಈ ಪದ್ಯದಲ್ಲಿಯೇ 'ಎರ್ದೆ' ಎಂಬ ಪಾಠ ಭೇದವಿದೆ,

(೪) ಎಮ್ಮಮ್ಮನಪ್ಪ ಶಂತನುಗಂ ಯೋಜನಗಂಧಿಯೆನಿಸಿದ ಸತ್ಯವತಿಗಂ ಚಿತ್ರಾಂಗದನುಂ ವಿಚಿತ್ರವೀರ್ಯನುಮೆಂಬಿರ್ವರ್ತನೂಜರಾದರ್.

(ಗ.ಯು. V-೪೪ ವ)

ಇಂತಹ ಪ್ರಯೋಗವು ಹತ್ತನೆಯ ಶತಮಾನದ ಗ್ರಂಥಗಳಲ್ಲಿ ಕಂಡು ಬರುತ್ತದೆ. ವೊಡ್ಡಾರಾಧಣದಲ್ಲಿರುವ ಸುಕುಮಾರಸ್ವಾಮಿಯ ಕಥೆಯಲ್ಲಿ ಬರುವ ನಾಗಶ್ರೀಯ ವೃತ್ತಾಂತದಲ್ಲಿ ಈ ಪ್ರಯೋಗವು ಹಲವು ಬಾರಿ ಬಂದಿದೆ.

(೪) ವೊಡ್ಡಾರಾಧಣವು ರಚನೆಯಲ್ಲಿಯೂ ಶೈಲಿಯಲ್ಲಿಯೂ ಚಾವುಂಡ ರಾಯ ಪುರಾಣವನ್ನು ಹೋಲುತ್ತದೆ. ಆದರೆ ಇದರಲ್ಲಿ ಚಾವುಂಡರಾಯ ಪುರಾಣದಲ್ಲಿರುವಷ್ಟು ಸಂಸ್ಕೃತಪದ ಪ್ರಯೋಗವಿಲ್ಲ.

(೫) ಹರಿಷೇಣನೆಂಬುವನು 'ಬೃಹತ್ಕಥಾ ಕೋಶ' ಎಂಬ ಒಂದು ಕಾವ್ಯವನ್ನು ಬರೆದಿದ್ದಾನೆ. ಆತನ ಕಾಲ ಕ್ರಿ. ಶ. ೯೩೧ [11] ಇದರಲ್ಲಿ ಭದ್ರಬಾಹುವಿನ ಚರಿತ್ರೆಯು ಹೇಳಿದೆ. ಇಲ್ಲಿ ಹೇಳಿರುವ ಕಥೆಗೂ ವೊಡ್ಡಾರಾಧಣದಲ್ಲಿ ಹೇಳಿರುವ 'ಭದ್ರಬಾಹುಭಟಾರ'ರ ಕಥೆಗೂ ವಿಶೇಷ ಸಾಮ್ಯವಿದೆ. ಒಂದು ವೇಳೆ ರೇವಾಕೋಟ್ಯಾಚಾರ್ಯನು ಹರಿಷೇಣನ ಸಂಸ್ಕೃತ ಗ್ರಂಥದ ಆಧಾರದ ಮೇಲೆ ಈ ಕಥೆಯನ್ನು ಕನ್ನಡದಲ್ಲಿ ಬರೆದಿರ ಬಹುದು. ಹೀಗಿದ್ದಲ್ಲಿ ಅವನು ಕ್ರಿ.ಶ. ೯೩೧ ರಿಂದ ಈಚೆಗೆ ಇದ್ದಿರಬೇಕೆಂದು ತೋರುತ್ತದೆ.

ಈ ಎಲ್ಲ ವಿಷಯಗಳನ್ನೂ ಪರಿಶೀಲಿಸಿ ನೋಡಿದರೆ ವೊಡ್ಡಾರಾಧಣವು ಚಾವುಂಡರಾಯ ಪುರಾಣದಷ್ಟೇ ಪ್ರಾಚೀನವಾಗಿರಬೇಕೆಂದು ತೋರುತ್ತದೆ. ಎರಡೂ ಸಮಕಾಲಿಕ ಕೃತಿಗಳೆಂದು ಹೇಳುವುದಕ್ಕೆ ಪ್ರತಿಬಂಧಕವೇನೂ ತೋರುವುದಿಲ್ಲ. ಒಂದು ವೇಳೆ ವೊಡ್ಡಾರಾಧಣವು ಇನ್ನೂ ಸ್ವಲ್ಪ ಪ್ರಾಚೀನ

---

[11] ಶ್ರವಣಬೆಳಗೊಳದ ಶಾಸನಗಳು. (ದ್ವಿತೀಯ ಮುದ್ರಣ), ಪುಟ ೩೭.

ವಾಗಿರಬಹುದೆಂದು ತೋರುತ್ತದೆ. ಪೂರ್ವದ ಹಳಗನ್ನಡವು ಹಳಗನ್ನಡದ ಸ್ವರೂಪವನ್ನು ಧರಿಸಿಕೊಳ್ಳುವುದಕ್ಕೆ ಮೊದಲು ಮಾಡಿದಾಗ ಈ ಗ್ರಂಥವು ಬರೆಯಲ್ಪಟ್ಟಿರಬಹುದು. ವೊಡ್ಡಾರಾಧಣವು ಹೆಚ್ಚು ಪ್ರಾಚೀನವಲ್ಲವೆಂದು ಹೇಳುವುದಾದರೆ ಅದು ಸುಮಾರು ಹತ್ತನೆಯ ಶತಮಾನದ ಆದಿಯಲ್ಲಿ ಹುಟ್ಟಿರಬೇಕೆಂದು ಹೇಳಬೇಕಾಗುತ್ತದೆ. ಆದುದರಿಂದ ಇದರ ಕಾಲವು ಸು. ೯೪೦ ಆಗಿರಬಹುದೆಂದು ಸದ್ಯಕ್ಕೆ ಊಹಿಸಬಹುದಾಗಿದೆ. ಹೀಗಿದ್ದಲ್ಲಿ ನಮಗೆ ದೊರೆತಿರುವ ಗದ್ಯಗ್ರಂಥಕಾರರಲ್ಲಿ ರೇವಾಕೋಟ್ಯಾಚಾರ್ಯನೇ ಮೊದಲನೆಯವನಾಗುತ್ತಾನೆ.

ವೊಡ್ಡಾರಾಧಣವು ಗದ್ಯರೂಪದಲ್ಲಿರುವ ಕಥೆಗಳ ಗೊಂಚಲು. ಇದೊಂದು ಹೊಸ ಮಾದರಿಯ ಗ್ರಂಥ. ಇದನ್ನು 'ಗದ್ಯ ಕಥೆ' ಎಂದು ಕರೆಯಬಹುದು. ನೃಪತುಂಗನು "ಗದ್ಯಕಥೆಯ ಸ್ವರೂಪವನ್ನು ಹೀಗೆ ನಿರೂಪಿಸಿದ್ದಾನೆ.

ಕಂ॥ ಮಿಗೆ ಕನ್ನಡ ಕಬ್ಬಂಗಳೊ ।
ಳಗಣಿತ ಗುಣ ಗದ್ಯ ಪದ್ಯ ಸಮ್ಮಿಶ್ರಿತಮಂ ॥
ನಿಗದಿಸುವರ್ ಗದ್ಯಕಥಾ ।
ಪ್ರಗೀತೆಯಿಂ ತಚ್ಚಿರಂತನಾಚಾರ್ಯರ್ಕಳ್ ॥ (ಕ.ರಾ.ಮಾ. ।-೨೭)

ಈ ಲಕ್ಷಣವು ವೊಡ್ಡಾರಾಧಣಕ್ಕೆ ಬಲು ಚೆನ್ನಾಗಿ ಅನ್ವಯಿಸುತ್ತದೆ. ಇದರಲ್ಲಿ 'ಅಗಣಿತಗುಣ'ವುಳ್ಳ ಗದ್ಯದ ನಡುನಡುವೆ ಪದ್ಯಗಳೂ ಹಲವು ಬಾರಿ ಬಂದಿವೆ. ನಾಗವರ್ಮನು ಕಥೆ ಅಥವಾ ಆಖ್ಯಾಯಿಕೆಯ ಲಕ್ಷಣವನ್ನು ಹೀಗೆ ಹೇಳಿದ್ದಾನೆ. :

ಗದ್ಯದೊಳ್ ಸಮೆದುಮಂತವು ।
ಪ್ರದ್ಯ ವಚಃಪ್ರೌಢಿಗಳ್ ಕಥಾಖ್ಯಾಯಿಕೆಯೊಳ್ ॥ (ಕಾ.ಲೋ. ೯೪೯)

ವೊಡ್ಡಾರಾಧಣದಲ್ಲಿಯು ಕೆಲವು ಕಥೆಗಳಲ್ಲಿ ಬರಿಯ ಗದ್ಯವೇ ಇದೆ. ಆದುದರಿಂದ ನಾಗವರ್ಮನು ಹೇಳುವ ಲಕ್ಷಣವೂ ಇದಕ್ಕೆ ಅನ್ವಯಿಸುತ್ತದೆ. ಚಾವುಂಡರಾಯ ಪುರಾಣದಲ್ಲಿಯೂ ಈ ಲಕ್ಷಣಗಳು ಕಂಡುಬರುತ್ತವೆ.

ಆದುದರಿಂದ ಇವೆರಡೂ 'ಗದ್ಯಕಥೆ'ಗಳ ಜಾತಿಗೆ ಸೇರಿವೆ. ವೊಡ್ಡಾರಾಧಣ ವನ್ನು ಬರೆದಾತನೇ ಕೆಲವು ಕಥೆಗಳನ್ನು 'ಚಿತ್ರ ಕಥೆ' ಎಂದು ಕರೆದಿದ್ದಾನೆ.

ನೃಪತುಂಗನು ವಿಮಲೋದಯಾದಿ ಗದ್ಯಗ್ರಂಥಕಾರರೊಡನೆ ರೇವಾ ಕೋಟ್ಯಾಚಾರ್ಯನ ಹೆಸರನ್ನು ಸೇರಿಸದೆ ಹೋದರೂ ಆ 'ಚಿರಂತನಾ ಚಾರ್ಯರ್ಕಳ' ಗುಂಪಿನಲ್ಲಿ ಈತನೇಕೊಬ್ಬನಾಗಿರಬಾರದು ? ಈತನ ಕಾಲ ವೊಂದು ನಿಷ್ಕೃಷ್ಟವಾಗಿ ನಿರ್ಣೀತವಾದರೆ "ಗದ್ಯಾಶ್ರಮ ಪದ ಗುರುತಾ ಪ್ರತೀತಿಯಂ ಕೈಕೊಂಡ" ಪೆಂಪು ನಮಗೆ ತಿಳಿದಿರುವ ಮಟ್ಟಿಗೆ ಈಗ ರೇವಾ ಕೋಟ್ಯಾಚಾರ್ಯನಿಗೆ ಸಂದರೂ ಸಲ್ಲಬಹುದು.

## ವೊಡ್ಡಾರಾಧಣ

ಕಥೆಗಳನ್ನು ಬರೆಯಲು ತೊಡಗುವುದಕ್ಕೆ ಮೊದಲು ರೇವಾಕೋಟ್ಯಾ ಚಾರ್ಯನು ತನ್ನ ಗ್ರಂಥಕ್ಕೆ ಪೀಠಿಕಾ ರೂಪವಾಗಿ ಹೀಗೆ ಬರೆದಿದ್ದಾನೆ :

"ನಮಃ ಶ್ರೀ ವರ್ಧಮಾನಾಯ ನಿರ್ಧೂತ ಕಲಿಲಾತ್ಮನೇ ॥
ಸಾಲೋಕಾನಾಂ ತ್ರಿಲೋಕಾನಾಂ ಯದ್ವಿದ್ಯಾ ದರ್ಪಣಾಯತೇ ।

...ಂತರ್ಗೆ ನಮಸ್ಕಾರಂ ಗೆಯ್ದು ದೇವೋಪಸರ್ಗ ಮನುಷ್ಯೋಪಸರ್ಗ ತಿರಿಕೋಪಸರ್ಗ ಚೇತನೋಪಸರ್ಗಮೆಂದಿಂತು ಚತುರ್ವಿಧಮಪ್ಪುಗಸರ್ಗಮು ...ವುಂ ನೀರಟ್ಕ್ಕೆ ಮೊದಲಾಗೊಡೆಯಯಿಪ್ಪತ್ತೆರಡು ಪರೀಷಹಂಗಳಂ ಸೈರಿಸಿ ಅಯ್ದುಮಿಂದ್ರಿಯಂಗಳಂ ಗೆಲ್ದು ಬಾಹ್ಯಾಭ್ಯಂತರ...ಪರಿಗ್ರಹಂಗಳಂ ತೊಱೆದು ದ್ವಾದಶವಿಧಮಪ್ಪ ತಪದೊಳ್ನೆಗಟ್ದು ಪ್ರಾಯೋಪಗಮನದಿಂ ಸನ್ಯಸನಂ ಗೆಯ್ದು ಕರ್ಮಕ್ಷಯಂ ಗೆಯ್ದು ಮೋಕ್ಷಕ್ಕೆ ಪೋದರ್. ಮತ್ತಂ... ಸರ್ವಾರ್ಥಸಿದ್ಧಿಯೊಳ್ ಪುಟ್ಟಿದ ಮಹಾಪುರುಷರ್ಕಳ ಕಥೆಗಳಂ ಪೇೞ್ವಲ್ಲಿ ಮುನ್ನ ಸುಕುಮಾರ ಸ್ವಾಮಿಯ ಕಥೆಯಂ ಪೇೞ್ವೆಂ :

ಇದರಲ್ಲಿ ಹೇಳಿರುವ ಹತ್ತೊಂಬತ್ತು ಕಥೆಗಳು ಯಾವುವೆಂದರೆ :

೧) ಸುಕುಮಾರಸ್ವಾಮಿಯ ಕಥೆ ೨) ಸುಕೌಶಳಸ್ವಾಮಿಯ ಕಥೆ ೩) ಗಜಕುಮಾರನ ಕಥೆ ೪) ಸನತ್ಕುಮಾರ ಚಕ್ರವರ್ತಿಯ ಕಥೆ ೫) ಭದ್ರಬಾಹುಭಟಾರರ ಕಥೆ ೬) ಅಂಣಿಕಾ ಪುತ್ರನ ಕಥೆ ೭) ಲಲಿತ ಘಂಟೆಯ ಕಥೆ ೮) ಧರ್ಮಘೋಷ ಭಟಾರರ ಕಥೆ ೯) ಸಿರಿದಿಂಣ ಭಟಾರರ ಕಥೆ ೧೦) ವೃಷಭಸೇನ ಭಟ್ಟಾರರ ಕಥೆ ೧೧) ಕಾರ್ತಿಕ ರಿಸಿಯ ಕಥೆ ೧೨) ಅಭಯಘೋಷರೆಂಬ ರಿಸಿಯ ಕಥೆ ೧೩) ವಿದ್ಯುಚ್ಚೋರನೆಂಬ ರಿಸಿಯ ಕಥೆ ೧೪) ಗುರುದತ್ತ ಭಟ್ಟಾರರ ಕಥೆ ೧೫) ಚಿಲಾತಪುತ್ರನ ಕಥೆ ೧೬) ದಂಡಕನೆಂಬ ರಿಸಿಯ ಕಥೆ ೧೭) ಮಹೇಂದ್ರದತ್ತಾಚಾರ್ಯರ್ ಮೊದಲಾದ ಐನೂರು ರಿಸಿಗಳ ಕಥೆ ೧೮) ಚಾಣಕ್ಯ ರಿಸಿಯ ಕಥೆ ೧೯) ವೃಷಭಸೇನರೆಂಬ ರಿಸಿಯ ಕಥೆ.

ಪ್ರತಿಯೊಂದು ಕಥೆಯ ಆದಿಯಲ್ಲಿಯೂ ಒಂದೊಂದು ಗಾಹೆಯು ಬರುತ್ತದೆ. ಇದು ಆ ಕಥೆಯ ಸಾರಾಂಶವನ್ನು ನಿರೂಪಿಸುತ್ತದೆ. ಈ ಗಾಹೆಗಳು ಷಟ್ಪದೀ ಕಾವ್ಯಗಳ ಪ್ರತಿಯೊಂದು ಸಂಧಿಯ ಆದಿಯಲ್ಲಿರುವ ಸೂಚನೆಗಳಿದ್ದ ಹಾಗೆ. ಈ ಗಾಹೆಗಳಾದ ಮೇಲೆ ಕಥೆಯು ಮೊದಲಾಗುತ್ತದೆ. ಪ್ರತಿಯೊಂದು ಕಥೆಯೂ 'ಸ್ವರ್ಗಾಪವರ್ಗ ಸುಖಂಗಳನೆಯ್ದುಗೆ' ಎಂದು ಮುಗಿಯುತ್ತದೆ.

ವೊಡ್ಡಾರಾಧಣವು ಆ ಕಾಲದ ಭಾಷಾಸ್ವರೂಪವನ್ನು ತಿಳಿದುಕೊಳ್ಳುವುದಕ್ಕೆ ಸಹಾಯವನ್ನು ಮಾಡುವುದಲ್ಲದೆ ಆ ಕಾಲದ ಜನಜೀವನವನ್ನೂ ತಿಳಿಯಲು ವಿಪುಲವಾದ ಸಹಾಯವನ್ನು ಮಾಡುತ್ತದೆ. ಗ್ರಾಮಸಂರಕ್ಷಣೆ, ನಾಗರಪೂಜೆ, ಕಳ್ಳತನವನ್ನು ಮಾಡುವ ರೀತಿ—ಇಂತಹ ವಿಷಯಗಳು ಈ ಗ್ರಂಥದಲ್ಲಿ ಬರುತ್ತವೆ. ಜನಗಳ ನಂಬಿಕೆ, ಆಚಾರ ವ್ಯವಹಾರಗಳು, ನಡೆನುಡಿಗಳು—ಇವೆಲ್ಲವನ್ನೂ ಈ ಗ್ರಂಥದಿಂದ ತಿಳಿದುಕೊಳ್ಳಬಹುದಾಗಿದೆ. ವೊಡ್ಡಾರಾಧಣದಲ್ಲಿ ಅನೇಕ ಸಂಸ್ಕೃತ ಪ್ರಾಕೃತ ಕನ್ನಡ ಪದ್ಯಗಳು ಉದಾಹರಿಸಲ್ಪಟ್ಟಿವೆ. ಆ ಸಂಸ್ಕೃತ ಶ್ಲೋಕಗಳಲ್ಲಿ ಒಂದೆರಡು ಭರ್ತೃಹರಿಯ ನೀತಿ ಶತಕದಲ್ಲಿ ದೊರೆಯುತ್ತವೆ. ಪ್ರಾಕೃತ ಗಾಹೆಗಳಿಗೆ ಆಕರವು ಗೊತ್ತಾಗುವು

ದಿಲ್ಲ. ಕನ್ನಡ ಪದ್ಯಗಳನ್ನು ರೇವಾಕೋಟ್ಯಾಚಾರ್ಯನು ತಾನೇ ಬರೆದನೊ ಇನ್ನಾವ ಗ್ರಂಥದಿಂದಾದರೂ ಎತ್ತಿ ಬರೆದನೊ ನಿಶ್ಚಯಿಸಿ ಹೇಳಲಾಗುವುದಿಲ್ಲ. ಮುಂದೆ ಉದ್ಧರಿಸಿರುವ ಕಥೆಗಳಲ್ಲಿ ಬರುವ ಕನ್ನಡ ಪದ್ಯಗಳನ್ನು ಬಿಟ್ಟು ಉಳಿದವುಗಳನ್ನು ಇಲ್ಲಿ ಬರೆಯಬಹುದು. ಇವು ಗುರುದತ್ತ ಭಟಾರರ ಕಥೆಯಲ್ಲಿ ದೊರೆಯುತ್ತವೆ :

೧) ಸಾವನಿತೊಂದವಸ್ಥೆ ತನಗಾವೆಡೆಯೊಳ್ ತಱಿಸಂದು ತತ್ತ್ವಮಂ ।
ಭಾವಿಸಿ ಬಾಹ್ಯ ವಸ್ತುಗಳೊಳೊಂದಡೆ ತನ್ನೊಳೆ ನಿಂದ ಕರ್ಮ್ಮನಿ ॥
ಶ್ರಾವಣೆಯಂ ವಿಶೋಧಿ ದೊರೆಕೊಂಡೊಡೆ ಗೆಲ್ದು ಪರೀಷಹಂಗಳಂ ।
ಜೀವಮನಿಂತು ಸಂತಮೊಡಲಿಂ ಕಳೆಯೆಂಬುದು ಜೈನ ಶಾಸನಂ ॥

೨) ಅಱೊಳಮಿಲ್ಲ ಮೋಹಮೆನಗೆಂಗೆ ಜಿನೇಂದ್ರ ಪದಂಗಳುಗ್ರ ಸಂ ।
ಸಾರ ಹರಂಗಳೆಂಗೆ ಪೆಱದಿಲ್ಲೆನಗೆನ್ನಱಿವಲ್ಲದೆಂಗೆ ನಿಂ ॥
ದಾರಯೆ ಧರ್ಮ್ಮವೊಂದೆ ಶರಣೆಂಗೆ ಪಱಲಱಲಮನೊಲ್ಲೆನಿಂ ನಮ ।
ಸ್ಕಾರಮೆ ಸಾಲ್ಗುಮೆಂಬಿನಿತನೆಂಗೆನಲಾರ್ಪಡೆ ಜೀವಿತಾಂತ್ಯದೊಳ್ ॥

ಈ ಗ್ರಂಥದಿಂದ ಮೂರು ಕಥೆಗಳನ್ನು ಉದ್ಧರಿಸಿ ಬರೆದಿದೆ. ಮಾತೃಕೆಯಲ್ಲಿ 'ಟ' ಕಾರವಿಲ್ಲ. ಅದನ್ನು ಉಚಿತವಾದೆಡೆಗಳಲ್ಲಿ ಸೇರಿಸಿ ಬರೆದಿದೆ. ಇನ್ನುಳಿದುವೆಲ್ಲವೂ ಮಾತೃಕೆಯಲ್ಲಿದ್ದ ಹಾಗೆಯೇ ಇದೆ. ಇಲ್ಲಿ ಕೊಟ್ಟಿರುವ ಕಥೆಗಳ ಪಾಠವನ್ನು ಸಂಪೂರ್ಣವಾಗಿ ಪರಿಷ್ಕರಿಸಿಲ್ಲ. ಸಾಮಾನ್ಯವಾಗಿ, ಪ್ರಯೋಗಗಳನ್ನು ತಿದ್ದುವ ಸ್ವಾತಂತ್ರ್ಯವನ್ನು ವಹಿಸಿಲ್ಲ ; ಅಲ್ಲಲ್ಲಿ ವಾಚಕರ ಸೌಕರ್ಯಕ್ಕಾಗಿ ವಿರಾಮ ಚಿಹ್ನೆಗಳನ್ನು ಹಾಕಿದೆ. ಕಥೆಗಳನ್ನು ಬೇರೆ ಬೇರೆ ಭಾಗಗಳಾಗಿ ವಿಭಾಗಿಸಿದೆ.

೧೯೩೧

*೨

ಈ ಸುಮಾರು ಎಂಟು ವರ್ಷಗಳ ಹಿಂದೆ ವೊಡ್ಡಾರಾಧನೆಯ ಕಥೆಗಳಲ್ಲಿ ಮೂರನ್ನು "ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ"ಯಲ್ಲಿ (ಸಂಪುಟ ೧೬, ಸಂಚಿಕೆ ೩, ಪುಟ ೧೭೩–೨೩೧) ಆಗಿನ ಅದರ ಮಾನ್ಯ ಸಂಪಾದಕರ ಕೃಪೆಯಿಂದ ಪ್ರಕಟಿಸಲಾಗಿತ್ತು. ಅಂದಿನಿಂದ ಸಮಗ್ರ ಗ್ರಂಥವನ್ನು ಪ್ರಕಟಿಸಬೇಕೆಂದು ಉದ್ದೇಶ ಇತ್ತು. ಆದರೆ ಕಾರಣಾಂತರಗಳಿಂದ ಇದು ಸಾಧ್ಯವಾಗಲಿಲ್ಲ.

ಇದನ್ನು ಕಂಡು ಹಿಡಿದ ಕೀರ್ತಿ ನನಗೆ ಮಿತ್ರರಾಗಿಯೂ, ಈಗ ಮೈಸೂರಿನ ಓರಿಯಂಟಲ್ ಲೈಬ್ರರಿಯಲ್ಲಿ ಕನ್ನಡ ಪಂಡಿತರಾಗಿಯೂ ಇರುವ ಶ್ರೀಮಾನ್ ಎಸ್. ಅನಂತರಂಗಾಚಾರ್ಯ, ಎಂ.ಎ.ಬಿ.ಟಿ. ಅವರಿಗೆ ಸಂಪೂರ್ಣವಾಗಿ ಸಲ್ಲುತ್ತದೆ. ಕನ್ನಡ ಗ್ರಂಥಗಳ ಅನ್ವೇಷಣೆಯಲ್ಲಿ ತೊಡಗಿದ್ದ ಅವರಿಗೆ ಮೂಡಬಿದರೆಯ ಶ್ರೀಮಾನ್ ಲೋಕನಾಥಶಾಸ್ತ್ರಿಗಳೆಂಬ ಮಹನೀಯರ ಬಳಿ ಈ ಗ್ರಂಥ ದೊರೆಯಿತು. ಇದನ್ನು ಲೈಬ್ರರಿಗಾಗಿ ತೆಗೆದುಕೊಂಡು ಇದರ ಉಪಯೋಗ ಎಲ್ಲರಿಗೂ ಉಂಟಾಗುವಂತೆ ಮಾಡಿದ ಲೈಬ್ರರಿ ಅಧಿಕಾರಿಗಳಿಗೆ ಎಲ್ಲರೂ ಕೃತಜ್ಞರಾಗಿರಬೇಕಾಗಿದೆ. ಈ ಪುಸ್ತಕಕ್ಕೆ (ಖ) ಎಂಬ ಸಂಕೇತವನ್ನು ಇಲ್ಲಿ ಕೊಟ್ಟಿದೆ. ಇದರಲ್ಲಿರುವ ಪಾಠಾಂತರಗಳನ್ನು ಗುರುತುಹಾಕಿಕೊಳ್ಳಲು ತಮ್ಮ ಶ್ರಮವನ್ನೂ ಲೆಕ್ಕಿಸದೆ ನನಗೆ ಸಹಾಯ ಮಾಡಿದ ಶ್ರೀಮಾನ್ ಅನಂತರಂಗಾಚಾರ್ಯರಿಗೆ ನಾನು ಋಣಿಯಾಗಿದ್ದೇನೆ.

(ಖ) ಪ್ರತಿಯ ಕೊನೆಯಲ್ಲಿ ಹೀಗೆ ಇದೆ :

ಈ ಪೇಳ್ದ ಪತ್ತೊಂಬತ್ತು ಕಥೆಗಳು ಶಿವಕೋಟ್ಯಾಚಾರ್ಯರ್ ಪೇಳ್ದ ವೊಡ್ಡಾರಾಧನೆಯ ಕವಚವು ಮಂಗಳಂ ಮಹಾಶ್ರೀ.

---

*ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ XXIV—ಸಂ. ೫, ೧೯೩೦.

ಸ್ವಸ್ತಿ ಶ್ರೀಮತ್ ಸಕವರ್ಷ ೧೩೨೫ ಸುಭಾನು ಸಂವತ್ಸರದ ಕಾ ಬ ಅಮಾವಾಸೆ ಬುಧವಾರದಲು ಶ್ರೀಮದ್ರಾಯರಾಜಗುರು ಮಂಡಳಾಚಾರ್ಯ ಮಹಾ ವಾದವಾದೀಶ್ವರ ರಾಯವಾದಿ ಪಿತಾಮಹ ಸಕಳ ವಿದ್ವಜ್ಜನ ಚಕ್ರವರ್ತಿಗಳುಮಪ್ಪ ಶ್ರೀ ಚಿಕ್ಕಪಂಡಿತ ದೇವರ ಪ್ರಿಯಾಗ್ರ ಗುಡ್ಡನು ಕ್ಷೇಮಪುರದ ಅಮ್ಮಿಯಣ್ಣ ಸೆಟ್ಟಿಯ ಮಗ ಹರಿಯಣ್ಣನು ಉುಮನಿಯಮ ಸ್ವಾಧ್ಯಾಯ ಧ್ಯಾನ ಮೌನಾನು ಷ್ಠಾನ ಜಪತಪಸ್ಸಮಾಧಿ ಶೀಲಗುಣಸಂಪನ್ನರುಮಪ್ಪ ಶ್ರೀ ಭಾನುಮುನಿಗಳ ವಾಕ್ಯಾಮೃತದಿಂ ಬರೆದುಕೊಟ್ಟನು. ಬರಸಿಕೊಟ್ಟನು. ಓಜಣ್ಣ ಸೆಟ್ಟಿಯರ ಮಗ ಕಲ್ಲಪ್ಪ ಸೆಟ್ಟಿಯ ಕಮಲ ಶ್ರೀ ಅವ್ವಗಳಿಗೆ ಆತ್ಮಾರ್ಥವಾದೀ ವೊಡ್ಡಾರಾಧನೆಯ ಬರಿಯಿಸಿಕೊಟ್ಟುದಕ್ಕೆ ಮಂಗಳಂ ಮಹಾಶ್ರೀ.

ಇದರಿಂದ ಒಂದೆರಡು ಮುಖ್ಯವಾದ ಸಂಗತಿಗಳು ತಿಳಿಯುತ್ತವೆ. ಗ್ರಂಥಕರ್ತನ ಹೆಸರು ಶಿವಕೋಟ್ಯಾಚಾರ್ಯ ಎಂದು ಸ್ಪಷ್ಟವಾಗಿದೆ. ಹಿಂದೆ ಈ ಹೆಸರು ರೇವಾಕೋಟ್ಯಾಚಾರ್ಯ ಎಂದು ಇದ್ದಿರಬೇಕೆಂದು ಕೆಲವು ಆಧಾರ ಗಳಿಂದ ಊಹೆಮಾಡಲಾಗಿತ್ತು. (ಕ.ಸಾ.ಪ.ಪ. XVI ಪು. ೧೭೫). ಅದು ಸರಿಯಲ್ಲವೆಂದು ಈಗ ಹೇಳಲು ಸಾಧ್ಯವಾಗಿದೆ. ಈ ಶಿವಕೋಟ್ಯಾಚಾರ್ಯನು ಯಾರು, ಯಾವಾಗ ಇದ್ದನು ? ಎಂಬಿವೇ ಮುಂತಾದ ವಿಷಯಗಳನ್ನು ಕುರಿತು ಮುಂದೆ ಬರೆಯುವವನಿದ್ದೇನೆ.

"ವೊಡ್ಡಾರಾಧನೆಯ ಕವಚವು ಮಂಗಳಂ" ಎಂದು ಹೇಳಿರುವುದರ ಉದ್ದೇಶವೇನು ? ಕವಚ ಗ್ರಂಥಗಳು ಎಂದು ಒಂದು ಬಗೆಯ ಗ್ರಂಥ ಜಾತಿ ಜೈನ ಸಾಹಿತ್ಯದಲ್ಲಿ ಇದೆಯೆಂದು ಕೆಲವರು ಹೇಳುತ್ತಾರೆ. ಇದರ ಸ್ವರೂಪ ರಚನೆಗಳೇನು ?

ಈ ಪ್ರತಿ ಹುಟ್ಟಿದ ಕಾಲ ಶಕ ೧೩೨೫ ಎಂದರೆ ಕ್ರಿ. ಶ. ೧೪೦೩. ಇದ ರದಲ್ಲಿ ಱಕಾರವನ್ನು ತಪ್ಪದೆ ಉಪಯೋಗಿಸಿದೆ. ಬಹುಶಃ ಇದು (ಕ) ಪ್ರತಿ ಗಿಂತಲೂ (ಓರಿಯಂಟಲ್ ಲೈಬ್ರರಿ, ಮೈಸೂರು. K. No. ೪೧೫) ಹಳೆಯ ದಾಗಿರಬೇಕೆಂದು ತೋರುತ್ತದೆ. (ಕ) ಪ್ರತಿಯ ಪಾಠಕ್ಕೂ ಇದಕ್ಕೂ ಸ್ವಲ್ಪ

ವ್ಯತ್ಯಾಸ ಕಾಣುತ್ತದೆ. ಅಲ್ಲಲ್ಲಿ ಕೆಲವು ಪದಗಳನ್ನೂ ವಾಕ್ಯಗಳನ್ನೂ ಇದರಲ್ಲಿ ಹೆಚ್ಚಾಗಿ ಸೇರಿಸಿರುವಂತೆ ತಿಳಿಯುತ್ತದೆ. ಇವೆರಡರಲ್ಲಿ ಯಾವುದು ಮೂಲ ಎಂಬುದನ್ನು ತಿಳಿಯುವುದು ಕಷ್ಟ.

"ವೊಡ್ಡಾರಾಧನೆ"ಯ ಮತ್ತೊಂದು ಪ್ರತಿ ಸಾಲಿಗ್ರಾಮದ ಶ್ರೀಮಾನ್ ಸರಾಫ್ ಪದ್ಮರಾಜಯ್ಯನವರಲ್ಲಿದೆ. ಆ ಪ್ರತಿಯನ್ನು ಅವರು ನನಗೆ ತೋರಿಸಿದ್ದಕ್ಕೆ ತುಂಬ ಕೃತಜ್ಞನಾಗಿದ್ದೇನೆ. ಅದರ ಕೊನೆಯಲ್ಲಿ ಬರೆದಿರುವ ಗ್ರಂಥ ಕರ್ತನ ಹೆಸರನ್ನು ಶಿವಕೋಟ್ಯಾಚಾರ್ಯ ಎಂದಾಗಲಿ ರೇವಕೋಟ್ಯಾಚಾರ್ಯ ಎಂದಾಗಲಿ ಓದಲು ಸಾಧ್ಯವಿದೆ. ರೆ ಮತ್ತು ಶಿ ಎಂಬೆರಡು ಅಕ್ಷರಗಳ ಆಕಾರ ಗಳಲ್ಲಿ ಸಾದೃಶ್ಯ ಇದೆ. ಇದರಿಂದಲೇ ಏನೋ ಪ್ರೊ॥ ಪಾಠಕ್ ಅವರು ರೇವಾ ಕೋಟ್ಯಾಚಾರ್ಯ ಎಂದು ಹೆಸರನ್ನು ಓದಿರುವುದು. ಈ ಪ್ರತಿಯ ಪಾಠಾಂತರಗಳನ್ನು ಗುರುತಿಸಿಕೊಳ್ಳಲು ಅವಕಾಶ ದೊರೆಯದಿದ್ದುದಕ್ಕಾಗಿ ವಿಷಾದಿಸಬೇಕಾಗಿದೆ.

ಈ ಪುಸ್ತಕದ ಸಂಪಾದನೆಯ ವಿಷಯವಾಗಿ ಒಂದು ಮಾತು. (ಕ) ಪ್ರತಿಯಲ್ಲಿ ಎಲ್ಲಾ ಕಥೆಗಳು ಇದ್ದರೂ ಕೆಲವೆಡೆ ಗ್ರಂಥಪಾತವಾಗಿದೆ. (ಖ) ಪ್ರತಿಯಲ್ಲಿ ಕೆಲವು ಕಥೆಗಳಿಲ್ಲ, (ಕ)ದಲ್ಲಿ ನಷ್ಟವಾಗಿರುವ ಭಾಗವನ್ನು ತುಂಬಲು ಇದು ಸ್ವಲ್ಪಮಟ್ಟಿಗೆ ಸಹಾಯಕವಾಗಿದೆ. ಇಲ್ಲಿ ಬರುವ ಪ್ರಾಕೃತ ಸಂಸ್ಕೃತ ಶ್ಲೋಕಗಳ ಪಾಠವನ್ನು ಸರಿಯಾಗಿ ಪರಿಷ್ಕರಿಸಲು ಸಾಧ್ಯವಾಗಿಲ್ಲ. ಎರಡೇ ಪ್ರತಿಗಳಿಂದ ಸಂಪಾದನೆಯ ಕೆಲಸ ಸಮರ್ಪಕವಾಗಿ ನೆರವೇರಲಾರದು. ಸಾಧಾರಣವಾಗಿ ಯಾವ ಅತಿಯಾದ ತಿದ್ದುಪಾಡುಗಳನ್ನೂ ಮಾಡದೆ ಮೂಲ ಪ್ರತಿಗಳ ಪಾಠಗಳನ್ನು ಇಲ್ಲಿ ಕೊಡಲು ಪ್ರಯತ್ನಿಸಿದೆ. ಆದಷ್ಟುಮಟ್ಟಿಗೆ ಪರಿಷ್ಕರಿಸಿ ಈ ಗ್ರಂಥ ಬೆಳಕಿಗೆ ಬರಬೇಕೆಂಬ ಉದ್ದೇಶದಿಂದ ಅಚ್ಚುಹಾಕಿಸುವ ಕೆಲಸವನ್ನು ಕೈಗೊಂಡಿದೆ. ಮುಂದೆ ಹೆಚ್ಚು ಪ್ರತಿಗಳು ದೊರೆತಾಗ ಗ್ರಂಥಪರಿಷ್ಕರಣವನ್ನು ಸರಿಯಾಗಿ ಮಾಡಲು ಸಾಧ್ಯವಾದೀತು.

೧೯೩೪

*ಶ್ರೀ

ವಡ್ಡಾರಾಧನೆಯ ಮೊದಲನೆಯ ಕಥೆಯಾದ "ಸುಕುಮಾರಸ್ವಾಮಿಯ ಕಥೆ" ಅಚ್ಚಾದ ಮೇಲೆ ಬೇರೆ ನಾಲ್ಕು ಹಸ್ತಲಿಖಿತ ಪ್ರತಿಗಳು ದೊರೆತುವೆಂಬ ವಿಷಯ ಸಂತೋಷಕ್ಕೆ ಕಾರಣವಾಗಿದೆ. ಸಾಲಿಗ್ರಾಮದ ಶ್ರೀಮಾನ್ ಸರಾಫ್ ಪದ್ಮರಾಜಯ್ಯನವರು ತಮ್ಮ ಬಳಿಯಿದ್ದ ಮೂರು ಪ್ರತಿಗಳನ್ನೂ ಉದಾರ ಮನಸ್ಸಿನಿಂದ, ಪರಿಷತ್ತಿನ ಉಪಾಧ್ಯಕ್ಷರ ಪ್ರಾರ್ಥನೆಯಂತೆ, ಅವರಿಗೆ ಕಳಿಸಿ ಕೊಟ್ಟರು. ಬಿಹಾರ್ ಪ್ರಾಂತ್ಯದಲ್ಲಿರುವ ಆರಾ ಸೆಂಟ್ರಲ್ ಜೈನ ಓರಿಯಂಟಲ್ ಲೈಬ್ರರಿಯ ಶ್ರೀಮಾನ್ ಕೆ. ಭುಜಬಲಿ ಶಾಸ್ತ್ರಿಗಳು ವಡ್ಡಾರಾಧನೆಯ ಒಂದು ಪ್ರತಿಯನ್ನು ದಯವಿಟ್ಟು ಪರಿಷತ್ತಿನ ಉಪಾಧ್ಯಕ್ಷರಿಗೆ ಕಳಿಸಿದ್ದಾರೆ. ಇವರಿಬ್ಬರು ಮಹನೀಯರಿಂದ ಆಗಿರುವ ಸಹಾಯ ಅಷ್ಟಿಷ್ಟೆಂದು ಹೇಳುವಹಾಗಿಲ್ಲ. ಈ ಮಾನ್ಯರಿಗೂ, ಪ್ರತಿಗಳನ್ನು ತರಿಸಿಕೊಟ್ಟ ಪರಿಷತ್ತಿನ ಉಪಾಧ್ಯಕ್ಷರಾದ ರಾಜಸೇವಾಸಕ್ತ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯ, ಎಂ.ಎ.,ಬಿ.ಎಲ್. ಅವರಿಗೂ ಕೃತಜ್ಞತೆಯಿಂದ ಕೂಡಿದ ವಂದನೆಗಳನ್ನು ಸಮರ್ಪಿಸುತ್ತೇನೆ. ಪರಿಷತ್ತಿನ ಉಪಾಧ್ಯಕ್ಷರ ಅಪ್ಪಣೆಯನ್ನು ಪಡೆದು ಪರಿಷತ್ತಿನ ಪರವಾಗಿಯೂ ಮೇಲ್ಕಂಡ ಜೈನ ಮಹನೀಯರಿಗೆ ವಂದನೆಗಳನ್ನು ಸಲ್ಲಿಸುತ್ತೇನೆ. ಈಗ ದೊರೆತಿರುವ ಈ ನಾಲ್ಕು ಪ್ರತಿಗಳೂ ಹಿಂದಿನ ಎರಡು ಪ್ರತಿಗಳೂ ಸೇರಿ ಒಟ್ಟು ಆರು ಪ್ರತಿಗಳು ದೊರೆತಂತಾಯಿತು. ನಾಲ್ಕು ಹೊಸ ಪ್ರತಿಗಳಿಂದ ಸಂಪಾದನೆಯ ಕೆಲಸಕ್ಕೆ ಬಹಳ ಸಹಾಯವಾಗಿದೆ.

ಶ್ರೀಮಾನ್ ಪದ್ಮರಾಜಯ್ಯನವರ ಮೂರು ಪ್ರತಿಗಳಲ್ಲಿ ಒಂದು ಕಾಗದದ ಪ್ರತಿ. ಎರಡು ಓಲೆಯ ಪ್ರತಿಗಳು. ಕಾಗದದ ಪ್ರತಿಗೆ ಇಲ್ಲಿ (ಗ) ಎಂಬ ಸಂಕೇತವನ್ನು ಕೊಟ್ಟಿದೆ. ಇದನ್ನು ಬರೆದ ಕಾಲ "ಶಕಸಾವಿರದ ಯಂಟನೂರ ಇಪ್ಪತ್ತನೆ ವಿಳಂಬಿನಾಮ ಸಂವತ್ಸರದ ಪುಷ್ಯ ಬಹುಳ ಅಮಾವಾಸ್ಯೆ ಶುಕ್ರವಾರದಲ್ಲಿ" ಎಂದಿರುವುದರಿಂದ ಕ್ರಿ. ಶ. 1898 ಎಂದು

---

* ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಸಂಚಿಕೆ 2, ಪುಟಗಳು i-v

ಗೊತ್ತಾಗುತ್ತದೆ. ಮೈಸೂರಿನ ಓರಿಯಂಟಲ್ ಲೈಬ್ರರಿಯಲ್ಲಿರುವ (ಕ) ಪ್ರತಿಯನ್ನು ಶ್ರೀಮಾನ್ ಸರಾಫ್ ಪದ್ಮರಾಜಯ್ಯನವರೇ 1920ನೆಯ ಇಸವಿ ಫೆಬ್ರುವರಿ ೨೪ನೆಯ ತಾರೀಖಿನಲ್ಲಿ ಅದರ ಭಂಡಾರಕ್ಕೆ ಕೊಟ್ಟರು. (ಗ) ಪ್ರತಿ (ಕ) ಪ್ರತಿಯ ಆಧಾರದ ಮೇಲೆ ಹುಟ್ಟಿದೆ. ಈಗ (ಕ) ಪ್ರತಿಗೆ ಇರುವಷ್ಟು ಜೀರ್ಣಾವಸ್ಥೆ 1899ನೆಯ ಇಸವಿಯಲ್ಲಿ ಅದಕ್ಕೆ ಇದ್ದಿರಲಾರದು. ಆದ್ದರಿಂದ ಅದರಲ್ಲಿ ಈಗ ಮುರಿದುಹೋಗಿ ನಷ್ಟವಾಗಿರುವ ಭಾಗಗಳು ಅದರ ನಕಲೇ ಆದ (ಗ) ಪ್ರತಿಯಲ್ಲಿ ಹಲವೆಡೆಗೆ ದೊರೆಯುತ್ತವೆ. ಉದಾಹರಣೆಗಾಗಿ ಗ್ರಂಥಕರ್ತನ ಹೆಸರನ್ನೇ ತೆಗೆದುಕೊಳ್ಳಬಹುದು. (ಕ) ಪ್ರತಿಯಲ್ಲಿ ಈಗ ಆ ಹೆಸರಿನ ಮೊದಲ ಎರಡು ಅಕ್ಷರಗಳು ಗಲಿತವಾಗಿವೆ. (ಗ) ಪ್ರತಿಯಲ್ಲಿ "ಶಿವಕೋಟ್ಯಾಚಾರ್ಯ" ಎಂದು ಆ ಹೆಸರು ಸ್ಪಷ್ಟವಾಗಿದ್ದು ಮೊದಲ ಎರಡು ಅಕ್ಷರಗಳಾದ 'ಶಿವ' ಎಂಬುವು ದೊರೆಯುತ್ತವೆ. (ಖ) ಪ್ರತಿ ಮೂಡಬಿದರೆಯ ಶ್ರೀಮಾನ್ ಲೋಕನಾಥಶಾಸ್ತ್ರಿಗಳಿಂದ ಮೈಸೂರಿನ ಓರಿಯಂಟಲ್ ಲೈಬ್ರರಿಗೆ ಬಂತೆಂದು ಹಿಂದಿನ 'ಅರಿಕೆ'ಯಲ್ಲಿ ಹೇಳಿದೆ. ಈಚೆಗೆ ತಿಳಿದು ಬಂದಿರುವುದರಲ್ಲಿ ಆ ಪ್ರತಿ ಮೂಡಬಿದರೆಯ ಶ್ರೀ ಶ್ರೀ ಚಾರುಕೀರ್ತಿ ಪಂಡಿತಾಚಾರ್ಯ ಸ್ವಾಮಿಗಳವರ ಶ್ರೀ ಮಠಕ್ಕೆ ಸೇರಿದ್ದೆಂದು ಗೊತ್ತಾಗಿದೆ. (ಕ), (ಖ), (ಗ) ಎಂಬೀ ಮೂರು ಪ್ರತಿಗಳ ಪಾಠ ಸಾಮಾನ್ಯವಾಗಿ ಒಂದೇ ರೀತಿಯಾಗಿದೆ. ಆದ್ದರಿಂದ ಈ ಮೂರು ಒಂದು ಸಂಪ್ರದಾಯಕ್ಕೆ ಸೇರಿದುವೆಂದು ಊಹಿಸಬಹುದು.

ಶ್ರೀಮಾನ್ ಪದ್ಮರಾಜಯ್ಯನವರ ಉಳಿದ ಎರಡು ಓಲೆಯ ಪ್ರತಿಗಳಿಗೆ (ಘ), (ಚ) ಎಂಬ ಸಂಕೇತಗಳನ್ನು ಕೊಟ್ಟಿದೆ. (ಘ) ಪ್ರತಿ ಮೂಡಬಿದರೆಯ ಮೇಲೆ ಹೇಳಿರುವ ಶ್ರೀ ಮಠಕ್ಕೆ ಸೇರಿದ್ದೆಂದು ಕಾಣುತ್ತದೆ. ಇದನ್ನು ಬರೆದ ಶಕ ಸಂವತ್ಸರ ನಿರ್ದಿಷ್ಟವಾಗಿಲ್ಲ. "ಭಾವ ಸಂವತ್ಸರದ ಪುಷ್ಯ ಬ ॥ 5 ॥ ಪಂಚಮಿ ಸೋಮವಾರದಲು" ಈ ಪ್ರತಿ ಹುಟ್ಟಿತು. ಇದರಲ್ಲಿ ಱಕಾರದ ಪ್ರಯೋಗ ಸಾಮಾನ್ಯವಾಗಿ ಸರಿಯಾಗಿದೆ. (ಚ) ಪ್ರತಿ ಮೈಸೂರು ಜಿಲ್ಲೆಯ ಸರಗೂರು ಪ್ರಾಂತ್ಯದ ಓಲೆಯ ಪುಸ್ತಕವೆಂದು ಗೊತ್ತಾಗುತ್ತದೆ. ಇದು ಬಹಳ ಜೀರ್ಣವಾಗಿ ಮುಟ್ಟಿದರೆ ಎಲ್ಲಿ ಓಲೆ ಒಡೆದು ಹೋಗುತ್ತದೋ ಎನ್ನುವ ಸ್ಥಿತಿಯಲ್ಲಿದೆ. "ಚಾಣಕ್ಯ"ನ ಕಥೆಯವರೆಗೆ ಮಾತ್ರ ಗ್ರಂಥ ದೊರೆ

ಯುತ್ತದೆ; ಆದ್ದರಿಂದ ಅಪೂರ್ಣ. ಇದರಲ್ಲಿ ಱಕಾರವನ್ನು ಬಲುಮಟ್ಟಿಗೆ ಸರಿಯಾಗಿ ಉಪಯೋಗಿಸಿದೆ. ಇದರ ಲೇಖನ ಕಾಲ ತಿಳಿಯುವುದಿಲ್ಲ. ಮೇಲೆ ಹೇಳಿರುವ (ಘ), (ಜ), (ಛ) ಎಂಬೀ ಮೂರು ಪ್ರತಿಗಳ ಪಾಠಗಳಲ್ಲಿ ಬಹು ಐಕ್ಯತೆ ಇದೆ. (ಕ), (ಖ), (ಗ) ಪ್ರತಿಗಳ ಪಾಠಕ್ಕೂ, ಈ ಮೂರರ ಪಾಠಕ್ಕೂ ಬಹಳ ವ್ಯತ್ಯಾಸವಿರುವುದರಿಂದ ಈ ಕೊನೆಯ ಮೂರು ಪ್ರತಿಗಳು ಬೇರೊಂದು ಸಂಪ್ರದಾಯಕ್ಕೆ ಸೇರಿದುವೆಂದು ಭಾವಿಸಲು ಸಾಧ್ಯವಾಗಿದೆ.

ಹೀಗೆ ಈ ಆರು ಹಸ್ತಲಿಖಿತ ಪ್ರತಿಗಳನ್ನು ಎರಡು ಗುಂಪುಗಳಾಗಿ ಒಡೆಯಬಹುದು. ಇವುಗಳಲ್ಲಿ ಯಾವ ಗುಂಪಿನ ಪಾಠ ಗ್ರಾಹ್ಯ, ಯಾವುದು ಗ್ರಂಥಕರ್ತನ ಮೂಲಪ್ರತಿಯ ಪಾಠಕ್ಕೆ ಸಮೀಪತರವಾಗಿರಬಹುದು—ಎಂಬಿವೇ ಮುಂತಾದ ವಿಷಯಗಳನ್ನು ನಿರ್ಣಯಿಸಬೇಕಾಗಿದೆ. ಇದನ್ನು ಕುರಿತು ಮುಂದೆ ವಿಸ್ತಾರವಾಗಿ ಬರೆಯಲಾಗುತ್ತದೆ. ಸಂಪಾದನೆ ಮಾಡುವಾಗ ಇದನ್ನು ಗಮನಿಸಲು ಪ್ರಯತ್ನಿಸಿದೆ.

ಈ ಪುಸ್ತಕದ ಹೆಸರಿನ ಸರಿಯಾದ ರೂಪ ಯಾವುದು ಎಂಬುದನ್ನು ಕುರಿತು ಕೊಂಚ ಹೇಳುವುದಿದೆ. 'ವೊಡ್ಡಾರಾಧಣಂ', 'ವೊಡ್ಡಾರಾಧನೆ' ಎಂದು ಎರಡು ರೀತಿಯಾಗಿ ಹಿಂದೆ ಅಚ್ಚಾಗಿದೆ. ಗ್ರಂಥಕರ್ತನು ಇಟ್ಟ ಹೆಸರು ಸಂಪ್ರತಿಕಾರರ ಕೈಯಲ್ಲಿ ಈ ರೂಪಾಂತರಗಳನ್ನು ತಾಳಿರುವುದೆಂದು ಹೇಳಬಹುದು. ಪ್ರತಿಗಳಲ್ಲಿ ದೊರೆಯುವ ಹೆಸರುಗಳನ್ನು ಇಲ್ಲಿ ಕೊಟ್ಟು ಅನಂತರ ಈ ವಿಷಯವಾಗಿ ವಿಚಾರಿಸಬೇಕಾಗಿದೆ :

(ಕ) ಪ್ರತಿಯ ಪ್ರಕಾರ : ವೊಡ್ಡಾರಾಧಣಂ, ಪೊಡ್ಡಾರಾಧನೆ
(ಖ) ಪ್ರತಿಯ ಪ್ರಕಾರ : ವೊಡ್ಡಾರಾಧನೆ, ಒಡ್ಡಾರಾಧನೆ
(ಗ) ಪ್ರತಿಯ ಪ್ರಕಾರ : ವೊಡ್ಡಾರಾಧಣಂ, ವೊಡ್ಡಾರಾಧನೆ
(ಘ) ಪ್ರತಿಯ ಪ್ರಕಾರ : ವಡ್ಡಾರಾಧನೆ, ವಡ್ಡಾರಾಧನೆ
(ಜ) ಪ್ರತಿಯಲ್ಲಿ ಗ್ರಂಥದ ಹೆಸರು ದೊರೆಯುವುದಿಲ್ಲ.
(ಛ) ಪ್ರತಿಯ ಪ್ರಕಾರ : ವೊಡ್ಡಾರಾಧನೆ (ಮೊದಲ ಓಲೆಯ ಅಂಚಿನಲ್ಲಿರುವ ಲಿಖಿತ). ಈ ಹೆಸರುಗಳಲ್ಲಿ ನಾಲ್ಕುವಿಧಗಳಿವೆ—ವೊಡ್ಡಾ

ರಾಧನೆ, ಒಡ್ಡಾರಾಧನೆ, ವಡ್ಡಾರಾಧನೆ, ಯಾವುದನ್ನೇ ನೋಡಿದರೂ ಎರಡು ಪದಗಳು ಸೇರಿ ಸಮಾಸವಾಗಿರುವುದು ಸ್ಪಷ್ಟ. ಮೊದಲು ಎರಡನೆಯ ಪದವಾದ ಆರಾಧಣಂ (ಆರಾಧನೆ) ಎಂಬುದನ್ನು ನೋಡೋಣ. ಇದು ಸಂಸ್ಕೃತದ ಆರಾಧನಂ (ಆರಾಧನಾ) ಎಂಬ ಶಬ್ದದ ರೂಪಾಂತರ. ಪ್ರಾಕೃತದಲ್ಲಿ ಸಾಮಾನ್ಯವಾಗಿ ಇದರ ರೂಪ ಆರಾಹಣಂ (ಆರಾಹಣಾ) ಎಂದಾಗುತ್ತದೆ. ನೇರವಾಗಿ ಪ್ರಾಕೃತದಿಂದ ಈ ಶಬ್ದ ಕನ್ನಡಕ್ಕೆ ಬಂದಿದ್ದರೆ ಇದೇ ರೂಪ ಗ್ರಂಥದ ಹೆಸರಿನಲ್ಲಿ ಇರಬೇಕು. ಇದು ಯಾವ ಪ್ರತಿಯಲ್ಲಿಯೂ ದೊರೆಯುವುದಿಲ್ಲ. ಸಂಸ್ಕೃತ ಶಬ್ದಗಳ ಮಧ್ಯಾಂತಸ್ಥಾನಗಳಲ್ಲಿರುವ ಕತಪ ವರ್ಗಗಳ ಮಹಾಪ್ರಾಣಗಳು ಎರಡು ಸ್ವರಗಳ ನಡುವೆ ಇದ್ದರೆ ಹಕಾರವಾಗುತ್ತವೆ ಎಂಬುದು ಪಾಕೃತದ ಸಾಮಾನ್ಯ ನಿಯಮವಾದರೂ ಶೌರಸೇನೀ ಪ್ರಾಕೃತದಲ್ಲಿ ಕೆಲವು ವೇಳೆ ಅವು ಹಾಗೆಯೇ ಉಳಿಯುವಂತೆ ತೋರುತ್ತದೆ. ಇದರಂತೆ 'ಆರಾಧಣಂ' ಎಂಬ ರೂಪವೂ ಪ್ರಾಕೃತವಾಗಬಹುದು. ಅದೇ ಕನ್ನಡಕ್ಕೆ ನೇರವಾಗಿ ಬಂದಿರಬೇಕು. 'ಆರಾಧನೆ' ಎಂಬುದಂತೂ ಕನ್ನಡದ ರೂಪವೇ ಆದ್ದರಿಂದ ಪ್ರಕೃತ ಗ್ರಂಥದ ಹೆಸರಿನಲ್ಲಿರುವ ಎರಡನೆಯ ಪದ ಬಹುಶಃ 'ಆರಾಧನೆ' ಎಂದಿರಬೇಕು; "ಆರಾಧಣಂ" ಎಂದಿರುವುದು ತಪ್ಪಲ್ಲ.

ಇನ್ನು ಮೊದಲನೆಯ ಪದವನ್ನು ನೋಡಬಹುದು. ಅದಕ್ಕೆ ವೊಡ್ಡ, ಒಡ್ಡ, ವಡ್ಡ — ಎಂಬ ಮೂರು ರೂಪಗಳಿವೆ. ಯಾವುದು ಸರಿ ಎಂಬುದು ಪ್ರಶ್ನೆ; ಯಾವುದು ಅತಿ ಪ್ರಾಚೀನ ರೂಪವೆಂಬುದೂ ಹಾಗೆಯೇ. (1) ಸಂಸ್ಕೃತದ ವೃಧ್ ಅಥವಾ ವರ್ಧ್ ಎಂಬ ಧಾತುವಿನಿಂದ ಹುಟ್ಟಿದ ಶಬ್ದಗಳು ಪ್ರಾಕೃತವಾಗುವಾಗ ಆದಿಯಲ್ಲಿ ವಡ್ಢ ಎಂಬ ವಿಕಾರವನ್ನು ಹೊಂದುತ್ತವೆ; ಕೆಲವು ಉದಾಹರಣೆಗಳು:

| ಸಂಸ್ಕೃತ | ಪ್ರಾಕೃತ |
|---|---|
| ವೃಧ್ | ವಡ್ಢ |
| ವರ್ಧಕಿ | ವಡ್ಢಇ |
| ವರ್ಧನ | ವಡ್ಢಣ |

| | |
|---|---|
| ವರ್ಧಮಾನ | ವಡ್ಢಮಾಣ |
| ವರ್ಧಾಪನ | ವಡ್ಢವಣ |
| ವರ್ಧಿನ್ | ವಡ್ಢಿ |
| ವೃದ್ಧಿ | ವುಡ್ಢಿ—ವಡ್ಢಿ |
| ವರ್ಧಿತ | ವಡ್ಢಿಯ |
| ವೃದ್ಧ | ವಡ್ಢ. ವುಡ್ಢ. ವಿದ್ಧ |

ಆದ್ದರಿಂದ ವಡ್ಢ ಎಂಬುದು ವೃದ್ಧ ಎಂಬ ಶಬ್ದದ ಪ್ರಾಕೃತೀಕರಣವೆಂಬುದರಲ್ಲಿ ಸಂಶಯ ಬರಲಾರದು. ಅದೇ ಮಹಾಪ್ರಾಣವನ್ನು ನೀಗಿಕೊಂಡು ಕನ್ನಡದಲ್ಲಿ "ವಡ್ಡ" ಎಂದಾಗಿದೆ. ವಡ್ಡಗಿ, ವಡ್ಡಂತಿ—ಇಂಥ ಇನ್ನೂ ಕೆಲವು ಪ್ರಯೋಗಗಳು ಕನ್ನಡದಲ್ಲಿವೆ.

(೨) ಪ್ರಾಕೃತದಲ್ಲಿ "ವಡ್ಡ" ಎಂದು ಬೇರೊಂದು ಶಬ್ದವಿದೆ. ಇದನ್ನು ಹೇಮಚಂದ್ರನು ದೇಶೀ ಪಂಗಡಕ್ಕೆ ಸೇರಿಸಿದ್ದಾನೆ. (ದೇಶೀ ನಾಮಮಾಲಾ vii-29) ಅದಕ್ಕೆ ಅರ್ಥ ಮಹತ್ ಅಥವಾ ದೊಡ್ಡದು ಎಂದು. ಹೇಮಚಂದ್ರನು ಇದನ್ನು ದೇಶೀ ಎಂದು ಹೇಳಿರುವುದಕ್ಕೆ ಕಾರಣಗಳು ಅವನ್ನು ಸಂಸ್ಕೃತ ಶಬ್ದದಿಂದ ಪ್ರಾಕೃತ ವ್ಯಾಕರಣ ನಿಯಮಕ್ಕನುಸಾರವಾಗಿ ನಿಷ್ಪನ್ನಮಾಡಲು ಅರಿದಾಗಿ ಆತನಿಗೆ ಕಂಡುಬಂದದ್ದೂ ಸ್ವಲ್ಪ ಅರ್ಥ ವ್ಯತ್ಯಾಸವೂ ಆಗಿರಬೇಕು. ವಡ್ಢ ಎಂಬಲ್ಲಿನ ಮಹಾಪ್ರಾಣ ಅಲ್ಪಪ್ರಾಣವಾಗುವುದಕ್ಕೆ ಅವಕಾಶವಿಲ್ಲ ಪ್ರಾಕೃತದಲ್ಲಿ. ಹೇಮಚಂದ್ರನಿಗೆ ಈ ಕಷ್ಟ ಬಂದು ದೇಶೀ ಎಂದು ಹೇಳಿಬಿಟ್ಟನು. ನ್ಯಾಯವಾಗಿ ಅದು ವೃಧ್ ಧಾತುವಿನಿಂದಲೇ ಜನ್ಯವಾದದ್ದು ; ಅದಕ್ಕಿರುವ ಅರ್ಥವನ್ನು ಅದೇ ಧಾತುವಿನಿಂದಲೇ ಸಾಧಿಸಬಹುದು, ಆದ್ದರಿಂದ "ವಡ್ಡ" ಎಂಬುದನ್ನು ನಾವು ದೇಶೀ ಎಂದು ಭಾವಿಸಬೇಕಾಗಿಲ್ಲ. ಅದು ಸಂಸ್ಕೃತದಿಂದ ಬಂದದ್ದೇ. ವೃಧ್, ಹೆಚ್ಚಾಗು. ಬೆಳೆ ಎಂಬರ್ಥವೇ ವಿಸ್ತಾರವಾಗಿ ಮಹತ್ ಎಂಬರ್ಥವನ್ನು ಪಡೆದಿದೆ. ವಡ್ಡ—ದೊಡ್ಡದು ಎಂಬುದಕ್ಕೆ ಪ್ರಯೋಗ ಕನ್ನಡದಲ್ಲಿಯೂ ಉಂಟು ; ವಡ್ಡಾಗರ (ಅಗ್ಗಳ : ಚಂದ್ರಪ್ರಭ ಪುರಾಣ, 5–47)

(1) ಮತ್ತು (2) ರಿಂದ "ವಡ್ಡ" ಎಂಬ ರೂಪ ಸರಿಯಾದದ್ದು ಎಂದು ಕಂಡುಬರದೆ ಇರಲಾರದು.

(೩) "ವಡ್ಡ" ಎಂಬುದು ಬೃಹತ್ ಶಬ್ದದ ರೂಪಾಂತರವೇ ಎಂಬ ಶಂಕೆ ಬರಲು ಕಾರಣವಿದೆ. ಗಂಗರಾಜನಾದ ದುರ್ವಿನೀತನು "ದೇವಭಾರತೀನಿಬದ್ಧ ಬೃಹತ್ಕಥಃ" ಎಂದು ಕೆಲವು ಶಾಸನಗಳಲ್ಲಿ ಪರಿಕೀರ್ತಿತನಾಗಿದ್ದಾನೆ. "ಬೃಹತ್ಕಥಃ" ಎಂಬುದಕ್ಕೆ ಬದಲಾಗಿ ಕೆಲವು ಶಾಸನಗಳಲ್ಲಿ 'ವಡ್ಡಕಥೇನ' ಎಂದಿದೆ (Uttanur plates : M.A.R. 1916, 1917 paras 65, 66) ಇವರಿಂದ ಆ ಎರಡು ಶಬ್ದಗಳಿಗೆ ಸಂಬಂಧವಿರಬೇಕೆಂದು ತೋರುತ್ತದೆ. ಆದರೆ ಇದು ಸರಿಯಲ್ಲ. ಬೃಹತ್ ಎಂಬುದು ಪ್ರಾಕೃತದಲ್ಲಿ ವಡ್ಡ ಎಂಬ ರೂಪವನ್ನು ತಾಳುವುದಿಲ್ಲ; ಬಹಣ ಎಂಬ ರೂಪವನ್ನು ಮಾತ್ರ ಹೊಂದುತ್ತದೆ. ಆದ್ದರಿಂದ ಬೃಹತ್, ವಡ್ಡ—ಇವುಗಳಿಗೆ ಜನ್ಯಜನಕ ಸಂಬಂಧವಿಲ್ಲ. ಅವು ಸಮಾನಾರ್ಥಕವಾದ ಶಬ್ದಗಳು, ಅಷ್ಟೇ.

ಇನ್ನು 'ವೊಡ್ಡ' ರೂಪ ಬಂದ ಬಗೆಯನ್ನು ಕಾಣಬಹುದು. ವೃದ್ಧ ಎಂಬುದು ವುಡ್ಡ ಎಂಬುದಾಗಿಯೂ ಮಾರ್ಪಡುವುದೆಂದು ಹಿಂದೆಯೇ ಸೂಚಿಸಿದೆ. ಇದು ಕನ್ನಡಕ್ಕೆ ಬರುವಾಗ ಅದರ ಆದಿಸ್ವರ 'ಉ' ಎನ್ನುವುದು ಒಕಾರವಾಗುತ್ತದೆ, ಕೊಂತಿ, ಸೊಣಗ ಇತ್ಯಾದಿ ಶಬ್ದಗಳಲ್ಲಿರುವಂತೆ. ಆದ್ದರಿಂದ 'ವೊಡ್ಡ' ರೂಪ ಸಿದ್ಧಿಸುತ್ತದೆ.

ಈ 'ವೊಡ್ಡ' ಎಂಬ ಶಬ್ದವೇ ಉಚ್ಚಾರಣೆಯ ಅವಸರದಲ್ಲಿಯೋ, ಮತ್ತಾವ ಕಾರಣದಿಂದಲೋ 'ಒಡ್ಡ' ಎಂಬ ರೂಪವನ್ನು ತಾಳಿರಬೇಕು. ಪೋಲ್–ವೋಲ್–ವೋಲು–ಓಲ್ ಒಲು, ಎಂಬಂತೆ. ಈ 'ಒಡ್ಡ' ಎಂಬ ಶಬ್ದಕ್ಕೂ 'ಓಢ್ರ' ಎಂಬುದರಿಂದ ನಿಷ್ಪನ್ನವಾದ 'ಒಡ್ಡ' ಎಂಬುದಕ್ಕೂ ಯಾವ ಸಂಬಂಧವೂ ಇಲ್ಲ; ಪ್ರಕೃತಕ್ಕೆ ಅದು ಅವಶ್ಯಕವೂ ಅಲ್ಲ.

ಒಟ್ಟಿನಲ್ಲಿ ಪ್ರಕೃತ ಗ್ರಂಥದ ಹೆಸರಿನ ಚರಿತ್ರೆಯನ್ನು ಹೀಗೆ ತೋರಿಸಬಹುದು :

| 1 | 2 |
| --- | --- |
| ವೃದ್ಧಾರಾಧನಂ | ವ(ಪು)ಡ್ಡಾರಾಧಣಂ |
| ವೃದ್ಧಾರಾಧನಾ | ವ(ಪು)ಡ್ಡಾರಾಧನೆ |

| 3 | 4 |
| --- | --- |
| ವೊಡ್ಡಾರಾಧಣಂ | ಒಡ್ಡಾರಾಧಣಂ |
| ವೊಡ್ಡಾರಾಧನೆ | ಒಡ್ಡಾರಾಧನೆ |

ಎರಡನೆಯ ಪಂಗಡದ ಹೆಸರುಗಳು ಮಿಕ್ಕ ಪಂಗಡದ ಹೆಸರುಗಳಿಗಿಂತ ಸಂಸ್ಕೃತಕ್ಕೆ ಸಮೀಪತಮವಾಗಿದ್ದು ಪ್ರಾಚೀನತಮವಾಗಿಯೂ ಇವೆ. "ವಡ್ಡಾರಾಧಣಂ" ಎಂಬಲ್ಲಿಯ ಎರಡನೆಯ ಶಬ್ದದ ರೂಪ ಸಂದೇಹಾಸ್ಪದವಾದದ್ದೆಂದು ಹಿಂದೆಯೇ ಸೂಚಿಸಿದೆ. ಆದ್ದರಿಂದ ಅದನ್ನು ಬಿಟ್ಟು 'ವಡ್ಡಾರಾಧನೆ' ಎಂಬ ರೂಪವನ್ನೇ ಅಂಗೀಕರಿಸಿ ಅದೇ ಹೆಸರಿನಿಂದ ಈ ಗ್ರಂಥವನ್ನು ಕರೆಯಬಹುದು.

ಈಚೆಗೆ ದೊರೆತ ನಾಲ್ಕು ಪ್ರತಿಗಳ ಸಹಾಯದಿಂದ ಸುಕುಮಾರ ಸ್ವಾಮಿಯ ಕಥೆಯಲ್ಲಿ ನಷ್ಟವಾಗಿರುವ ಭಾಗಗಳನ್ನು ತುಂಬಲು ಸಾಧ್ಯವಾಯಿತಲ್ಲದೆ ಕೆಲವು ತಿದ್ದುಪಡಿಗಳನ್ನು ಮಾಡಲು ಅನುಕೂಲವಾಯಿತು.

1940

೪

## ವಡ್ಡಾರಾಧನೆಯೆಂಬ ಕನ್ನಡ ಗದ್ಯಗ್ರಂಥ[1]*

### (ಕರ್ತೃತ್ವ ಮತ್ತು ಕಾಲವಿಚಾರ)

1883ನೆಯ ಇಸವಿಯಷ್ಟು ಹಿಂದೆಯೇ ಕೆ. ಬಿ. ಪಾಠಕರೂ ಅವರನ್ನು

---

*ಪ್ರಬುದ್ಧ ಕರ್ನಾಟಕ, ಸಂ. 24 ; ಸಂ. 2. (ಪುಟಗಳು 93–109)

1 ಸಿಂಘೀ ಗ್ರಂಥಮಾಲೆಯಲ್ಲಿ ಮುದ್ರಿತವಾಗುತ್ತಿರುವ ಹರಿಷೇಣ ಕಥಾಕೋಶದ ಇಂಗ್ಲಿಷ್ ಪ್ರಸ್ತಾವನೆಯ ಒಂದು ಭಾಗವಿದು. ಆ ಗ್ರಂಥವು ನಾಲ್ಕಾರು ತಿಂಗಳಲ್ಲಿ ಪ್ರಕಟವಾಗಬಹುದು. ಕನ್ನಡ ಪಂಡಿತರ ವಿಮರ್ಶನೆಯ ಲಾಭವು ದೊರೆಯಬೇಕೆಂದು ಆ ಭಾಗದ ಕನ್ನಡ ಸಾರಾಂಶವನ್ನು ಇಲ್ಲಿ ಕೊಟ್ಟಿದೆ.

ಅನುಸರಿಸಿ ಜಿ. ಎಫ್. ಫ್ಲೀಟರೂ, ಪಂಚಮಹಾಶಬ್ದ, ನಿಸಿಧಿ ಮುಂತಾದ ಕೆಲವು ಪದಗಳ ಅರ್ಥ ವಿವರಣೆ ಮಾಡುವುದಕ್ಕಾಗಿ ರೇವಾಕೋಟ್ಯಾಚಾರ್ಯ ರಚಿತವಾದ 'ಉಪಸರ್ಗ ಕೇವಲಿಗಳ ಕಥೆ' ಎಂದು ಅವರೇ ಕರೆದಿರುವ ಗ್ರಂಥ ದಿಂದ ಕೆಲವು ಪಂಕ್ತಿಗಳನ್ನು ಉದ್ಧರಿಸಿ ಪ್ರಕಟಿಸಿದರು.[2] ಅವರು ಉಪ ಯೋಗಿಸಿದ ಪ್ರತಿಯ ವಿಚಾರವಾಗಿ ನನಗೆ ತಿಳಿದಮಟ್ಟಿಗೆ ಅವರು ಯಾವ ಸಂಗತಿಯನ್ನೂ ತಿಳಿಸಿಲ್ಲ; ಆದರೆ ಫ್ಲೀಟರ ಮತ್ತೊಂದು ಟಿಪ್ಪಣಿಯಿಂದ[3] ಆ ಪ್ರತಿಯ ಹೊಲಬು ನನಗೆ ಪ್ರಾಸಂಗಿಕವಾಗಿ ತಿಳಿದುಬಂದ ಮೇಲೆ ಕೊಲ್ಲಾಪುರದ ಶ್ರೀ ಲಕ್ಷ್ಮೀಸೇನಭಟ್ಟಾರಕರ ಜೈನಮಠದಲ್ಲಿ ಅದಕ್ಕಾಗಿ ಬಲು ಎಚ್ಚರಿಕೆಯಿಂದ ಹುಡುಕಿದೆನು; ಮೇಲೆ ಹೇಳಿದ ಹೆಸರನ್ನೇ ಹೆಚ್ಚು ಕಡಮೆ ಹೊಂದಿರುವ ಒಂದು ಓಲೆಯ ಗ್ರಂಥ ನನಗೆ ಸಿಕ್ಕಿತು. (ಓಲೆ ಪ್ರತಿ ನಂ. 45)[4]; ಅದರ ಮರದ ಪಟ್ಟಿಯ ಮೇಲೆ ಈ ಹೆಸರು ಬರೆದಿದೆ.

---

2 Indian Antiqualty XII, PP. 95 f 99 f.

3 ಅದೇ ಪು. 216

4 ಈ ಕೊಲ್ಲಾಪುರ ಪ್ರತಿಯ ಸ್ವರೂಪ ಹೀಗಿದೆ : ಎರಡು ಕಡೆಯೂ ಲಿಖಿತ ವಾದ 147 ಪತ್ರಗಳನ್ನುಳ್ಳ ಓಲೆಯ ಗ್ರಂಥವಿದು ; ಕೊನೆಯ ಪುಟ ಖಾಲಿ ಇದೆ. ರಕ್ಷಾಪಟ್ಟಿಗಳನ್ನು ಬಿಟ್ಟು ಅದರ ಗಾತ್ರ ಸುಮಾರು 11.75. x 1.5 x 2 ಇಂಚುಗಳು. ದಾರ ಪೋಣಿಸುವ ವೆಜ್ಜ ಮತ್ತು ಅದನ್ನು ಬಳಸಿರುವ ಜಾಗ ಕಾರಣವಾಗಿ ಪ್ರತಿ ಪುಟದ ಬರವಣಿಗೆಯೂ ಮೂರು ಭಾಗಗಳಾಗಿ ವಿಭಕ್ತವಾಗಿದೆ. ಪಂಕ್ತಿಯೊಂದಕ್ಕೆ 55-60 ಅಕ್ಷರಗಳನ್ನುಳ್ಳ 8 ಪಂಕ್ತಿಗಳು ಪ್ರತಿ ಪುಟದಲ್ಲಿಯೂ ಇವೆ. ಲಿಪಿ ಹಳಗನ್ನಡ. ಱಕಾರ ೞಕಾರಗಳನ್ನು ಬಳಸಿದೆ, ಆ ಲಿಪಿಯ ಇನ್ನೂ ಕೆಲವು ವೈಲಕ್ಷಣ್ಯಗಳು ಎಂದರೆ ಹ್ರಸ್ವ ದೀರ್ಘಗಳಿಗೆ ಪ್ರತ್ಯೇಕವಾದ ಚಿಹ್ನೆಗಳಿಲ್ಲದಿರುವುದೂ ಅಲ್ಪಪ್ರಾಣ ಮಹಾ ಪ್ರಾಣಗಳಿಗೆ ವ್ಯತ್ಯಾಸ ಮಾಡದಿರುವುದೂ ಈ ಬರವಣಿಗೆಯಲ್ಲಿವೆ. ಗ್ರಂಥವು ಆರಂಭವಾಗುವುದು ಹೀಗೆ :

ಸುಕುಮಾರಸ್ವಾಮಿ ॥ ನಮಃ ಸಿದ್ಧೇಭ್ಯಃ ॥  
ಇಂದಸಮುವಂದಿಯಾಣಂ ಇತ್ಯಾದಿ ॥  
ಏಸ ಸುರಾಸುರ ಇತ್ಯಾದಿ ॥  
ತಿಲೋಯಸವ್ವಜೀವಾಣಂ ಹಿಯಂ ಧಮ್ಮೋಪದೇಸಿಣಂ ।

ಈ ಪ್ರತಿಯ 113 (ಎ)–114ನೆಯ ಪತ್ರಗಳಲ್ಲಿ ಕೆ.ಬಿ. ಪಾಠಕರು ಉದ್ಧರಿಸಿರುವ ದೀರ್ಘತರವಾದ ಉದ್ಧರಣವು ಕಾಣುತ್ತದೆ ಗ್ರಂಥನಾಮವಾದ 'ಉಪಸರ್ಗ ಕೇವಲಿ ಕಥೆ' ಎಂಬುದನ್ನು ಮರದ ಪಟ್ಟಿಕೆಯ ಮೇಲೆ ಹಳಗನ್ನಡ ಅಕ್ಷರಗಳಲ್ಲಿ ಕೊರೆದಿದೆ. ಈ ಹೆಸರು ಅನುಕೂಲವಾಗಿ ಕಂಡ ಊಹೆಯ ಹೆಸರೆಂದು ಕಾಣುತ್ತದೆ; ಬಹುಶಃ ಆ ಪುಸ್ತಕ ಭಂಡಾರದ ಅಧಿಕಾರಿ ಗ್ರಂಥದ ಆರಂಭದಲ್ಲಿರುವ ಕೆಲವು ಪಂಕ್ತಿಗಳನ್ನು ನೋಡಿ ಇಟ್ಟ ಹೆಸರಾಗಿರಬೇಕು. ಗ್ರಂಥದ ಒಳಗಡೆ ಎಲ್ಲಿಯೂ ಈ ಹೆಸರು ಕಾಣುವುದಿಲ್ಲ. "ಸುಕುಮಾರ್‌ಸ್ವಾಮಿ" ಎಂಬುದು ಆರಂಭದಲ್ಲಿರುವ ಪದ; ಗ್ರಂಥದ ಪರಿಸಮಾಪ್ತಿ ಭಾಗದಲ್ಲಿ ಕೆಳಗೆ ಕಂಡಂತೆ ಇದೆ:

---

ವಡ್ಢಮಾಣಂ ಮಹಾವೀರಂ ವಂದಿತ್ತಾ ಸವ್ವವೇ ಇಣಂ ।
ನಮಃ ಶ್ರೀ ವರ್ಧಮಾನಾಯ ಇತ್ಯಾದಿ.

ಯೆಂದಿಂತು ಶ್ರೀ ವರ್ಧಮಾನ ಭಟ್ಟಾರಕರ್ಗ್ಗೆ ಇತ್ಯಾದಿ.

ಕೊನೆಯ ಕಥೆಯ ಅಂತ್ಯದಲ್ಲಿ ಅಶುದ್ಧ ಪಾಠಗಳಿಂದ ತುಂಬಿದ ಮೂರು ಪ್ರಾಕೃತ ಪದ್ಯಗಳಿವೆ : ಜನಿತಾವವಂ ಇತ್ಯಾದಿ ॥ ಕಿಂ ಪುಣ ಇತ್ಯಾದಿ ॥ ಜಿಣವಣ ಇತ್ಯಾದಿ ॥ ಅನಂತರ ಈ ಕನ್ನಡ ಗದ್ಯವಿದೆ ;

ಈ ಪೇೞ್ದ ಪತ್ತೊಂಭತ್ತು ಕಥೆಯ ರೇವಾಕೋಟ್ಯಾಚಾರ್ಯ ರ್ಪ್ಪೇೞ್ದ ವಡ್ಡಾರಾದನೆಯ ಕವಚವೆಂಬಧಿಕಾರಉ ॥ ಶ್ರೀ ಪಂಚ ಗುರುವೇ ಶರಣು ॥ ಪ್ಲವಸಂಸತ್ಸರದ ಕಾರ್ತಿಕ ಸುದ್ದ ೧ ಶುಕ್ರವಾರ ಬೇಲೂರ ಚಂದ್ರಯ್ಯ ವೈಶ್ಯರ ಚಂದ್ರಯ್ಯನು ವಡ್ಡಾರಾದನೆಯ ಪುಸ್ತಕವನು ಬರದನು ಮಂಗಲ ಮಹಾಶ್ರೀ ॥

ಅಡ್ಡಲಾಗಿ ಮುರಿದಿರುವ, ಆದರೆ ಈಚೆಗೆ ಹೊಲಿದಿರುವ ಕೆಲವು ಪತ್ರಗಳು ಹೊರತಾಗಿ ಈ ಪ್ರತಿ ಸಮಗ್ರವಾದ ಸ್ಥಿತಿಯಲ್ಲಿದೆ. ಇದನ್ನು ಪ್ರತಿ ಮಾಡಿದ್ದು ಮೈಸೂರು ಸಂಸ್ಥಾನದ ಬೇಲೂರಿನಲ್ಲಿ. ಪ್ರತಿಯಾದ ಶಕ ವರ್ಷ ಕೊಟ್ಟಿಲ್ಲ. ಪ್ರತಿಯ ಸ್ಥಿತಿಯನ್ನು ನೋಡಿದರೆ ಅದು ಬಹು ಹಳೆಯದಾಗಿ ಕಾಣುತ್ತದೆ—ಕನಿಷ್ಠಪಕ್ಷ ಮುನ್ನೂರು ವರ್ಷಗಳಷ್ಟು. ನಾನು ಹೋಲಿಸಿರುವ ಭಾಗವಷ್ಟರಿಂದಲೇ ಹೇಳಬಹುದಾದರೆ, ಶ್ರೀ ಡಿ.ಎಲ್. ನರಸಿಂಹಾಚಾರ್ಯರು ವರ್ಣಿಸಿರುವ ಘ. ಙ. ಛ. ಪ್ರತಿಗಳ ಪಂಗಡಕ್ಕೆ ಇದೂ ಸೇರಿದೆಯೆಂದು ನನಗೆ ತೋರುತ್ತದೆ.

ಯಿಾಪೇಳ್ದ ಪತ್ತೊಂಬತ್ತು ಕಥೆಯ ರೇವಾಕೋಟಾಚಾರ್ಯರ್ಪೇಳ್ದ ವಡ್ಡಾರಾಧನೆಯು ಕವಚಮೆಂಬಧಿಕಾರ ಊ ।

ಈ ಮಾತುಗಳೂ ಇದುವರೆಗೆ ಈ ಪ್ರತಿಯ ವಿಚಾರವಾಗಿ ಬರೆದಿರುವುದೂ ಈ ಗ್ರಂಥ ನನ್ನ ಮಿತ್ರರಾದ ಶ್ರೀ ಡಿ. ಎಲ್. ನರಸಿಂಹಾಚಾರ್. ಮೈಸೂರು ಅವರು ಸಂಪಾದಿಸಿ ಪ್ರಕಟಿಸುತ್ತಿರುವ 'ವಡ್ಡಾರಾಧನೆ'ಯೇ ಆಗಿದೆಯೆಂದು ತಿಳಿಸಲು ಸಾಕಾಗಿವೆ; ಈ ಪುಸ್ತಕದ ಕಾಲ ವಿಚಾರವಾಗಿ ವಿದ್ವಾಂಸರು ತಮ್ಮ ಅಭಿಪ್ರಾಯಗಳನ್ನು ವಾಗ್ಮಿತೆಯಿಂದ ನಿರೂಪಿಸಿರುವರು.[5]

ಸುಕುಮಾರನ ಕಥೆಯಿಂದ ಆರಂಭವಾಗಿ ವೃಷಭಸೇನನ ಕಥೆಯಿಂದ ಮುಗಿಯುವ ಈ ಕಥಾ ಗುಚ್ಛಕ್ಕೆ 'ವಡ್ಡಾರಾಧನೆ' ಎಂಬ ಹೆಸರನ್ನು ಅಂಗೀಕರಿಸ ಬಹುದು. "ಭಗವತೀ ಆರಾಧನಾ" ಎಂಬ ಗ್ರಂಥದಲ್ಲಿ ಕೆಲವು ಕಥೆಗಳು ಸೂಚಿತವಾಗಿರುವುದನ್ನೂ, ಆ ಗ್ರಂಥಕ್ಕೆ ಇದ್ದಿರಬಹುದಾದ ಸಂಸ್ಕೃತ ಮತ್ತು

---

5 ವಡ್ಡಾರಾಧನೆಯ ಪ್ರಕಟಿತಭಾಗವೂ ಅದನ್ನು ಕುರಿತು ವಿಮರ್ಶೆ ವಿಚಾರಗಳೂ ನನಗೆ ತಿಳಿದ ಮಟ್ಟಿಗೆ ಕೆಳಗೆ ಹೇಳಿದೆ. ಪಾಠಕ್ ಮತ್ತು ಫ್ಲೀಟ್ : Indian Antiquary XII pp. 95, 96, etc. ರಾ. ನರಸಿಂಹಾಚಾರ್ಯರು : ಕವಿಚರಿತೆ I ಪು. 347–ಡಿ. ಎಲ್. ನರಸಿಂಹಾಚಾರ್ : ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ XVI, ಪು. 173–231 (ಶ್ರೀಣಿಕ ಮತ್ತು ಸುಕುಮಾರ ಭದ್ರಬಾಹು ವಿದ್ಯುಚ್ಚೋರರ ಕಥೆಗಳು. ಇದನ್ನು ನಿರ್ದೇಶಿಸುವಾಗ ಪುಟ ಸಂಖ್ಯೆಯ ಹಿಂದೆ ನಕ್ಷತ್ರ ಚಿಹ್ನೆಯನ್ನು ಹಾಕಿದೆ) ; ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, XXIV ಸಂ. 4, ಪು. i—iii ಮತ್ತು 1–26 (1 ನೆಯ ಕಥೆ) ; ಅದೇ XXV, ಸಂ. 2–3, I–V ಪು. ಮತ್ತು i—viii 27–44 (2ನೆಯ ಕಥೆ) ; ಅದೇ XXV, ಸಂ. ೪, ಪು. 45–66 (3–5 ಕಥೆಗಳು) ; ಅದೇ XVV. ಸಂ. 2 ಪು 1 ; ಪು. 6˙–83 (6 ನೆಯ ಕಥೆಗಳು). ಅದೇ XXVI, ಸಂ. 2, ಪು. 89–108 (7–10 ಕಥೆಗಳು). ಅದೇ XXVII, ಸಂ 1, ಪು. 106-128 (11-13 ಕಥೆಗಳು ಮತ್ತು 14ನೆಯ ಕಥೆಯ ಒಂದು ಪುಟ). ಮಂಜೇಶ್ವರ ಗೋವಿಂದ ಪೈ ; ಮೂರು ಉಪನ್ಯಾಸಗಳು (ಧಾರವಾಡ, 1940), ಪು. 111–122. ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, XXVI, ಸಂ. 2, ಪು. 134-36 ಎಸ್. ಶ್ರೀಕಂಠಶಾಸ್ತ್ರಿ; Sources of Karnataka History Vol I (Mysore, 1940), P. XX·

ಪ್ರಾಕೃತ ವ್ಯಾಖ್ಯಾನಗಳಲ್ಲಿ ಈ ಕಥೆಗಳು ಮೊದಲು ಅಡಕವಾಗಿದ್ದುವೆಂಬು ದನ್ನೂ ಕಾಲ ಕ್ರಮದಲ್ಲಿ ಈ ಕಥೆಗಳೇ ಭಿನ್ನ ಭಿನ್ನ ಕೋಶಗಳಾಗಿ ಪರಿಣಮಿ ಸಿದುವೆಂಬುದನ್ನೂ ಹಿಂದೆಯೇ ನೋಡಿದ್ದೆವೆ.[6] ಇಂತಹ ಕಥಾಕೋಶಗಳನ್ನು ಹಿಂದೆಯೇ ಹೆಸರಿಸಿದ್ದೇವೆ. ಈ ಕನ್ನಡ ಗ್ರಂಥವು ಶಿವಾರ್ಯ ಅಥವಾ ಶಿವಕೋಟಿ ರಚಿತವಾದ 'ಭಗವತೀ ಆರಾಧನಾ' ಎಂಬ ಪುಸ್ತಕದಲ್ಲಿ 1539–1557ರ ವರೆಗಿನ ಗಾಹೆಗಳಲ್ಲಿ ಸೂಚಿತವಾಗಿರುವ ಹತ್ತೊಂಬತ್ತು ಕಥೆಗಳನ್ನೊಳಗೊಂಡ ಅಪೂರ್ಣ ಕಥಾ ಕೋಶವಾಗಿದೆ. ಅಮುಖ್ಯವಾದ ಪಾಠ ವ್ಯತ್ಯಾಸಗಳಿದ್ದರೂ ಈ ಪ್ರಾಕೃತ ಗಾಹೆಗಳು ಒಂದೊಂದು ಆಯಾ ಕಥೆಯ ಆರಂಭದಲ್ಲಿ ಉದ್ಧೃತವಾಗಿ ಅವಕ್ಕೆ ಕನ್ನಡದಲ್ಲಿ ಅರ್ಥೈಸಿದೆ. ಕೊಲ್ಲಾಪುರದ ಪ್ರತಿಯ ಕೊನೆಯಲ್ಲಿ ಮೂರು ಗಾಹೆಗಳು ಅಧಿಕವಾಗಿವೆ (ಜದಿತಾವವಂ ... ಇತ್ಯಾದಿ) ಇವು "ಭಗವತೀ ಆರಾಧನಾ"ದಲ್ಲಿರುವ 1558-60 ಸಂಖ್ಯೆಯ ಗಾಹೆಗಳೇ ಆಗಿದ್ದು ಮೇಲ್ಕಂಡ 19 ಗಾಹೆಗಳ ನಂತರ ಬಂದಿ ರುವುವು. ಈ ಕಥೆಗಳನ್ನು ಸಾಲಂಕಾರವಾದ ಕನ್ನಡ ಗದ್ಯದಲ್ಲಿ ನಡು ನಡುವೆ ಪ್ರಾಕೃತ (ಅಪಭ್ರಂಶವೂ ಸೇರಿ) ಸಂಸ್ಕೃತ ಕನ್ನಡ ಪದ್ಯವೇಷ್ಟನಗಳನ್ನು ಮಾಡಿ ಪ್ರತಿಪಾದಿಸಿವೆ. "ಚಾವುಂಡರಾಯ ಪುರಾಣ"ದ ಶೈಲಿಗಿಂತಲೂ ಇದರ ಶೈಲಿ ಕಡಮೆ ಸಂಸ್ಕೃತಮಯವಾಗಿದ್ದು ವಿಪುಲವಾಗಿ ದೊರೆಯುವ ಈಚಿನ ನೋಂಪಿ ಕಥೆಗಳ ಶೈಲಿಗಿಂತ ಹೆಚ್ಚು ಗಂಭೀರವಾಗಿದೆ. ಧರ್ಮೋಪದೇಶಗಳೂ ಸಾಂಪ್ರ ದಾಯಿಕ ಸಂಗತಿಗಳೂ ನಿರೂಪಿತವಾಗುವ ಸಂದರ್ಭಗಳು ಹೊರತಾಗಿ ಮಿಕ್ಕೆಡೆ ಗಳಲ್ಲಿ ಬರುವ ಈ ಗ್ರಂಥದ ಗದ್ಯ ಶಕ್ತಿಯುತವಾಗಿದ್ದು ಸಂಸ್ಕೃತ ಕನ್ನಡ ಶಬ್ದಗಳನ್ನು ಸಮತೂಕದಲ್ಲಿ ಬಳಸಿಕೊಂಡಿದೆ. ಕೆಲವು ಕನ್ನಡ ಚಂಪೂ ಗ್ರಂಥ ಗಳಲ್ಲಿ ಕಾಣುವ ಸಂಸ್ಕೃತ ಪದ ಭೂಯಿಷ್ಠವಾದ ಸಾಂಪ್ರದಾಯಿಕ ಗದ್ಯ ಶೈಲಿ ಯನ್ನು ಇದು ಅನುಕರಿಸದೆ ಸೊಗಸಾದ ದೇಶೀ ಶೈಲಿಯನ್ನು ಬಳಸಿಕೊಂಡಿದೆ. ಸಂಸ್ಕೃತ ಪದಗಳ ವಿಷಯದಲ್ಲಿ ಅಧಿಕ ಪಕ್ಷಪಾತವಿಲ್ಲದೆ ದೇಶೀ ತದ್ಭವ ಪದ ಗಳನ್ನು ಔಚಿತ್ಯದಿಂದ ಪ್ರಯೋಗಿಸಿದೆ. ಆದರೆ ಅನೇಕ ಕೃದಂತಗಳನ್ನೂ ಕ್ರಿಯಾ ವಿಶೇಷಣಗಳನ್ನೂ ಬಳಸಿರುವುದರಿಂದ ವಾಕ್ಯಗಳ ರಚನೆ ತೊಡಕಾಗಿದೆ ಯೆಂದೂ ಅಲ್ಲಿ ಇಲ್ಲಿ ಭಾವಗಳ ಸ್ಫುಟವಾದ ನಿರೂಪಣೆ ಪ್ರಯತ್ನಪೂರ್ವಕ

6 ಇಂಗ್ಲೀಷ್ ಪ್ರಸ್ತಾವನೆಯಲ್ಲಿ ಈ ವಿಷಯಗಳು ಮುಂಚೆಯೇ ಚರ್ಚಿತವಾಗಿವೆ.

ವಾಗಿದೆಯೆಂದೂ ಕೆಲವರಿಗೆ ತೋರಬಹುದು. ಶಬ್ದಪ್ರಯೋಗದಲ್ಲಿ ಮಿತ ವ್ಯಯಾಸಕ್ತಿ ಗ್ರಂಥಕರ್ತೃವಿಗೆ ಅಷ್ಟಾಗಿ ಇಲ್ಲ; ಅರ್ಧಮಾಗಧೀ ಗದ್ಯ ಗ್ರಂಥದಲ್ಲಿರುವಂತೆ ವರ್ಣಕ ನಿರೂಪಕ ಪುನರುಕ್ತಿಗಳು ಗ್ರಂಥದಲ್ಲೆಲ್ಲ ಧಾರಾಳ ವಾಗಿ ಬಂದಿವೆ.[7] ಈ ಗ್ರಂಥದ ಶೈಲಿಯ ನಾನಾ ಅಂಶಗಳನ್ನು ಇನ್ನೂ ಹೆಚ್ಚು ಕೂಲಂಕಷವಾಗಿ ಅಭ್ಯಾಸ ಮಾಡುವ ಅವಶ್ಯಕತೆಯಿದೆ. ಬೇರೆ ಬೇರೆ ಕಥೆಗಳಲ್ಲಿರುವ ಸಮಾನ ಶಬ್ದಪ್ರಯೋಗಗಳಿಂದಲೂ, ಸಮಾನ ಭಾವ ಗಳಿಂದಲೂ. ಸಮಾನ ಪದ್ಯವೇಷ್ಟನಗಳಿಂದಲೂ ಈ ಹತ್ತೊಂಬತ್ತು ಕಥೆ ಗಳನ್ನು ರಚಿಸಿದಾತನು–ಅವನು ಯಾರೇ ಇರಲಿ ಒಬ್ಬನೇ ಎಂಬುದರಲ್ಲಿ ಯಾವ ಸಂದೇಹವೂ ಇಲ್ಲಿ. ಹರಿಷೇಣನ "ಕಥಾಕೋಶ"ದ 126–144 ರ ವರೆಗಿರುವ ಕಥೆಗಳ ಅನುಕ್ರಮವೂ ಈ ಹತ್ತೊಂಬತ್ತು ಕಥೆಗಳ ಕ್ರಮವೂ, ಒಂದರ ಹೊರತಾಗಿ[8] ಒಂದೇ ಆಗಿದೆ. ಮೇಲೆ ವಿಮರ್ಶಿಸಿರುವ ಮಿಕ್ಕೆಲ್ಲ ಕೋಶಗಳಿಗಿಂತ ಹರಿಷೇಣನ ಕಥಾಕೋಶವನ್ನು ಈ ಹತ್ತೊಂಬತ್ತು ಕಥೆಗಳು ಬಲು ಹೋಲುತ್ತವೆ. ಒಂದರೊಡನೆ ಒಂದನ್ನು ಹೋಲಿಸಿ ಇವುಗಳನ್ನು ಓದಿದಾಗ ಹಲವು ಸ್ವಾರಸ್ಯಕರವಾದ ವಿಷಯಗಳು ತಿಳಿದುಬರುತ್ತವೆ.[9] ಹರಿಷೇಣನ ಕೋಶದಲ್ಲಿ ಅಲ್ಲಿ ಇಲ್ಲಿ ಕಾಣುವ ಕೆಲವು ಪದ್ಯವೃಂದಗಳಿಗೂ

7 ನೋಡು : ಗ್ರಾಮೇಕರಾತ್ರಂ ಇತ್ಯಾದಿ, ಪು. 46 ಅಡಿಟಿಪ್ಪಣಿ 8, ಪು. 66. ಪಂಕ್ತಿ, 16 ವ್ಯಾಧಿಗಳ ಹೆಸರುಗಳು, ವಾತ, ಪಿತ್ತ ಇತ್ಯಾದಿ, ಪು. 63, 92; ಗ್ರಾಮನಗರ ಖೇಡ ಇತ್ಯಾದಿಯಾದ ಊರುಗಳ ಹೆಸರುಗಳು, ಪು. 46, 67, 77, 82. 96, 113, 107 ಇತ್ಯಾದಿ.

8 ನನ್ನ ಪರಿಶೀಲನೆಗೆ ಇದುವರೆಗೆ ಅಚ್ಚಾಗಿರುವ 10 ಕಥೆಗಳು ಮಾತ್ರ ಒಳ ಪಟ್ಟಿವೆ. ಮುಂದಿನ ಮೂರು ಕಥೆಗಳು ನನ್ನ ಕೈಸೇರುವುದು ತಡವಾಯಿತು.

9 ಭಗವತೀ ಆರಾಧನೆಯ ಗಾಥಾನುಕ್ರಮವಾಗಿ ನೋಡಿದರೆ ಏಣಿಕಾ ಪುತ್ರನ ಕಥೆಯು 5ನೆಯದಾಗಿರಬೇಕು. ಮತ್ತು ಭದ್ರಬಾಹುವಿನ ಕಥೆಯು 6ನೆಯ ದಾಗಿರಬೇಕು. ಮುದ್ರಿತ ಪ್ರತಿಯಲ್ಲಿ ಈ ಕ್ರಮವೇ ದೊರೆಯುತ್ತದೆ. ಆದರೆ ಸಂಪಾದಕರು ಈ 16 ಕಥೆಗಳ ಕ್ರಮವನ್ನು ಕೊಟ್ಟ ಸಂದರ್ಭದಲ್ಲಿ ಭದ್ರಬಾಹುವಿನ ಕಥೆಯು 5ನೆಯದಿದ್ದು ಏಣಿಕಾ ಪುತ್ರನ ಕಥೆಯು 6ನೆಯ ದಾಗಿದೆ.

(126, 19ಇ, 162ಇ, 256ಇ, 127–145ಇ, 259ಇ, 87ಇ, 131, 67ಇ ಇತ್ಯಾದಿ) ವಡ್ಡಾರಾಧನೆಯು ಆಯಾ ಸಂದರ್ಭಗಳಿಗೂ ಬಹು ನಿಕಟವಾದ ಸಾದೃಶ್ಯವಿದೆ. ಇನ್ನೂ ಹೆಚ್ಚು ವಿವರವಾಗಿ ಪರಿಶೀಲಿಸಿದರೆ ಎರಡರಲ್ಲಿಯೂ ಹೆಚ್ಚುಕಡಮೆ ಒಂದೇ ವಿಷಯವ್ಯಾಪ್ತಿಯುಳ್ಳ ವೃಷಭಸೇನನ ಕಥೆ ಹೊರತಾಗಿ (ಕಥಾಕೋಶ 135 ಮತ್ತು ವಡ್ಡಾರಾಧನೆ 10) ವಡ್ಡಾರಾಧನೆಯ ಮಿಕ್ಕೆಲ್ಲ ಕಥೆಗಳೂ ದೀರ್ಘತರವಾಗಿದ್ದು ಹರಿಷೇಣನು ಹೇಳಿರುವ ವಿಷಯಗಳಿಗಿಂತ ಹೆಚ್ಚು ವಿವರನ್ನೊಳಕೊಂಡಿವೆ. ಕನ್ನಡ ಗ್ರಂಥದಲ್ಲಿ ಬರುವ ಸುಕೋಶಲನ ಕಥೆ ಪರಿಷೇಣನು ಬರೆದಿರುವ ಅದೇ ಕಥೆಯ 107ನೆಯ ಪದ್ಯದಿಂದ ಆರಂಭವಾಗಿ ಅನಂತರ ಮೊದಲ 106 ಪದ್ಯಗಳ ವಿಷಯವನ್ನು ನಿರೂಪಿಸುತ್ತದೆ. ಎರಡು ಗ್ರಂಥಗಳಲ್ಲಿಯೂ ವಿಷಯ ನಿರೂಪಣೆ ಅವಶ್ಯವಾಗಿ ಒಂದೇ ಕ್ರಮವನ್ನನುಸರಿಸಿಲ್ಲವೆಂಬುದಕ್ಕೆ ಇದು ಉತ್ಕೃಷ್ಟವಾದ ನಿದರ್ಶನವಾಗಿದೆ, ಸನತ್ಕುಮಾರನ ಕಥೆಯಲ್ಲಿ[10] ಕಾಣುವಂತೆ ಬೇರೆ ಕಥೆಗಳಲ್ಲಿಯೂ ಇರುವ ಉಪಕಥೆಗಳೂ, ಭವಾವಳಿಯ ವಿವರಗಳೂ, ಸಾಂಪ್ರದಾಯಿಕ ವರ್ಣನೆಗಳೂ, ನಿರೂಪಣೆಗಳೂ ವಡ್ಡಾರಾಧನೆಯಲ್ಲಿ ಅಧಿಕತರವಾಗಿ ತೋರಿಬರುವುದರಿಂದ ಕೆಲವು ವೇಳೆ ಆಯಾ ಕಥಾ ವಿವರಗಳಿಗಾಗೆ ಬಹುಶಃ ಬೇರೊಂದು ಕಥಾಸಂಪ್ರದಾಯವನ್ನು ಅವಲಂಬಿಸಿರುವಂತೆ ಭಾಸವಾಗುತ್ತದೆ. ಈ ಹತ್ತೊಂಬತ್ತು ಕಥೆಗಳನ್ನಷ್ಟೇ ನೋಡಿದರೆ ಹರಿಷೇಣನು ಪ್ರತಿಯೊಂದು ಕಥೆಯ ಮುಖ್ಯ ಘಟನೆಗಳನ್ನು ಬಳಸಿಲ್ಲದೆ, ಅನಾವಶ್ಯಕವಾದ ಇತರ ಸಂಗತಿಗಳನ್ನು ಸೇರಿಸದೆ ನೇರವಾಗಿ ನಿರೂಪಿಸಿರುವುದು[11] ಕಂಡುಬರುತ್ತದೆ. ಹರಿಷೇಣನು ತನ್ನ ದೊಡ್ಡ ಗ್ರಂಥವನ್ನು ಪರಿಸಮಾಪ್ತಿಗೊಳಿಸುವ ಆತುರದಲ್ಲಿ ಹೆಚ್ಚು ವಿವರಗಳಿಗೆ ಕೈಹಾಕದಿರಬಹುದು. ಕನ್ನಡ ಗ್ರಂಥದ ಕರ್ತನಾದರೆ

---

10 ಈ ಕನ್ನಡ ಕಥೆ ಉತ್ತರಾಧ್ಯಯನ ಸೂತ್ರಕ್ಕೆ ದೇವೇಂದ್ರನು ಬರೆದಿರುವ ವ್ಯಾಖ್ಯಾನದಲ್ಲಿ ಕಾಣುವ ಕಥೆಯನ್ನು ಕೆಲವು ಭಾಗಗಳಲ್ಲಿಯಾದರೂ ಹೋಲುತ್ತಿರುವುದು ನನ್ನ ನೆನಪಿಗೆ ಬರುತ್ತದೆ ; ಪ್ರಾಕೃತ ಕಥಾಸಂಗ್ರಹ (ಅಹಮದಾಬಾದ್, ಸಂವತ್ 1978) ಪು. 17–28.

11 ಹರಿಷೇಣನು ವಿವಾಹ ಸಂದರ್ಭವನ್ನು ಪ್ರಸ್ತಾಪಿಸಿದ್ದರೆ ಈ ಕನ್ನಡ ಗ್ರಂಥ ಸ್ವಯಂವರವನ್ನು ವರ್ಣಿಸಿದೆ.

ಸತ್ವಶಾಲಿಯಾಗಿ ತನ್ನ ಕಥೆಗಳನ್ನು ರಚಿಸುತ್ತ ನಿರೂಪಿಸುತ್ತ ಲಂಬಿಸಿರಬಹುದು; ಅವನು ಈ ಸಂದರ್ಭದಲ್ಲಿ ಬರೆದಿರುವ ಕಥೆಗಳಲ್ಲಿ ಇರುವ ಅಂಕಿತ ನಾಮಗಳೇ ಮುಂತಾದುವು ಒಂದೇ ರೀತಿಯಾಗಿದ್ದರೂ ಎತ್ತಿ ತೋರಿಸಬಹುದಾದ ಕೆಲವು ಮುಖ್ಯವಾದ ವ್ಯತ್ಯಾಸಗಳಿವೆ. ಕಥಾ ಕೋಶದಲ್ಲಿ (126ಎ) (24ಇ) ಶೈಲಪುರ, ಜಯಕಾ, ಪೋದಕ ಎಂದಿದ್ದರೆ ವಡ್ಡಾರಾಧನೆಯಲ್ಲಿ (i ಪು. 12) ಶ್ವೇತಪುರ, ಜೈಸೆ, ಬೋಧನ ಎಂದಿದೆ; ಕಥಾಕೋಶದಲ್ಲಿನ (127-152)ಗಂಧರ್ವ ಭೂಪಾಲ ಎಂಬುದು ವಡ್ಡಾರಾಧನೆಯಲ್ಲಿ(ii ಪು 31) ಸುಂದರ(ಪಾಠಾಂತರಗಳು ಗಂದರ, ಇತ್ಯಾದಿ) ಪಾಂಡ್ಯನೆಂದಾಗಿದೆ. ಸುರೇಂದ್ರ ದತ್ತ (ಕಥಾ 126-210) ಎಂಬುದು ಸೂರದತ್ತ (ವಡ್ಡಾ ii ಪು. 20) ಎಂದೂ ಗೋಮಿನೀ (ಕಥಾ 127–206) ಎಂಬುದು ಗೌರ (ವಡ್ಡಾ ii ಪು, 33) ಎಂದೂ ಆಗಿವೆ; ಇತ್ಯಾದಿ. ಭಿನ್ನವಾದ ಮತ್ತು ಅಧಿಕವಾದ ಕಥಾ ವಿವರಗಳು, ಕಥಾ ಸರಣಿಯಲ್ಲಿ ನಿಕಟವಾದ ಸಾದೃಶ್ಯವಿಲ್ಲದಿರುವುದು ಅಂಕಿತ ನಾಮಗಳಲ್ಲಿ ಕಾಣುವ ವ್ಯತ್ಯಾಸಗಳು—ಇವು ಒಂದು ಗ್ರಂಥ ಇನ್ನೊಂದು ಗ್ರಂಥವನ್ನು ನೇರವಾಗಿ ಅವಲಂಬಿಸಿ ಅನುಸರಿಸುತ್ತದೆಂಬುದಕ್ಕೆ ಪ್ರತಿಬಂಧಕಗಳಾಗಿವೆ. ಈ ಅಂಶಗಳನ್ನೂ ಎರಡಕ್ಕೂ ಸಮಾನವಾದ ಇತರ ಸಂಗತಿಗಳನ್ನೂ ಗಮನಿಸಿ ನೋಡಿದಾಗ, ಎರಡಕ್ಕೂ ಒಂದೇ ಮೂಲವಿದ್ದಿರಬೇಕೆಂಬ ನಿರ್ಣಯ ಉಂಟಾಗುತ್ತದೆ; ಈ ಮೂಲ ಬಹುಶಃ "ಭಗವತೀ ಆರಾಧನಾ" ಎಂಬ ಗ್ರಂಥಕ್ಕೆ ಇದ್ದಿರಬಹುದಾದ, ಪ್ರಾಕೃತ ಭಾಷಾನಿಬದ್ಧವಾದ ವ್ಯಾಖ್ಯಾನವಿರಬಹುದು. ಇಬ್ಬರು ಗ್ರಂಥಕರ್ತರೂ ತಮತಮಗೆ ಉಚಿತವಾಗಿ ಕಂಡ ರೀತಿಯಲ್ಲಿ ಕಥೆಗಳ ಮೈಯನ್ನು ಕೆಡಿಸದೆ, ಉದ್ದೇಶಕ್ಕೆ ಭಂಗತಾರದೆ, ಅವುಗಳನ್ನು ವಿವರವಾಗಿ ನಿರೂಪಿಸಿರಬಹುದು.

ಈ ಕನ್ನಡ ಕಥಾಗುಚ್ಛಕ್ಕೆ 'ವಡ್ಡಾರಾಧನೆ' ಎಂಬ ಹೆಸರಿರುವುದೂ, ಅದು ಭಗವತೀ ಆರಾಧನಾ ಎಂಬ ಗ್ರಂಥದ ಗಾಹೆಗಳನ್ನು, ಶ್ರೀ ಚಂದ್ರನು ಮಾಡಿರುವಂತೆಯೇ ಮೂಲವಾಗಿಟ್ಟುಕೊಂಡು ವಿವರಿಸುವುದೂ ಅದು 'ಭಗವತೀ ಆರಾಧನಾ' ಗ್ರಂಥಕ್ಕಿದ್ದ ಯಾವುದೋ ವ್ಯಾಖ್ಯಾನವನ್ನು ಅವಲಂಬಿಸಿರಬೇಕೆಂಬ ವಾದಕ್ಕೆ ಪುಷ್ಟಿಕೊಡುತ್ತದೆ; ಕನ್ನಡ ಗ್ರಂಥಕರ್ತನು

ಹರಿಷೇಣನ ಅಥವಾ ಬೇರೊಬ್ಬನ ಸಂಸ್ಕೃತ ಕಥಾಕೋಶವನ್ನಷ್ಟೇ ಅವಲಂಬಿಸಿದ್ದ ಪಕ್ಷದಲ್ಲಿ ಅವನು ಸಾಧಾರಣವಾಗಿ ಪ್ರಾಕೃತಗಾಹೆಗಳನ್ನು ಉದ್ಧರಿಸುತ್ತಿರಲಿಲ್ಲ ; ಅಷ್ಟೇ ಅಲ್ಲದೆ ಅಂಕಿತನಾಮಗಳಲ್ಲಿ ವ್ಯತ್ಯಾಸವನ್ನು ಮಾಡುತ್ತಿರಲಿಲ್ಲ. ಮುಂದೆ ತೋರಿಸಿರುವಂತೆ ಹರಿಷೇಣನ ಗ್ರಂಥವೊಂದೇ ಅಲ್ಲದೆ ಈ ಕನ್ನಡ ಕಥೆಗಳೂ ಕೂಡ ಪ್ರಾಕೃತ ಮೂಲವನ್ನು ಅನುಸರಿಸಿರಬೇಕೆಂಬುದಕ್ಕೆ ಕೆಲವು ಕುರುಹುಗಳು ಎರಡರಲ್ಲಿಯೂ ವ್ಯಕ್ತವಾಗಿವೆ.

ಕನ್ನಡ ನುಡಿಯ ಶಬ್ದಕೋಶದ ಬೆಳವಣಿಗೆಗೆ ಪ್ರಾಕೃತಭಾಷಾ ವ್ಯಾಪಾರಗಳು ಮಾರ್ಗದರ್ಶಕವಾದುವೆಂಬ ಅಂಶವನ್ನು—ಇನ್ನೂ ಕೂಲಂಕಷವಾದ ಅಭ್ಯಾಸ ವಿಮರ್ಶೆಗಳು ಈ ವಿಷಯದಲ್ಲಿ ನಡೆಯದಿದ್ದರೂ—ಎಲ್ಲರೂ ಒಪ್ಪತಕ್ಕದ್ದಾಗಿದೆ ; ತದ್ಭವಗಳಿರುವ ಅಚ್ಚ ಸಂಸ್ಕೃತ ಶಬ್ದಗಳ ಪ್ರಯೋಗ ಪ್ರಾಚುರ್ಯವು ನಿಂತು ಹೋಗುತ್ತ ಬಂದಿತು ; ಈ ತದ್ಭವಗಳು ಪ್ರಾಕೃತ ಲಕ್ಷಣಗಳಿಗೆ ಅನುಸಾರವಾಗಿ ಆಗಲು ಮೊದಲಾಗಿ ಕನ್ನಡದ ಉಚ್ಚಾರಣಾವಿಧಿಗಳಿಗೆ ಅಧೀನವಾಗಿ ಕನ್ನಡದಲ್ಲಿ ತದ್ಭವಗಳಾಗಿ ಪರಿಣಮಿಸಿ ಅಚ್ಚ ಸಂಸ್ಕೃತ ಪದಗಳಿಗೆ ಪ್ರತಿಯಾಗಿ ಪ್ರಯೋಗವಾದುವು. ಪ್ರಾಕೃತ ಭಾಷೆಯ ಈ ರೀತಿಯಾದ ಪ್ರಭಾವ ಕನ್ನಡದಲ್ಲಿ ಪೂರ್ತಿಯಾಗಿ ಇರಲಿ, ಇಲ್ಲದಿರಲಿ, ಈ ಕನ್ನಡ ಕಥೆಗಳಿಗೆ ಪ್ರಾಕೃತ ಗ್ರಂಥವೇ ಆಧಾರವೆಂದು ಸೂಚಿಸುವ ಕೆಲವು ಸಂಗತಿಗಳನ್ನು ಕಾಣುತ್ತೇವೆ. ಭದ್ರಬಾಹುವಿನ ಕಥೆಯಲ್ಲಿ ಮಧ್ಯದೇಶದ ಮೇರೆಯನ್ನು ಪ್ರಾಕೃತ ಪದ್ಯದಲ್ಲಿ ನಿರೂಪಿಸಿದೆ. (ವಡ್ಡಾ. ಪು. 80) ; ಈ ಪದ್ಯ ಮೂಲ ಪ್ರಾಕೃತ ಗ್ರಂಥದ ಅವಶೇಷವಾಗಿರಬಹುದು. ಪ್ರಾಕೃತಾವಶೇಷಗಳಂತೆ ಕಾಣುವ ಅನೇಕ ಶಬ್ದಗಳು ದೊರೆಯುತ್ತವೆ.—ಅಯಂಬಿಲ (ಪುಟ. 91, ಅಡಿಟಿಪ್ಪಣಿ 2). ಛಟ್ಟಿಟ್ಟಮದಸಮದುವಾಳಸ (ಪು. 44). ಜಾವಜ್ಜೀವಂ (ಪುಟ 26, 82, 108). ಪಚ್ಚಕ್ಖಾಣ (ಪು. 76), ಪಡಿಕಮಣ (ಪುಟ 24, ೬6 ಇತ್ಯಾದಿ) ; ಬೋಳಹ ಬೋಳಹ (ಪು. 79, ವಿಧಿರೂಪದ ಮಧ್ಯಮ ಪುರುಷ ಬಹುವಚನ, ವೋಲ—ತೊಲಗು, ಹೊರಟು ಹೋಗು),[12]

---

12 ಇದಕ್ಕೆ ಸಂವಾದಿಯಾದ ಭಾಗದಲ್ಲಿ (130-30) ಹರಿಷೇಣನು 'ಗಚ್ಛ' ಎಂದು ಪ್ರಯೋಗಿಸಿದ್ದಾನೆ.

ವಕ್ಖಾಣಿಸಿ (ಪು. 3, 5). ಇವಲ್ಲದೆ ಲಚ್ಛಿ (ಪು, 91), ಸವಣ (ಪು. 6) ರಿಸಿ (ಪು. 9), ಇತ್ಯಾದಿಯಾದ ಇತರ ಶಬ್ದಗಳೂ ಉಂಟು ; ಈ ಶಬ್ದಗಳು ಮಾತ್ರ ಪ್ರಾಕೃತ ಮೂಲವನ್ನು ಹೊಂದಿಲ್ಲದ ಯಾವ ಕನ್ನಡ ಕೃತಿಯಲ್ಲಾದರೂ ದೊರೆಯುವುದು ಅಸಂಭವವೇನೂ ಅಲ್ಲ. ಪ್ರಾಕೃತಮೂಲವನ್ನು ಕಣ್ಣೆದುರಿರಿಸಿಕೊಂಡು ಹರಿಷೇಣನು ತನ್ನ ಗ್ರಂಥವನ್ನು ರಚಿಸಿರುವನು ; ಪ್ರಾಕೃತದ ಹೆಸರುಗಳನ್ನು ಸಂಸ್ಕೃತೀಕರಿಸುವಾಗ ಕಥಾ ಕೋಶದ್ದೇ ಒಂದು ರೀತಿ, ಈ ಕನ್ನಡ ಗ್ರಂಥದ್ದೇ ಒಂದು ರೀತಿ. ಉಚ್ಚಾರಣೆಯ ವಿಚಾರಗಳನ್ನೂ ಕಾಗುಣಿತದ ಭ್ರಾಂತಿಗಳನ್ನೂ ಗಮನಿಸಿ ಪರೀಕ್ಷಿಸಿದರೆ ಕೆಲವು ವೇಳೆ ಮೂಲಗ್ರಂಥದ ಪ್ರಾಕೃತದ ಹೆಸರು ಯಾವುದಿರಬೇಕೆಂಬುದನ್ನು ನಿರ್ಣಯಿಸಬಹುದು. ದಯಾವಾದ ಮತ್ತು ದಯಾವತ (ಕಥಾ, 126. 26: ವಡ್ಡಾ. ಪು. 5 6) ; ಶೈಲಪುರ ಮತ್ತು ಶ್ವೇತಪುರ (ಕಥಾ 126 124 ; ವಡ್ಡಾ. ಪು. 17); ಸಂವಲ ಮತ್ತು ಶಂಬರ (ಕಥಾ 126–57; ವಡ್ಡಾ. ಪು. 10); ಸೋದಾಲಿಕಾ ಮತ್ತು ಮೋದಾಳಿ (ಕಥಾ 126–130; ವಡ್ಡಾ. ಪು. 17); ರವಿಬಿಂದು ಮತ್ತು ರತಿಬಿಂದು (ಕಥಾ 127–242; ವಡ್ಡಾ. ಪು. 36); ಜಯಮತೀ ಮತ್ತು ಜಯಾವತಿ (ಕಥಾ 127–263; ವಡ್ಡಾ. ಪು. 38); ವಪ್ರವಾದ ಮತ್ತು ವಪ್ರಪಾಳ (ಕಥಾ 131.69; ವಡ್ಡಾ. ಪು. 87): ಅಂಶುಮಾನ್ ಮತ್ತು ಸುಮಂತ್ರ — ಪಾಠಾಂತರ : ಸಮಂಸ– (ಕಥಾ 134-2; ವಡ್ಡಾ. ಪು. 100); ಜಿನಪಾಲಿತ ಮತ್ತು ಜಿನವಾದಿಕ (ಕಥಾ 135–7; ವಡ್ಡಾ. ಪು. 104); ವಿನ್ಯಾತಟ ಮತ್ತು ವೇಣಾತಟ (ಕಥಾ 138–40; ವಡ್ಡಾ. ಪು. 226); ಇತ್ಯಾದಿ. ಕೊಲ್ಲಾಪುರದ ಪ್ರತಿಯನ್ನು ಹಾಗೆಯೇ ನೋಡುವಾಗ ವಜ್ರದಾಡ (ಪತ್ರ 111); ಮತ್ತು ಭಟ್ಟಿಮಿತ್ರ (ಪತ್ರ 137) ಎಂಬ ಹೆಸರುಗಳು ಕಂಡುಬಂದವು. ಮೇಲೆ ಕಾಣಿಸಿರುವ ಜೊತೆ ಹೆಸರುಗಳು ಎರಡು ಗ್ರಂಥಗಳೂ ಒಂದೇ ಸಂಸ್ಕೃತ ಮೂಲವನ್ನು ಹೊಂದಿದ್ದ ಪಕ್ಷದಲ್ಲಿ ಅಸಂಭವವಾಗುತ್ತಿದ್ದುವು; ಇಂತೆಯೇ ಒಂದನ್ನೊಂದು ಅನುಸರಿಸಿದ್ದರೂ, ಈ ಆಧಾರವು ಬಹುಮುಖ್ಯವಾದುದು ; ಈ ಕಥೆಗಳಿಗೆ ಮೂಲ ಪ್ರಾಕೃತ ಗ್ರಂಥವೆಂಬುದನ್ನು, ಬಹುಶಃ ಎರಡು ಗ್ರಂಥಗಳಿಗೂ ಒಂದೇ ಮೂಲವೆಂಬುದನ್ನು ನಿಶ್ಚಯಕವಾಗಿ ಇದು ಸೂಚಿಸುತ್ತದೆ.

ಶಿಷ್ಯ ಶಿವಕೋಟಿಯಲ್ಲವೆಂದು ಹೇಳಬಹುದು. ರತ್ನಮಾಲೆಯಲ್ಲಿರುವ

ಸರ್ವಮೇವ ವಿಧಿರ್ಜ್ಯೈನಃ ಪ್ರಮಾಣಂ ಲೌಕಿಕಃ ಸತಾಂ ।
ಯತ್ರ ನ ವ್ರತಹಾನಿಃ ಸ್ಯಾತ್ಸಂಯುಕ್ತ್ವಸ್ಯ ಖಂಡನಂ ॥ ೬೫

ಎಂಬ ಪದ್ಯ ಸ್ವಲ್ಪ ಪಾಠಭೇದಗಳೊಡನೆ ಸೋಮದೇವ ಸೂರಿಯ (ಕ್ರಿ.ಶ. ೯೫೯) 'ಯಶಸ್ತಿಲಕ ಚಂಪು'ವಿನಲ್ಲಿ ದೊರೆಯುವುದರಿಂದ ಆ ಕಾಲಕ್ಕೆ ಸ್ವಲ್ಪ ಹಿಂದೆ ರತ್ನಮಾಲೆ ರಚಿತವಾಗಿರಬಹುದು.[23] ನಾಥೂರಾಮ ಪ್ರೇಮಿ ಅವರ ಈ ಅಭಿಪ್ರಾಯಗಳನ್ನು ಡಾ. ಉಪಾಧ್ಯೆಯವರೂ ಅನುಮೋದಿಸಿದ್ದಾರೆ.[24] ಈ ಕಾರಣಗಳಿಂದ 'ರತ್ನಮಾಲಾ' ಕರ್ತೃವಾದ ಶಿವಕೋಟಿ ಬೇರೊಬ್ಬ ಶಿವಕೋಟಿ ಎಂದು ಹೇಳಬಹುದು. ಇವನ ಗುರುವಾಗಿದ್ದ ಸಮಂತಭದ್ರನು ಕೂಡ ಇನ್ನಾರೋ ಸಮಂತಭದ್ರನಾಗಿರಬೇಕು.[25]

ಪೂರ್ವೋಕ್ತರಾದ ಮೂವರು ಶಿವಕೋಟಿಗಳಲ್ಲದೆ ಬರಿ ಕೋಟಾಚಾರ್ಯ ಅಥವಾ ಕೋಟ್ಯಾಚಾರ್ಯ ಎಂಬೊಬ್ಬ ಜೈನ ಟೀಕಾಕಾರನಿದ್ದಂತೆ ತಿಳಿದು ಬರುತ್ತದೆ. ಇವನು ವಿಶೇಷಾವಶ್ಯಕ ಭಾಷ್ಯ ಟೀಕೆಯನ್ನು ಬರೆದಿದ್ದಾನೆ, ಇದರ ಒಂದು ಹಸ್ತಪ್ರತಿ ಕ್ರಿ. ಶ. ೧೦೮೧ ರಲ್ಲಿ ಲಿಖಿತವಾಗಿರುವುದು ದೊರೆಯುವುದರಿಂದ[26] ಕೋಟ್ಯಾಚಾರ್ಯನು ಆ ಕಾಲಕ್ಕಿಂತ ಹಿಂದಿದ್ದನೆಂದು ಹೇಳಬಹುದು. ಮೊದಲ ಇಬ್ಬರು ಶಿವಕೋಟಿಗಳು ಅತಿ ಪ್ರಾಚೀನಕಾಲಕ್ಕೆ ಸೇರಿದವರಾಗಿರುವುದರಿಂದ ಅವರು ಪ್ರಕೃತ ಕನ್ನಡ ವಡ್ಡಾರಾಧನೆಯ ಕರ್ತೃಗಳಲ್ಲವೆಂದು ಬೇರೆ ಹೇಳಬೇಕಾಗಿಲ್ಲ. ಮೂರನೆಯ ಶಿವಕೋಟಿ ಅದರ ಕರ್ತೃವಾಗಿದ್ದಿರಬಹುದಾದ ಸಂಭವವಿದೆ. ಇಲ್ಲದಿದ್ದರೆ ವಡ್ಡಾರಾಧನೆಯ ರಚಕನಾದವನು ಬೇರೊಬ್ಬ ಶಿವಕೋಟಿಯಾಗಿದ್ದನೆಂದು ಹೇಳಬೇಕಾ

---

23 ಜೈನ ಸಾಹಿತ್ಯ ಔರ್ ಇತಿಹಾಸ್, ಪು. 28
24 Brhatkatha Kosa, (P. 53 Intr.)
25 6 ಜನ ಸಮಂತಭದ್ರರು ಇದ್ದಂತೆ ಇದುವರೆಗೆ ತಿಳಿದುಬಂದಿದೆ : ರತ್ನಕರಂಡ ಶ್ರಾವಕಾ ಚಾರ, (ಬೊಂಬಾಯಿ), ಪೀಠಿಕೆ 58.
26 Catalogue of Sanskrit & Prakrit Manuscripts in C. P. and Berar P.v.

ಗುತ್ತದೆ. ಒಟ್ಟಿನಲ್ಲಿ ಈ ಕನ್ನಡ ಗ್ರಂಥದ ಹೆಸರು ವಡ್ಡಾರಾಧನೆಯೆಂದೂ, ಅದನ್ನು ಹೇಳಿದವನು ಶಿವಕೋಟಿಯೆಂದೂ ಸದ್ಯಕ್ಕೆ ನಿರ್ಣಯಿಸಬಹುದು. ಖಚಿತವಾದ ನೂತನಾಧಾರಗಳು ದೊರೆಯುವವರೆಗೆ ಬೇರೆ ಯಾವ ನಿರ್ಣಯಕ್ಕೂ ಅವಕಾಶವಿದೆಯೆಂದು ತೋರುವುದಿಲ್ಲ. ಗ್ರಂಥ ಸಮಾಪ್ತಿಯಲ್ಲಿರುವ ಗದ್ಯವನ್ನು ಎರಡು ವಾಕ್ಯಗಳಂತೆ ಭಾವಿಸಿ ಮೊದಲನೆಯದು ಕವಿಯ ಹೆಸರನ್ನು ಹೇಳುವುದೆಂದೂ, ಎರಡನೆಯದು ಗ್ರಂಥದ ಹೆಸರನ್ನು ಸೂಚಿಸುವುದೆಂದೂ ಸ್ವಾಭಾವಿಕವಾದ ಅರ್ಥವನ್ನು ಗ್ರಹಿಸಬೇಕಾಗಿದೆ.

## ಕಾಲ

'ವಡ್ಡಾರಾಧನೆ' ಯಾವ ಕಾಲದಲ್ಲಿ ರಚಿತವಾಯಿತೆಂಬ ವಿಷಯವೂ ತುಂಬ ತೊಡಕಾದ ಪ್ರಶ್ನೆಯಾಗಿದೆ. ಬಾಹ್ಯಾಭ್ಯಂತರ ಪ್ರಮಾಣಗಳನ್ನು ಅಧಿಕರಿಸಿ ಈ ಸಮಸ್ಯೆಯ ವಿಚಾರ ನಡೆಯಬೇಕಾಗಿದೆ. ಕೆಲವರು ವಿದ್ವಾಂಸರು ಈ ವಿಷಯದಲ್ಲಿ ತುಂಬ ಬೆಳಕನ್ನು ಬೀರಿದ್ದಾರೆ. ಕೆ. ಬಿ. ಪಾಠಕ ಅವರು ತೊರೆಗಲ್ಲು ಶಾಸನದ ಕಾಲವಾದ ೧೧೮೮ ನ್ನು ಈ ಗ್ರಂಥದ ಕಾಲವನ್ನಾಗಿ ಭಾವಿಸಿದರು. ಅವರನ್ನು ಅನುಸರಿಸಿ ಆರ್. ನರಸಿಂಹಾಚಾರ್ಯರು ಇದರ ಕಾಲವನ್ನು ಸು. ೧೧೮೦ ಎಂದು ಹೇಳಿದರು. ಈ ಗ್ರಂಥದ ಮೂರು ಕಥೆಗಳನ್ನು ೧೯೩೧ ನೆಯ ಇಸವಿಯಲ್ಲಿ ಮೊದಲಬಾರಿಗೆ ಪ್ರಕಟಿಸಿದಾಗ ಅದರ ಪೀಠಿಕೆಯಲ್ಲಿ ಈ ಗ್ರಂಥದ ಕಾಲವು ಕ್ರಿ. ಶ. ಸು. ೯೪೦ ಆಗಿರಬಹುದೆಂದು ಸದ್ಯಕ್ಕೆ ಊಹಿಸಬಹುದಾಗಿದೆಯೆಂದು ಕೆಲವು ಆಧಾರಗಳನ್ನು ಅವಲಂಬಿಸಿ ಬರೆಯಲಾಗಿತ್ತು.[27]

೧. ಶ್ರೀಮಾನ್ ಎಂ. ಗೋವಿಂದ ಪೈಗಳು ೧೯೪೦ರಲ್ಲಿ ಪ್ರಕಟವಾದ 'ಮೂರು ಉಪನ್ಯಾಸಗಳು' ಎಂಬ ತಮ್ಮ ಗ್ರಂಥದಲ್ಲಿ 'ವಡ್ಡಾರಾಧನೆ'ಯ

---

27 ಇದೇ ಗ್ರಂಥ, ಪು. ೩೩೧-೩೩೩ ನೋಡಿ

ಕಾಲವನ್ನು ಕಂಡುಹಿಡಿಯಲು ಪ್ರಯತ್ನಿಸಿದ್ದಾರೆ (೧೧೧–೧೨೨). ಅವರ ನಿರ್ಣಯ : "ನನಗಾದರೊ ಕನ್ನಡ ವೊಡ್ಡಾರಾಧಣವು ಕ್ರಿ. ಶ. ೬ ನೆಯ ಶತಮಾನಕ್ಕಿಂತ ಈಚೆಯದಲ್ಲವೆಂದು ತೋರುತ್ತದೆ." ಇವರು ಆಂತರಿಕ ಪ್ರಮಾಣಗಳನ್ನೇ ವಿಶೇಷವಾಗಿ ಅವಲಂಬಿಸಿರುವುದು ಕಾಣುತ್ತದೆ; ಬಾಹ್ಯ ಪ್ರಮಾಣಗಳ ನೆರವು ಇದ್ದ ಹೊರತು ಇವಕ್ಕೆ ಬೆಲೆ ಬರಲಾರದು. ರೋಮೀಯ ದೀನಾರ. ಗ್ರೀಕಿನ ದ್ರಮ್ಮ ಎಂಬ ನಾಣ್ಯಗಳ ಹೆಸರುಗಳು, ಕಟ್ಟಿಪ್ಪು, ಕಳ್ಳದ, ಕಲ್ಪಿ, ಕಲ್ಪಿಸು, ಬಡ್ಡಿಸು, ಬಡುಕು (ಬಾಳು ಎಂಬರ್ಥ ದಲ್ಲಿ), ಕೆಂದು ಕೇಳ್ಪಿ, ಲುಂದು, ಪತನಾರ್ಥದ ಕೆಡು, ತೊಡು, ದಂಶ ನಾರ್ಥದ ಕೊಳ್, ಇಟ್ಟು, ಪೊಟ್ಟು, ಉಳ್ಳ ಎಂಬರ್ಥದ ಒಡೆಯ, ಕರ್ಮ ಣ್ಯಾರ್ಥದ ಮುಚ್ಚಿಪಟ್ಟ— ಈ ಮುಂತಾದ ಅವರೇ ತೋರಿಸಿರುವ ಪ್ರಯೋಗಗಳು ಪ್ರಾಚೀನವಾಗಿದ್ದರೂ, ಅಪೂರ್ವವಾಗಿದ್ದರೂ ಇವುಗಳ ಆಧಾರದಿಂದಲೇ ಕಾಲ ನಿರ್ಣಯ ಸಾಧ್ಯವಾಗಲಾರದು. ಇವುಗಳಲ್ಲಿ ಪ್ರತಿ ಯೊಂದರ ವಿಷಯದಲ್ಲೂ ಇವು ಸಾಹಿತ್ಯದಲ್ಲಿ ಯಾವಾಗ ತಲೆದೋರಿದವು, ಯಾವಾಗ ಇಲ್ಲವಾದುವು ಎಂಬ ಕಾಲಾವಧಿಯನ್ನು ಕಂಡುಹಿಡಿಯಬೇಕಾ ಗುತ್ತದೆ. ಈ ಅವಧಿಯಲ್ಲಿ ಆ ಗ್ರಂಥ ಯಾವಾಗಲೋ ರಚಿತವಾಗಿರ ಬಹುದೆಂದು ಹೇಳಲು ಮಾತ್ರ ಸಾಧ್ಯ; ಅಲ್ಲದೆ ಹಳೆಯ ನುಡಿಗಟ್ಟಿನಲ್ಲಿ ಪ್ರವೀಣನಾಗಿದ್ದ ಅರ್ವಾಚೀನ ಕವಿಯೊಬ್ಬ ಇಂಥ ಪ್ರಯೋಗಗಳನ್ನು ಮಾಡುವ ಸಂಭವವೂ ಇರುತ್ತದೆ. ಆ ಅವಧಿ ಅನೇಕ ಶತಮಾನಗಳಷ್ಟು ಕಾಲವನ್ನು ಹೊಂದಿರಬಹುದು. ಉದಾಹರಣೆಗೆ ಒನ್, ಒಳ್, ಒರ್ ಮುಂತಾದ ಪ್ರತ್ಯಯಗಳು ಹಲ್ಮಿಡಿ ಶಾಸನದ ಕಾಲದಿಂದ (ಕ್ರಿ. ಶ. ೪೫೦) ಹಿಡಿದು ಕವಿರಾಜಮಾರ್ಗದ (೮೫೦) ಕಾಲದವರೆಗೂ ಇದ್ದದ್ದೂ, ಅವುಗಳ ಜೊತೆಯಲ್ಲಿಯೇ ಅನ್, ಅಳ್, ಅರ್ ಮುಂತಾದ ಪ್ರತ್ಯಯಗಳು ಪ್ರಯೋಗ ದಲ್ಲಿದ್ದದ್ದೂ, ಕ್ರಮೇಣ ಒಕಾರಾದಿ ಪ್ರತ್ಯಯಗಳು ಕಡಿಮೆಯಾಗುತ್ತ ಬಂದು ಅಕಾರಾದಿ ಪ್ರತ್ಯಯಗಳಿಗೆ ಎಡೆಕೊಟ್ಟು ಭಾಷೆಯಿಂದ ನಷ್ಟವಾದದ್ದೂ ಶಾಸನಗಳ ಅವಲೋಕನದಿಂದ ಖಚಿತಪಡುತ್ತದೆ. ಪೈ ಅವರು ಕಾಣಿಸಿರುವ ಎಲ್ಲ ಅಪೂರ್ವ ಪ್ರಯೋಗಗಳೂ ಈಚಿನ ಕಾಲದ ಹಳಗನ್ನಡ ಗ್ರಂಥಗಳಲ್ಲೂ ಶಾಸನಗಳಲ್ಲೂ ಕ್ವಚಿತ್ತಾಗಿಯಾದರೂ ದೊರೆಯುತ್ತವೆಂದು ತೋರಿಸುವುದು

ಸಾಧ್ಯ. ಆದ್ದರಿಂದ ಅವರು ಹೇಳಿರುವ ಈ ಆಂತರಿಕ ಪ್ರಮಾಣಗಳಿಂದ ವಡ್ಡಾರಾಧನೆಯ ರಚನೆಯ ಕಾಲವನ್ನು ನಿರ್ಣಯಿಸುವುದಾಗಲಾರದು. "ವೊಡ್ಡಾರಾಧಣವು ಕ್ರಿ. ಶ. ೬ನೆಯ ಶತಮಾನಕ್ಕಿಂತ ಈಚೆಯದಲ್ಲವೆಂದು ತೋರುತ್ತದೆ" — ಎಂಬ ಅವರ ಮಾತು ಬರಿ ಅಭಿಪ್ರಾಯವಾಗಿಯೇ ಉಳಿದುಕೊಳ್ಳುತ್ತದೆ.

೨. ಶಿವಕೋಟಿಯ ವೊಡ್ಡಾರಾಧನೆಯು ಪ್ರಾಯಶಃ ಏಳನೆಯ ಶತಮಾನಕ್ಕೆ ಸೇರಿದ ರಚನೆಯೆಂದು ಡಾ. ಎಸ್. ಶ್ರೀಕಂಠಶಾಸ್ತ್ರಿ ಅವರು ಹೇಳಿದ್ದಾರೆ.[28] ಇದಕ್ಕೆ ಅವರು ಯಾವ ಆಧಾರವನ್ನೂ ತೋರಿಸಿಲ್ಲ.

೩. ವಡ್ಡಾರಾಧನೆಯ ರಚನಾ ಕಾಲವನ್ನು ಕಂಡುಹಿಡಿಯುವುದರಲ್ಲಿ ಡಾ. ಆ. ನೇ. ಉಪಾಧ್ಯೆ ಅವರು ಮಾಡಿರುವ ಸಂಶೋಧನೆಗಳು ಬಹು ಸಾರವತ್ತಾಗಿವೆ. ಅವರು ಮೊದಲು ಬಾಹ್ಯಪ್ರಮಾಣಗಳನ್ನು ನಿರೂಪಿಸಿ, ಆಮೇಲೆ ಆಂತರಿಕ ಪ್ರಮಾಣಗಳ ನೆರವನ್ನು ಪಡೆದು ತಮ್ಮ ತೀರ್ಮಾನವನ್ನು ಮಾಡಿದ್ದಾರೆ. ವಡ್ಡಾರಾಧನೆಯಲ್ಲಿ ಅನೇಕ ಪ್ರಾಕೃತ, ಸಂಸ್ಕೃತ, ಕನ್ನಡ ಪದ್ಯಗಳು ಅನುವಾದಿತವಾಗಿರುವುದು ವಿದಿತವಾಗಿರುವ ಅಂಶವಷ್ಟೆ. ಕೆಲವು ಪ್ರಾಕೃತ, ಸಂಸ್ಕೃತ ಪದ್ಯಗಳಿಗೆ ಡಾ. ಉಪಾಧ್ಯೆಯವರು ಆಕರಗಳನ್ನು ಕಂಡುಹಿಡಿದಿದ್ದಾರೆ. ಕನ್ನಡದ ಪದ್ಯಗಳು ಅನುವಾದಿತವೋ, ಆ ಗ್ರಂಥದ ಕವಿಕೃತವೋ ಎಂಬುದನ್ನು ನಿರ್ಣಯಿಸುವುದಾಗದಿರುವುದರಿಂದ ಅವುಗಳ ವಿಷಯವನ್ನು ಪ್ರಕೃತ ನೋಡಬೇಕಾಗಿಲ್ಲ. ಕೆಲವು ಪ್ರಾಕೃತ, ಸಂಸ್ಕೃತ ಪದ್ಯಗಳ ಆಕರಗಳು ಹೀಗಿವೆ :

೧. ಹತ್ತೊಂಬತ್ತು ಕಥೆಗಳ ಆದಿಯಲ್ಲಿ ಕಾಣುವ ಗಾಹೆಗಳು, (ಘ.ಜ) ಪ್ರತಿಗಳ ಅಂತ್ಯದಲ್ಲಿರುವ ೩ ಗಾಹೆಗಳು. ಜಹಜಹ ಭುಂಜಣ..... ಎಂಬ ಗಾಹೆ (ವಡ್ಡಾ. ೧೪೩.)— ಇವು ಶಿವಕೋಟಿಯ 'ಭಗವತೀ ಆರಾಧನಾ' ದಲ್ಲಿವೆ; ಕಾಲ ಕ್ರಿ. ಶ. ೧ನೆಯ ಶತಮಾನ.

---

28 Sources of Karnatak History, XX

೨. ಕೊಲ್ಲಾಪುರ ಪ್ರತಿಯ ಆದಿಯಲ್ಲಿರುವ ಮೂರು ಗಾಹೆಗಳಲ್ಲಿ ಮೊದಲನೆಯದು 'ಪಂಚಾಸ್ತಿಕಾಯ'ದಿಂದಲೂ, ಎರಡನೆಯದು 'ಪ್ರವಚನ ಸಾರ'ದಿಂದಲೂ ಉದ್ಧೃತವಾಗಿವೆ. ಈ ಗ್ರಂಥಗಳ ಕರ್ತೃ ಕುಂಡಕುಂದಾಚಾರ್ಯ, ಕಾಲ ಸು. ೧ನೆಯ ಶತಮಾನ.

೩. "ಖಮ್ಮಾಮಿ ಸಬ್ಬ ಜೀವಾಣಂ.... ಎಂಬ ಗಾಹೆ— ವಟ್ಟಕೇರ ಸ್ವಾಮಿಯ ಮೂಲಾಚಾರ"ದಲ್ಲೂ ಮತ್ತು 'ಪ್ರತಿಕ್ರಮಣ'ದಲ್ಲೂ ಇವೆ. (ಪು. ೯ ಭಾವನಗರದ ಮುದ್ರಣ ಸಂವತ್ ೧೯೦ ) ಕಾಲ ಸು. ೧ನೆಯ ಶತಮಾನ.

೪. "ಯದ್ಯಪಿ ನಿಷೇವ್ಯಮಾಣಾ...." (ಪು. ೧೦೭) ಉಮಾಸ್ವಾತಿಯ 'ಪ್ರಶಮರತಿ ಪ್ರಕರಣ'ದಲ್ಲಿದೆ, ಕಾಲ ೧ನೆಯ ಶತಮಾನ.

೫. "ನಮಃಶ್ರೀ ವರ್ಧಮಾನಾಯ...." ಎಂಬ ಗ್ರಂಥಾದಿಯ ಪದ್ಯ– ಸಮಂತಭದ್ರನ ರತ್ನಕರಂಡಕ ಶ್ರಾವಕಾಚಾರದಲ್ಲಿದೆ, ಕಾಲ ೨ನೆಯ ಶತಮಾನ.

| | |
|---|---|
| ೬. "ಯೇಷಾಂ ನ ವಿದ್ಯಾ........"<br>''ಯಾವತ್ ಸ್ವಸ್ಥಮಿದಂ...."<br>ತೃಷ್ಣಾಂ ಛಿಂದಿ....'' | ಭರ್ತೃಹರಿಯ ನೀತಿ ವೈರಾಗ್ಯ ಶತಕಗಳು. ಕಾಲ ಅನಿರ್ದಿಷ್ಟ |

೭. ''ಭಿಜ್ಜಉ ಭಿಜ್ಜಉ....'' ಎಂಬ ಗಾಹೆ (ಪಡ್ಡಾ. ೪೮) ಜೋಇಂದುವಿನ 'ಪರಮಾತ್ಮ ಪ್ರಕಾಶ'ದಲ್ಲಿದೆ. ಕ್ರಿ.ಶ. ೬ನೆಯ ಶತಮಾನ.

೮. ''ಕಸ್ಯ ಮಾತಾ ಪಿತಾ ಕಸ್ಯ....''ಎಂಬ ಶ್ಲೋಕ (ಪಡ್ಡಾ.೧೪೨) ಜಟಾಸಿಂಹ ನಂದಿಯ ವರಾಂಗಚರಿತದಲ್ಲಿದೆ. (೧೫–೭೮). ಕಾಲ ಕ್ರಿ. ಶ. ೭ನೆಯ ಶತಮಾನದ ಅಂತ್ಯ.

೯. ''ಆದೌ ಜನ್ಮ ಜರಾರೋಗ....'' ಎಂಬ ಶ್ಲೋಕ (ಪಡ್ಡಾ. ೬೬) ಗುಣಭದ್ರಾಚಾರ್ಯರು ಪೂರೈಸಿದ ಮಹಾಪುರಾಣ ಭಾಗದಲ್ಲಿದೆ. (೪೬– ೧೯೬) : ಗುಣಭದ್ರನ ಉತ್ತರ ಪುರಾಣ ಮುಗಿದದ್ದು ಕ್ರಿ. ಶ. ೮೯೭ಕ್ಕಿಂತ ಸ್ವಲ್ಪ ಹಿಂದೆ.

ಮೇಲ್ಕಂಡ ಪದ್ಯವೇಷ್ಟನಗಳು ಇನ್ನೂ ಪ್ರಾಚೀನತರ ಗ್ರಂಥಗಳಿಗೆ ಸೇರಿದುವೆಂದೂ ಕನ್ನಡ ಗ್ರಂಥದಲ್ಲಿ ಅವುಗಳ ಅಸ್ತಿತ್ವವೇ ಸಂದೇಹಾಸ್ಪದವೆಂದೂ ಬಲವಾದ ಪ್ರಮಾಣಗಳಿಂದ ಸ್ಥಾಪಿಸುವವರೆಗೆ ಕನ್ನಡ ವಡ್ಡಾರಾಧನೆ ಕ್ರಿ. ಶ. ೮೯೮ ಕ್ಕಿಂತ ಹಿಂದಿನದಲ್ಲವೆಂದು ಒಪ್ಪಬೇಕಾಗುತ್ತದೆ. ಗುಣಭದ್ರಾಚಾರ್ಯ ಕೃತ ''ಆದೌ ಜನ್ಮಜರಾರೋಗ....'' ಎಂಬ ಪದ್ಯ ಬಹು ಮುಖ್ಯವಾದ ಆಧಾರವಾಗಿದೆ. ಇದನ್ನು ಕದಲಿಸುವುದು ಕಷ್ಟ.

ವಡ್ಡಾರಾಧನೆಯ ಅತಿ ಪ್ರಾಚೀನ ಹಸ್ತಪ್ರತಿ (ಖ) ಕ್ರಿ. ಶ. ೧೪೮೩ ರಲ್ಲಿ ಲಿಖಿತವಾಗಿದೆ. ಆದ್ದರಿಂದ ವಡ್ಡಾರಾಧನೆ '೮೯೮–೧೪೮೩'ರ ಅವಧಿಯಲ್ಲಿ ರಚಿತವಾಗಿರಬೇಕು. ಈ ಅವಧಿಯನ್ನು ಕುಗ್ಗಿಸಲು ಅಂತರಿಕ ಪ್ರಮಾಣಗಳು ನೆರವಾಗುತ್ತವೆ.

೧. ಈ ಗ್ರಂಥದಲ್ಲಿ ಪದಾದಿಯ ಪಕಾರಕ್ಕೆ ಸಾಧಾರಣವಾಗಿ 'ಹ' ಬರುವುದಿಲ್ಲ, ಈ ಮಾರ್ಪಾಟು ನಡೆದದ್ದು ಕ್ರಿ. ಶ. ೧೧ನೆಯ ಶತಮಾನದ ಮೇಲೆ ಎಂದು ಶಾಸನಗಳಿಂದ ತಿಳಿದು ಬರುತ್ತದೆ.

೨. ರೇಫಸಂಯುಕ್ತ ಈ ಗ್ರಂಥದಲ್ಲಿ ದೊರಕುತ್ತದೆಯೇ ಹೊರತು ಅದಕ್ಕೆ ಸಜಾತೀಯತ್ವ ಪ್ರಾಪ್ತವಾಗಿಲ್ಲ. ಹೀಗಾಗುವುದು ೧೨ನೆಯ ಶತಮಾನದ ಮಧ್ಯಭಾಗದ ಜನರ ಬಾಯಿಮಾತಿನಲ್ಲಿ ತಲೆದೋರಿತಾದರೂ ೧೩ನೆಯ ಶತಮಾನ ಮುಗಿಯುವ ಹೊತ್ತಿಗೆ ಸಾರ್ವತ್ರಿಕವಾದ ಭಾಷಾವ್ಯಾಪಾರವಾಗಿ ಪರಿಣಮಿಸಿತು.

೩. ಕಳ್ದೊಂ, ಕೂಡಿದೊಂ ಇತ್ಯಾದಿ ಕ್ರಿಯಾರೂಪಗಳು ನಿಸ್ಸಂದೇಹವಾಗಿ ಪ್ರಾಚೀನ. ೧೧ನೆಯ ಶತಮಾನದ ಮೇಲೆ ಇವುಗಳ ಪ್ರಯೋಗ ವಿರಲವಾಗುತ್ತದೆ.

ಈ ಕಾರಣಗಳು ಕನ್ನಡ ವಡ್ಡಾರಾಧನೆಯ ಕಾಲ ಕ್ರಿ. ಶ. ೮೯೮–೧೪೮೩ ರ ವರೆಗೆ ವಿಶಾಲವಾದ, ಆದರೆ ನಿಷ್ಕೃಷ್ಟವಾದ ಅಂತರಕ್ಕೆ ಸೇರಿದೆ

ಯೆಂಬುದನ್ನೂ, ಬಹುಶಃ ಅದು ೧೧ನೆಯ ಶತಮಾನದಲ್ಲಿ ರಚಿತವಾಗಿರ ಬಹುದೆಂಬುದನ್ನೂ ಸೂಚಿಸುತ್ತವೆ.

ಡಾ.ಉಪಾಧ್ಯೆಯವರು ಮಾಡಿರುವ ಆಕರ ನಿರ್ದೇಶನ ಪಟ್ಟಿಗೆ ಮತ್ತೆ ಕೆಲವನ್ನು ಸೇರಿಸಬಹುದು. ವಿದ್ಯುಚ್ಚೋರ ಗುರುದತ್ತಭಟ್ಟಾರರ ಕಥೆ ಗಳಲ್ಲಿ ಉದ್ಧೃತವಾಗಿ ಕೊಟ್ಟಿರುವ ಹಲವು ಪ್ರಾಕೃತ ಗಾಹೆಗಳು ವಟ್ಟಕೇರ ಸ್ವಾಮಿಯ 'ಮೂಲಾಚಾರ'ಕ್ಕೆ ಸೇರಿದುವಾಗಿವೆ. ಈ ಕೆಳಗಿನ

ಸಮ್ಮದ್ದರಿಸ್ಸಣ ಸುದ್ಧೋ ಕದವದ ಕಮ್ಮೋ ಸುಸೀಲ ಸಂಪಣ್ಣೋ ।
ಅಣವರದಾಣ ಸೀಲೋ ಜಿಣಸಾಸಣ ವಚ್ಛಲೋ ವೀರೋ ॥

ಎಂಬ ಗಾಹೆ ಪದ್ಮನಂದಿಯ 'ಜಂಬೂದ್ವೀಪ ಪಣ್ಣತ್ತಿ' ಎಂಬ ಗ್ರಂಥದ ಅಂತ್ಯಭಾಗಕ್ಕೆ (೧೬೫) ಸೇರಿದ್ದಾಗಿದೆ. ಇದು ಕನ್ನಡ ವಡ್ಡಾರಾಧನೆಯ ಸುಕೌಶಳ ಸ್ವಾಮಿಯ ಕಥೆಯ ಆದಿಯಲ್ಲಿ ಅನುವಾದಿತವಾಗಿದೆ. ಆದರೆ ಎರಡನೆಯ ಪಂಕ್ತಿಯ ಪಾಠ ಇಲ್ಲಿ ತೀರ ಬೇರೆಯದಾಗಿದೆ. ಪದ್ಮನಂದಿಯ ಕಾಲವೇ ಅನಿರ್ದಿಷ್ಟವಾಗಿರುವುದರಿಂದ[೨೯] ವಡ್ಡಾರಾಧನೆಯ ಕಾಲ ನಿರ್ದೇಶಕ್ಕೆ ಸಹಾಯವಾಗುವಂತಿಲ್ಲ. ಡಾ. ಉಪಾಧ್ಯೆಯವರು ಹೇಳಿರುವ ಆಂತರಿಕ ಆಧಾರಗಳಲ್ಲಿ ಒಂದನ್ನು ಪರಿಶೀಲಿಸಬಹುದು. ಉಳಿದ ಎರಡು ವಿಷಯ ವಿಚಾರಕ್ಕೆ ಸಹಾಯವಾಗಲಾರವು.

೧. ಪಕಾರ ಹಕಾರವಾಗುವ ವಿಷಯ : ಈ ಗ್ರಂಥದಲ್ಲಿ ಪದಾದಿಯ ಮತ್ತು ಮಧ್ಯಾಂತಗಳ ಪಕಾರಕ್ಕೆ ಸಾಧಾರಣವಾಗಿ 'ಹ' ಬರುವುದಿಲ್ಲ. ಪಕಾರ ಕ್ರಮೇಣ ಹಕಾರಕ್ಕೆ ಮಾರ್ಪಾಡಾದದ್ದು ಕ್ರಿ.ಶ. ೧೧ನೆಯ ಶತ

---

29 ಕ್ರಿ.ಶ. ೫೦೨ ಎಂದು ಹೀರಾಲಾಲ (catalogue, C.P. & Berar, xiv); ವಿಕ್ರಮ ಶಕ ೧೨ನೆಯ ಶತಮಾನ ಎಂದು ಪಂಡಿತ ನಾಥೂರಾಮ ಪ್ರೇಮಿ (ಜೈನ ಸಾಹಿತ್ಯ ಔರ್ ಇತಿಹಾಸ್, ೫೭೧); ಕ್ರಿ. ಶ. ಸು. ೭೦೦ ಎಂದು ಜ್ಯೋತಿ ಪ್ರಸಾದ ಜೈನ (Jaina Sources of the History of Ancient India, p. 113).

ಮಾನದ ಮೇಲೆ ಎಂದು ಶಾಸನಗಳಿಂದ ತಿಳಿದು ಬರುತ್ತದೆ. ಇದಕ್ಕೆ ಆಧಾರ ವಾಗಿ ಡಾ. ಉಪಾಧ್ಯೆಯವರು ನಿರ್ದೇಶಿಸಿರುವ ಗ್ರಂಥದಲ್ಲೇ '೧೦ನೆಯ ಶತಮಾನದಲ್ಲಿ ಪಕಾರಯುಕ್ತ ರೂಪಗಳೆಡೆಯಲ್ಲಿ ಹಕಾರವು ತಲೆದೋರ ಲಾರಂಭಿಸುತ್ತದೆಂಬುದು ಕನ್ನಡ ನುಡಿಯ ಎಲ್ಲ ಪ್ರದೇಶಗಳಲ್ಲೂ ಕಾಣು ತ್ತದೆ,[30] ಎಂಬ ವಾಕ್ಯವಿದೆ. ಇದು ಹೆಚ್ಚು ಗಮನಕ್ಕೆ ಅರ್ಹವಾದದ್ದು. ಕನ್ನಡ ಪ> ಹ ಆಗಿರುವುದಕ್ಕೆ ಇನ್ನೂ ಹಳೆಯ ಪ್ರಯೋಗಗಳಿವೆ.

೧. ಹಡಗಿಲೆ ನಾಮಗ್ರಾಮಂ (SII, XX, 4-12 ; 683)

೨. ಜೋತಿಷ ಶಕುನ ನಿಮಿತ್ತಂಗಳ ಬಲ್ಲಹಗೆ (SII XI-i, 123 ; A.D. 862)

೩. ಸಿಸುಳ ಹಾಟಿಯ್ಯದಿಂಬರು (BKI. No. 14, ಪಂಕ್ತಿ ೧೧, AD 872) ಪೊದಲೊಳು ಸಿಸೂಳಹಾಟಿಂ ವಿದಿತ ಶ್ರೀ ಚಳುಕಿ ರಾಜ್ಯದೊಳ್ (ಅದೇ, ಪಂಕ್ತಿ ೧೫)

೪. ಸಂದ ಲೋಕಕ್ಕೆ ಹೋಹಾನ್ (ಶ್ರೀರಂಗಪಟ್ಟಣ 134, ಕ್ರಿ.ಶ. 910)

೫. ಪನ್ನೊಮ್ಮರ್ಮತ್ತರ್ಹಾಡುವೊಜಿಗ (SII IX, Part I No. 60. l. 13, 931– AD)

೬. ಊರಟಿಸೊಳ್ ಹೋಗೆನೆಂದು (ಅದೇ, No. 61, l. 13, AD 931-32)

೭. ಹನ್ನಿರ್ವಟಿಜು ಗದ್ಯಾಣಂ (I.A, XII, p. 25 f. l. 15 AD 971)

---

30 In the 10th century forms with h. in place of p. begin to appear in all parts of the kanarese area (Grammar of the Oldest Kanarese Inscriptions, P. 2)

ಇವುಗಳನ್ನು ನೋಡಿದರೆ ಪ ಹ ಮಾರ್ಪಾಡು ೯-೧೦ನೆಯ ಶತಮಾನ ಗಳಲ್ಲಿಯೇ ಅಲ್ಲಲ್ಲಿ ಇದ್ದಿತೆಂದು ಹೇಳಬೇಕಾಗಿದೆ. ಇದು ಜನರ ಬಾಯಿಮಾತಿ ನಲ್ಲಿ ತಲೆದೋರಿ ಅಲ್ಲಿಂದ ಈ ಶಾಸನಗಳೊಳಕ್ಕೆ ಪ್ರವೇಶಿಸಿರಬಹುದು. ಪ್ರಕೃತ ಪ > ಹ ಮಾರ್ಪಾಡಿಗೆ ಒಂದು ನಿದರ್ಶನವಾದರೂ ವಡ್ಡಾರಾಧನೆ ಯಲ್ಲಿ ದೊರೆಯುತ್ತಿಲ್ಲ. ಹತ್ತನೆಯ ಶತಮಾನದ ಯಾವ ಕನ್ನಡ ಗ್ರಂಥ ದಲ್ಲೂ ಇರುವಂತೆ ತಿಳಿದಿಲ್ಲ. ಹಳೆಯ ನುಡಿಗಟ್ಟಿನಲ್ಲಿ ಪರಿಣತನಾಗಿದ್ದ ಒಬ್ಬ ಈಚಿನ ಕವಿ ಪಟ್ಟುಹಿಡಿದು ಪಕಾರ ಪ್ರಯೋಗವನ್ನೇ ಮಾಡಿ ಬರೆದಿದ್ದಾನೆ ಎಂಬ ಸಂಭವತೆಯನ್ನು ಬಿಟ್ಟರೆ 'ವಡ್ಡಾರಾಧನೆ' ೧೦ನೆಯ ಶತಮಾನಕ್ಕಿಂತ ಈಚಿನದಾದ ರಚನೆಯಲ್ಲವೆಂದು ನಿರ್ಣಯಿಸಬೇಕಾಗಿದೆ. ಕ್ರಿ.ಶ. ೧೦೬೮ರಲ್ಲಿ ಇದ್ದ ಶಾಂತಿನಾಥನ 'ಸುಕುಮಾರ ಚರಿತಂ' ಎಂಬ ಕಾವ್ಯದಲ್ಲಿ ವಡ್ಡಾ ರಾಧನೆಯ ಪ್ರಭಾವ ಪದಪ್ರಯೋಗಗಳಲ್ಲಿಯೂ, ಸಮಾನ ಪದ್ಯವೇಷ್ಟನ ದಲ್ಲಿಯೂ, ವರ್ಣನೆಗಳಲ್ಲಿಯೂ ಕಂಡುಬರುವುದು ಇದಕ್ಕೆ ಪರಿಪೋಷಕ ವಾಗಿದೆ.[31]

"ಈ ಗ್ರಂಥದ ಗದ್ಯಶೈಲಿ 'ಚಾವುಂಡರಾಯ ಪುರಾಣ'ದ ಶೈಲಿಗಿಂತ ಈಚಿನದೆಂದೂ, ನೋಂಪಿ ಕಥೆಗಳ ಗದ್ಯಶೈಲಿಗಳಿಗಿಂತ ಹಳೆಯದೆಂದೂ ನನಗೆ ತೋರುತ್ತದೆ ; ಹೀಗೆ ಹೇಳುವಾಗ ಈ ಕಥೆಗಳಲ್ಲಿ ಸಂಸ್ಕೃತ ಪದಪ್ರಯೋಗ ಅಲ್ಪತರವಾಗಿರುವುದನ್ನೂ, ಇವುಗಳ ದೇಶೀಯುವಾದ ನುಡಿಗಟ್ಟನ್ನೂ ಗಮನಿಸಿದೆ. ಆದ್ದರಿಂದ ಈ ಗ್ರಂಥದ ಕಾಲವನ್ನು ನಾನು 'ಚಾವುಂಡರಾಯ ಪುರಾಣ'ದ ಕಾಲಕ್ಕಿಂತ (ಕ್ರಿ. ಶ. ೯೭೮) ಈಚೆಗೆ ಹಾಕುತ್ತೇನೆ" ಎಂದು ಡಾ. ಉಪಾಧ್ಯೆಯವರು ಹೇಳುತ್ತಾರೆ. ಈ ನೋಂಪಿ ಕಥೆಗಳನ್ನು ಯಾರು ಯಾವ ಕಾಲದಲ್ಲಿ ರಚಿಸಿದರೆಂಬುದು ತಿಳಿದಿಲ್ಲ. ಅವುಗಳಲ್ಲಿ ಪ > ಹ ಮಾರ್ಪಾಡು ಹೇರಳವಾಗಿ ಕಾಣುತ್ತದೆ-ಹಙಿದಲೆ, ಹೊಟ್ಟೆ, ಹೊಱಹಲ್ಲು

---

31 ಹೆಚ್ಚಿನ ವಿವರಗಳಿಗೆ 'ಸುಕುಮಾರ ಚರಿತಂ' ಎಂಬ ಗ್ರಂಥದ ಮುನ್ನುಡಿ (XXXVii-Xiii) ನೋಡಿ ಅಥವಾ ಇದೇ ಗ್ರಂಥದ (164-167) ಪುಟ ಗಳನ್ನು ನೋಡಿ.

ಇತ್ಯಾದಿ ಉದಾಹರಣೆಗಳು ಸಿಕ್ಕುತ್ತವೆ.[32] ಈ ವ್ಯತ್ಯಾಸವಿಲ್ಲದ ೧೦ನೆಯ ಶತಮಾನದ ಕನ್ನಡ ಗ್ರಂಥಗಳಿಗಿಂತಲೂ, ವಡ್ಡಾರಾಧನೆಗಿಂತಲೂ ಇವು ಈಚಿನವೆಂದು ಹೇಳಬಹುದು; ಸಂಸ್ಕೃತ ಶಬ್ದಗಳ ಪ್ರಯೋಗ ಕಡಿಮೆಯಾಗಿರುವುದು, ದೇಶೀಯ ನುಡಿಗಟ್ಟಿನ ಪ್ರಾಚುರ್ಯ–ಇವು ನೋಂಪಿಯ ಕಥೆಗಳಲ್ಲಿ ಇರಬಹುದಾದರೂ ೧೦ನೆಯ ಶತಮಾನದ ಗ್ರಂಥಗಳಲ್ಲಿ ಇವು ಇಲ್ಲವೆಂದು ಹೇಳಲಾಗದು. ಪಂಪ ಭಾರತವಲ್ಲಿ ಒಂದಾದರೂ ಸಂಸ್ಕೃತ ಶಬ್ದವಿಲ್ಲದ ಅನೇಕ ಪದ್ಯಗಳಿರುವುದೂ, ದೇಶೀ ನುಡಿಗಟ್ಟಿನ ಗದ್ಯಖಂಡಗಳು ಬಹುವಾಗಿ ದೊರೆಯುತ್ತಿರುವುದೂ ಸುವಿದಿತವಾಗಿರುವ ವಿಷಯ. ಆದ್ದರಿಂದ ಶೈಲಿಯ ಈ ಲಕ್ಷಣಗಳು ನೋಂಪಿಯ ಕಥೆಗಳಿಗೇ ಮೀಸಲಲ್ಲ. ಅವು ಹೇರಳವಾಗಿ ದೊರೆಯುವ ವಡ್ಡಾರಾಧನೆ ೧೦ನೆಯ ಶತಮಾನದ ರಚನೆಯಲ್ಲವೆಂದು ಇವುಗಳಿಂದ ಸ್ಥಾಪಿಸುವುದು ಸಾಧುವಾಗಲಾರದು. 'ವಡ್ಡಾರಾಧನೆ' ಚಾವುಂಡರಾಯ ಪುರಾಣದ ಕಾಲಕ್ಕಿಂತ (ಕ್ರಿ.ಶ. ೯೭೮) ಈಚಿನದೆಂಬ ಅಭಿಪ್ರಾಯಕ್ಕೆ ಇನ್ನೂ ಬಲವಾದ ಆಧಾರಗಳು ಬೇಕಾಗಿವೆ. ಈ ಲಕ್ಷಣಗಳೇ ಅದು ಚಾವುಂಡರಾಯ ಪುರಾಣಕ್ಕಿಂತ ಹಳೆಯದೆಂದು ಹೇಳಲು ನೆರವಾಗಲೂಬಹುದು.

ಹಳಗನ್ನಡಕ್ಕಿಂತಲೂ ಹಳೆಯದಾದ ಎಂದರೆ ಪೂರ್ವದ ಹಳಗನ್ನಡದ ಪ್ರಯೋಗಗಳು ಕೆಲವು ವಡ್ಡಾರಾಧನೆಯಲ್ಲಿವೆಯೆಂಬ ವಿಷಯದಲ್ಲಿ ಯಾರದೂ ಭಿನ್ನಾಭಿಪ್ರಾಯವಿಲ್ಲ. ಒಕಾರಯುಕ್ತ ಅಖ್ಯಾತ ವಿಭಕ್ತಿ ಪ್ರತ್ಯಯಗಳ ವಿಚಾರವಾಗಿ ಹಿಂದೆ ಹೇಳಿದೆ. ಬೇರೆ ಕೆಲವು ಪೂರ್ವದ ಹಳಗನ್ನಡದ ಅವಶೇಷಗಳನ್ನು ಇಲ್ಲಿ ಕಾಣಿಸಬಹುದು :

೧. ೧. — ಅನ್ ಎಂಬ ದ್ವಿತೀಯಾ ವಿಭಕ್ತಿಗೆ : ವಾಯುಭೂತಿಯೆಂಬೊನಾನಾವೋದಿಸಿದೆಂ (ಪು. ೨೪–೪)

೨. — ಆ ಎಂಬ ಷಷ್ಠೀದೀರ್ಘಕ್ಕೆ :

(i) ಅಧಮ [ರಾ] ಪುಲ್ಲಮಾನಸ [ರಾ] ದುರ್ಜನ [ರಾ] ಜಾರಜಾತ [ರಾ] ವಿಜಾತಿಗಳ್ಗೆ (೮–೧೪)

(ii) ದಾಷ್ಟಿಕನಾ ಪಕ್ಕದೆ ಕಾಪಿರ್ದನ್ (೧೫–೨)

---

32 ಜನ್ನನ ಯಶೋಧರ ಚರಿತೆ (ಸಂ. ಕ. ವೆಂ. ರಾಘವಾಚಾರ್) ಪುಟ 133

(iii) ವರ್ಣೆಯೆಂಬ ತೊಱೆಯಾ ತಡಿಯೊಳ್ (೧೨೮–೧೩)
(iv) ತನ್ನ ಮಗಳಾ ಚೋೞಂಗಿಯೊಳ್ (೧೮೪–೧೮)

'—ಉಳ್' ಎಂಬ ಸಪ್ತಮೀವಿಭಕ್ತಿ ಪ್ರತ್ಯಯ 'ವಡ್ಡಾರಾಧನೆ'ಯಲ್ಲಿ ಈಗ ಒಂದಾದರೂ ಇಲ್ಲ; ಇದನ್ನು ಎಲ್ಲೆಡೆಗಳಲ್ಲೂ – ಒಳ್ ಎಂದು ಹಳಗನ್ನಡಕ್ಕೆ ಲಿಪಿಕಾರರೂ, ಇತರರೂ ತಿದ್ದಿರಬಹುದು. ಸೋಜಿಗದ ಅಂಶವೇನೆಂದರೆ ದ್ವಿತೀಯಾ ಷಷ್ಠೀವಿಭಕ್ತಿ ದೀರ್ಘರೂಪಗಳು ಕ್ರಿ.ಶ. ೧೪೦೩ರಲ್ಲಿ ಲಿಖಿತವಾದ ಹಸ್ತಪ್ರತಿಯಲ್ಲಿ ಇನ್ನೂ ಸಿಕ್ಕುತ್ತಿರುವುದು. ಇದು ಕವಿಯ ಸ್ವಹಸ್ತಪ್ರತಿಯಲ್ಲಿ ಇಂಥ ರೂಪಗಳು ಇನ್ನೂ ಹಲವು ಇದ್ದಿರಬೇಕೆಂಬ ಊಹೆಗೆ ಅವಕಾಶ ಕೊಡುತ್ತದೆ. ಇವು ಚಾವುಂಡರಾಯ ಪುರಾಣದಲ್ಲಾಗಲಿ, ಅದಕ್ಕೆ ಹಿಂದಿನ ಗ್ರಂಥಗಳಲ್ಲಾಗಲಿ ಇಲ್ಲ.

೨. ಉಳ್ಳ ಎಂಬರ್ಥದ 'ಒಡೆಯ' ಎಂಬ ತದ್ಧಿತ ಪ್ರತ್ಯಯವನ್ನು ನಾಗವರ್ಮನೇ ಹೇಳಿರುವನು.[32] ಇದರ ಪ್ರಯೋಗ 'ವಡ್ಡಾರಾಧನೆ'ಯಲ್ಲಿರುವಷ್ಟು ಬೇರಾವ ಗ್ರಂಥದಲ್ಲೂ ಇಲ್ಲ. ಒಡೆಯನ್, ಒಡೆಯಳ್, ಒಡೆಯರ್, ಒಡೆಯದು, ಒಡೆತು, ಒಡೆಯವು – ಈ ಎಲ್ಲ ರೂಪಗಳೂ ಈ ಗ್ರಂಥದಲ್ಲಿವೆ. ಪಂಪನ (ಕ್ರಿ. ಶ. ೯೪೧) ಗ್ರಂಥಗಳಲ್ಲಿ ಈ ಪ್ರತ್ಯಯದ ಪ್ರಯೋಗ ಕೆಲವು ಮಾತ್ರ ಇವೆ: ಬುದ್ಧಿಯೊಡೆಯರ್ – ಇತ್ಯಾದಿ.[33] ಅವನಿಗಿಂತ ಹಿಂದಿನ ಕಾಲದ ಗ್ರಂಥಗಳಲ್ಲಾಗಲಿ, ಶಾಸನಗಳಲ್ಲಾಗಲಿ ಈ ಪ್ರತ್ಯಯವಿದ್ದಂತೆ ಕಾಣುವುದಿಲ್ಲ. ಇವೆಲ್ಲ ಖಚಿತವಾಗಿರುವ ಅಂಶಗಳು. ಆದರೆ ಇವುಗಳಿಂದ ಕಾಲನಿರ್ಣಯಕ್ಕೆ ಹೇಗೆ ಸಹಾಯ ? ಈ ಪ್ರತ್ಯಯದ ಪ್ರಯೋಗ ಬಾಹುಳ್ಯ ಪ್ರಾಚೀನತೆಗೆ ಸಾಕ್ಷಿ ಎಂದಾದರೆ 'ವಡ್ಡಾರಾಧನೆ' ಪಂಪಪೂರ್ವ ಗ್ರಂಥವೆಂದು ಹೇಳಬೇಕಾಗುತ್ತದೆ; ಇಲ್ಲವೆ ಪಂಪಾದಿಗಳ ಕ್ವಚಿತ್ ಪ್ರಯೋಗವನ್ನು ಕಂಡಿದ್ದ ಈಚಿನ ಕವಿಯೊಬ್ಬ ಈ ಪ್ರಯೋಗದ ಮೇಲೆ ಪ್ರೀತಿಯುಳ್ಳವನಾಗಿ ಅದನ್ನೇ ಅಧಿಕವಾಗಿ ಬಳಸಿದನು ಎಂದು ಹೇಳ

---

32 ಕಾವ್ಯಾವಲೋಕನ, ಸೂ. ೭೪.
33 ಪಂಪಭಾರತ, ೩–೩೪ ವ.

ಬೇಕಾಗುತ್ತವೆ. ಪಂಪ ಪೂರ್ವಯುಗದ ಲಭ್ಯಸಾಹಿತ್ಯ ಶಾಸನಗಳಲ್ಲಿ ಇಲ್ಲದಿದ್ದ ಈ ಪ್ರಯೋಗ ವಡ್ಡಾರಾಧನೆಯಲ್ಲಿ ಹೇಗೆ ಬಂತು ? ಜನರ ಮಾತಿನಲ್ಲಿ ಬಳಕೆಯಲ್ಲಿದ್ದಿರಬಹುದಾದ ಈ ಪ್ರತ್ಯಯವನ್ನು ಶಿವಕೋಟಿ ಎತ್ತಿ ಕೊಂಡು ಅದಕ್ಕೆ ಪ್ರಥಮತಃ ತನ್ನ ಗ್ರಂಥದಲ್ಲಿ ಸ್ಥಾನವನ್ನು ಕೊಟ್ಟಿರ ಬಹುದು. ಹೀಗೆ ಅನೇಕ ಊಹೆ ಪ್ರತ್ಯೂಹೆಗಳಿಗೆ ಆಸ್ಪದವಾಗುತ್ತದೆ. ಇಂಥ ಪ್ರಯೋಗಗಳನ್ನು ಹಿಡಿದು ಹೊರಟರೆ ಹೀಗೆಯೇ ದೀನಾರ್, ದ್ರಮ್ಮ ಶಬ್ದಗಳ ಪ್ರಯೋಗದಿಂದ ಆಗುವ ಸಹಾಯವೂ ಇದೆ.

೩. ದೀನಾರವೆಂಬುದು ರೋಮೀಯರ ನಾಣ್ಯ ; ಇದು ಚಿನ್ನದ್ದಾಗಿರ ಬಹುದು, ಬೆಳ್ಳಿಯದಾಗಿರಬಹುದು. ಇದು ಬಹು ಹಿಂದೆಯೇ ತನ್ನ ಹೆಸರಿ ನೊಡನೆ ಕರ್ಣಾಟಕಕ್ಕೆ ಬಂದಿತ್ತು ; ಬೆಂಗಳೂರಿನ ಬಳಿ ಈ ನಾಣ್ಯಗಳು ಸಿಕ್ಕಿವೆ. ಇದಕ್ಕೆ Denarius ಎಂದು ಲ್ಯಾಟಿನ್ ಭಾಷೆಯ ಹೆಸರು. ಇಕ್ಷ್ವಾಕು ವಂಶದ ವೀರಪುರುಷದತ್ತನ ನಾಗಾರ್ಜುನಕೊಂಡದ ಶಾಸನದಲ್ಲಿ 'ದೀನಾರಿಮಾಸಕ' ಎಂಬ ಪ್ರಯೋಗವಿದೆ;[34] ಶಾಸನದ ಕಾಲ ಕ್ರಿ.ಶ. ೩ನೆಯ ಶತಮಾನ. ಈ ನಾಣ್ಯದ ಹೆಸರು ಈ ಕಾಲದಿಂದ ಹಿಡಿದು ಇತರ ಶಾಸನ ಗಳಲ್ಲೂ ಪ್ರಯೋಗದಲ್ಲಿತ್ತು. ಕನ್ನಡ 'ವಡ್ಡಾರಾಧನೆ'ಯಲ್ಲಿ ಅಲ್ಲದೆ ಈ ಶಬ್ದ ಒಂಡೆರಡೆಡೆ ಇತರ ಕನ್ನಡ ಗ್ರಂಥಗಳಲ್ಲಿ ಪ್ರಯುಕ್ತವಾಗಿದೆ :

೧. ಶಾಂತಿನಾಥನ 'ಸುಕುಮಾರಚರಿತಂ' (೧೦–೧೧೮) ಸು. ೧೦೬೮
"ಕೋಟದೀನಾರಮನಾ ಮೃಗನಯನೆ ಕೊಟ್ಟು ಕೊಂಡಳ್"
೨. ಕರ್ಣಪಾರ್ಯನ 'ನೇಮಿನಾಥಪುರಾಣ' (೫–೫೫) ಕಾಲ ೧೧೪೦;
"ದೀನಾರಮುಂ ದಿನಂಪ್ರತಿ ಸಾಸಿರಮಾ ಪರ್ವದಿನದೊಳ್ ಪತ್ತು ಸಾಸಿರಂ ಎಂಬೀಗಣನೆಯಿಂ"

ದ್ರಮ್ಮ > ದಮ್ಮ ಎಂಬ ನಾಣ್ಯದ ಹೆಸರಿಗೆ ಮೂಲ ಗ್ರೀಕ್ ಭಾಷೆಯ Drachma ಎಂಬ ಶಬ್ದ. ಕನ್ನಡದಲ್ಲಿ ಇದಕ್ಕೆ ಪ್ರಯೋಗಗಳು.

---

34 Select Inscriptions (D. C. Sarkar), P. 222.

೧. ಕ್ರಿ.ಶ. ೮೭೨ರಲ್ಲಿ ಲಿಖಿತವಾದ ೧ನೆಯ ಅಮೋಘವರ್ಷ ನೃಪ ತುಂಗನ ಖಾಜಿಪೇಟೆಯ ಶಾಸನದಲ್ಲಿ 'ಎರಡು ದ್ರಮ್ಮ', 'ಇಪ್ಪತ್ತನಾಲ್ಕು ದ್ರಮ್ಮ', 'ಮದುವೆಯೊಳೋರೊಂದು ದ್ರಮ್ಮ' – ಹೀಗೆ ಮೂರು ಸಲ ಪ್ರಯೋಗವಿದೆ.[35]

೨. ರವಿನಾಗಭಟ್ಟನೆಂಬ ಕವಿ ಕ್ರಿ. ಶ. ೯೨೯ರಲ್ಲಿ ಹೇಳಿದ ಶಾಸನ (ಕ.ಕ.ಚ. i–೨೮)

ವಿಪ್ರರ ವಿವಾಹಮೂರೊಳ
ಗಪ್ಪನಿತಱಿೊಳೆಲ್ಲಮೊಸಗೆ ದ್ರಮ್ಮಂ ಮೂಱಂ ।
ತಪ್ಪದೆ ಮಾಣಿಯೊಳಿರಡಂ
ಕೆಪ್ಪಿದರೀ ಶೂದ್ರಗಣದ ಮದುವೆಯೊಳೊಂದಂ ॥

೩. ಬರಿಸಕ್ಕೆ ಆಱು ಕರಿಯದ್ರಮ್ಮಮಂ ತೀಱುವರ್ (ಕಾಲ ಕ್ರಿ.ಶ. ೯೫೧)[36]

೪. ಕ್ರಿ.ಶ. ೧೦೬೨ ರಲ್ಲಿ ಲಿಖಿತವಾದ ಬಂಕಾಪುರದ ಶಾಸನ,[37] "ಪಾಯದ್ರಮ್ಮಂ"

೪. –ಉಂ ಎಂಬ ಸಮುಚ್ಚಯವನ್ನು ಒಳಗೊಂಡಿರುವ ಕೆಲವು ಪ್ರಯೋಗಗಳು, ವಡ್ಡಾರಾಧನೆಯಲ್ಲಿರುವುವು ಗಮನಾರ್ಹವಾಗಿವೆ. ಈ ಸಮುಚ್ಚಯ ಪ್ರಯೋಗವನ್ನು ಕುರಿತಿರುವ ಮೂರು ಪದ್ಯಗಳು, ಕವಿರಾಜ ಮಾರ್ಗದಲ್ಲಿರುವುವು, (೧–೧೩೧, ೧೩೨, ೧೩೩) ಪರಿಶೀಲನೆಗೆ ತಕ್ಕುವು.

---

35 Annual Report of Archaeology, Hyderabad, 1936.

36 Historical Grammar of Old Kannada (Dr. Gai). p. 155.

37 Bombay Karnatak Inscriptions, 1934, No 3.

ಸಮುಚ್ಚಯ ಸಂಬಂಧದಲ್ಲಿ ಪಲವು ಶಬ್ದಗಳಿದ್ದಾಗ ಕೆಲವಕ್ಕೆ ಉಂ ಪ್ರತ್ಯಯ ವನ್ನು ಸೇರಿಸಿ ಕೆಲವಕ್ಕೆ ಬಿಟ್ಟರೆ ಅದು ದೋಷ. ಉದಾಹರಣೆ –

ದೇವರುಂ ಗೊರವರುಂ ಗುಣವೃದ್ಧರನಾರತಂ
ಕಾವರಕ್ಕಸನಂ ಪ್ರಜೆಯುಂ ಪರಿವಾರಮುಂ ॥

ಈ ದೋಷವನ್ನು ಕಳೆಯುವ ಕ್ರಮ ಹೀಗೆ :

ನೃಪನುಮಂ ಪ್ರಜೆಯುಮಂ ಪರಿವಾರಮುಮಂ
ಕೃಪೆಯಿನಾ ಗೊರವರುಂ ಸುರರುಂ ಗುಣವೃದ್ಧರುಂ
ವಿಪುಳರಾಗಪರರಾಗಿಸುಗೆ...

ಇಲ್ಲಿ ಗುಣವೃದ್ಧರ್ ಎಂಬುದಕ್ಕೆ ಪ್ರತಿಯಾಗಿ 'ಗುಣವೃದ್ಧರುಂ' ಎಂದಿದ್ದರೆ ಸರಿ. ನೃಪತುಂಗನ ಈ ವಿಧಿಯನ್ನು ನೋಡಿದರೆ ಅವನ ಕಾಲದಲ್ಲಿ ವಿಕಲ್ಪ ಸಮುಚ್ಚಯ ಪ್ರಯೋಗಶೀಲರಾದ ಲೇಖಕರು ಹಲವರಿದ್ದಿರಬೇಕೆಂದು ತೋರುತ್ತದೆ. 'ವಡ್ಡಾರಾಧನೆ'ಯಲ್ಲಿ ಈ ಕೆಳಗಿನ ಕೆಲವು ಪ್ರಯೋಗಗಳು ದೊರೆಯುತ್ತವೆ :

೧. ಸೂರ್ಯಮಿತ್ರಾಚಾರ್ಯರುಮಗ್ನಿಭೂತಿರುಷಿಯರಂ ಕಂಡು (೧೨–೨೩)

೨. ಲಡ್ಡುಗೆಗಳ್ ಮಂಡಗೆಗಳುಂ ಮೊದಲಾಗೊಡೆಯ (೧೮-೧೫)

೩. ಇಂದ್ರಾಜಾಲಿಗರ ಪಾಪೆಗಳುಂ ಸೀರೆಗಳುಂ ಝಣಂಬಮುಂ ಕೊಂಡು (೧೯–೧೨)

೪. ಮೂವತ್ತಿರ್ವರ್ ದಿವ್ಯ ಸ್ತ್ರೀಯರ್ಕಳ್ ಮೂವತ್ತೆರಡು ನಾಟಕಂಗಳ್ ಮೂವತ್ತೆರಡು ಕೋಟಿ ಕಸವರಮುಂ ಪಂಚರತ್ನಂಗಳೆಂಬನಿತಱಿಂಳ್ (೨೫-೧೨)

೫. ಸಾಮಂತ ಮಹಾಸಾಮಂತರ್ ಮೂವತ್ತಿರ್ಛಾಸಿರ್ವರ್ ಮಕುಟಬದ್ಧರ್ಕಳುಂ ವಿದ್ಯಾಧರರ್ಕಳುಂ (೬೭-೧೭)

೬. ಎನ್ನ ದೇಹಮ ಪೂಜಿಸಲುಂ ನಿಮಗೆನ್ನ ವಿಭವಮಂ ತೋಱಲ್ ಬಂದನೆಂದು (೮೪-೨೦)

೭. ದಯೆಯುಪಶಮಮ ಪರಿಗ್ರಹಪರಿತ್ಯಾಗಮುಮಂ (೮೨-೩)

೮. ಸಂತಾಪಮಂ ವಧೆಯುಮಮಂ (೧೨೬–೧೩)

೯. ದಾದಿಯುಂ ಸಖೀಜನಂಗಳ್ ವೆರಸು (೧೪೮–೧೨)

೧೦. ಪಲ್ಲಣಮಂ ಜದುರಸಿಕೆಯುಮಮಂ ಕೀಟುಮಂ (೧೬೨-೨೦)

ಇವುಗಳೆಲ್ಲ ವಿಕಲ್ಪ ಸಮುಚ್ಚಯಕ್ಕೆ ಉದಾಹರಣೆಗಳಾಗಿವೆ. ೧೦ನೆಯ ಶತಮಾನದ ಗ್ರಂಥಗಳಲ್ಲಿ ಇಂಥ ಪ್ರಯೋಗಗಳು ಕೆಲವು ದೊರೆಯುತ್ತವೆ. 'ಪಂಪಭಾರತ'ದಲ್ಲಿ ಕೆಲವು ಪ್ರಯೋಗಗಳಿವೆ :

೧. ಮಲೆಪರ್ ಮಂಡಳಿಕರ್ ಕಟುಂಬರದಟರ್ ವೀರರ್ಕಳುಂ ತಮ್ಮ ಬಾಟ್ದಲೆಯುಂ (೯-೧೦)

೨. ಅದಟರಳುರ್ಕೆಯುಂ ಬಲದಳುರ್ಕೆಯುಮಂ ಗೆಡೆಗೊಂಡು (೧೧–೫೦)

೩. ಅಡಿ ತೊಡೆ ಪೊರ್ಕುೞುಂ ತೆಗಲೆ ಕೈ ಕಣಕಾಲ್ ಕೊರಲೆಂಬಿವುಂ (೧೧–೧೩೬)

೪. ಕಪ್ಪುರದ ಕಂಪುಮಂ ಸೂಡಿದ ಬಾಸಿಗದ ಪೊಸಗಂಪನಿಂಬಾಗಿರೆ (೧೪–೨೫)

೫. ಮಣಿಕುಂಡಲಮುಂ ಕವಚಂ ಮಣಿಯದ ಚಾರಿತ್ರಮುಗ್ರ ತೇಜಮುಮಿಮಾ (೧೨–೯೮)

ರನ್ನನ ಗದಾಯುದ್ಧದಲ್ಲಿ

೧. ಅರೆ ಮುಗಿದಿರ್ದ ಕಣ್ಗಳುಮಲರ್ದ ಮೊಗಂ ಕಡಿವೋದ ಕೆಯ್ಯುಮಾಸುರತರಮಾಗೆ ಕರ್ಚಿದವುಡುಂ ಬೆರಸು (ಗದಾ. ೪—೫೩)

ಇಲ್ಲಿ ಮೊಗಂ ಎಂಬುದು ಸಮುಚ್ಚಯವನ್ನು ಹೊಂದಿ 'ಮೊಗಮುಂ' ಎಂದಾಗಿರಬೇಕು; 'ಅರೆ ಮುಗಿದಿರ್ದ ಕಣ್ಮ [ಲರ] ಲರ್ದ ಮೊಗಂ' (ಗದಾ. ಸಂಗ್ರುಹ ೫–೧೪) ಎಂಬ ಪಾಠವನ್ನು ಅಂಗೀಕರಿಸಿದರೆ ಆಗ 'ಕಣ್ಮಲರ್' ಎಂಬುದಕ್ಕೂ ಸಮುಚ್ಚಯ ಸಮಾವೇಶವಾಗಬೇಕು.

೨. ಮನೆ ಪೆಣ್ಣುಂ ಮಕ್ಕಳೆಂಬೀ ನುಡಿ ಪುಸಿ. (ಗದಾ. ೧೦–೧೧)

ಎಂಬ ಪ್ರಯೋಗಗಳುಂಟು. ಈ ವಿಷಯವಾಗಿ ಕೇಶಿರಾಜ "ಸಾರ ಮದಧ್ಯಾರೋಪಂ........ ಪೇಟ್ವುದಾ ಸಮುಚ್ಚಯದುಮುಗಂ" (ಸೂ. ಶಮದ. ೧೫೬) ಎಂದು ಹೇಳಿ "ಆಯುಂ ಸಿರಿ ತಾಯುಂ ತಂದೆ ಕಣ್ಣುಂ ಗತಿಯೆನಿಸಿದಪಂ ಸಿಂಹನೇನಕ್ಷಿತೀಶಂ" ಎಂಬ ಉದಾಹರಣೆಯನ್ನು ಕಾಣಿಸಿ ಎಂಬಲ್ಲಿ ಕಡೆಯ "ಸಮುಚ್ಚಯದುಮುವ್ ಅಧ್ಯಾಹಾರ್ಯಂ" ಎಂದು ವಿಧಿಸಿದ್ದಾನೆ. 'ಕವಿರಾಜಮಾರ್ಗ'ಕಾರನು ದೋಷವೆಂದು ಭಾವಿಸಿರುವ ("ದೋಷಮಿದಗ್ಗಳಂ") ಈ ಸಮುಚ್ಚಯ ಪ್ರಯೋಗವನ್ನು ಕೇಶಿರಾಜನು ದೋಷವೆಂದು ಭಾವಿಸದೆ ಆ ಸಮುಚ್ಚಯ ಪ್ರತ್ಯಯ ಅದಿಲ್ಲದಿರುವ ಎಡೆಯಲ್ಲಿ ಅಧ್ಯಾಹಾರ್ಯವೆಂದು ಎಣಿಸಿದ್ದಾನೆ.

ಇದೇ ಸಮುಚ್ಚಯದ ಪ್ರತ್ಯಯವನ್ನು ಬೇರೊಂದು ರೀತಿಯಲ್ಲಿ ಪ್ರಯೋಗಿಸಿರುವುದು 'ವಡ್ಡಾರಾಧನೆ'ಯಲ್ಲಿ ಕಾಣುತ್ತದೆ. ಅದು ಆ ಗ್ರಂಥದ ವೈಶಿಷ್ಟ್ಯವೆಂದು ಹೇಳಲೂಬಹುದು. ಆಖ್ಯಾತ ವಿಭಕ್ತಿ ಪ್ರತ್ಯಯಗಳು ನಾಮ, ಸಂಖ್ಯಾ, ಗುಣವಚನ, ಸರ್ವನಾಮ– ಈ ಶಬ್ದಗಳಿಗೆ ಸೇರಿ ನಾಮಕ್ರಿಯೆಗಳಾಗುವ ವಿಷಯ ಶಬ್ದಮಣಿದರ್ಪಣದಲ್ಲಿ (೨೩೦) ಹೇಳಿದೆಯಷ್ಟೆ. (i) ಇಂಥ ಕ್ರಿಯೆಗಳು ಸಮುಚ್ಚಯವಾಗಿ ಬಂದಾಗ ಅವುಗಳ ಅಂತ್ಯಕ್ಕೆ—ಉಂ ಪ್ರತ್ಯಯ ಸೇರುತ್ತದೆ. ಈ ಕೆಳಗಿನ ಉದಾಹರಣೆಗಳನ್ನು 'ವಡ್ಡಾರಾಧನೆ'ಯಲ್ಲಿ ನೋಡಬಹುದು :

(i) ೧. ನಾಮಮುಂ ಪಾರ್ವರೆಮುಂ ಲೋಕಕ್ಕೆಲ್ಲಮಗ್ಗಳಂ ಲೋಕಪೂಜಿತ [ರೆ] ಮುಮೆಮ್ಮಿಂ ಪೆಜಿರಿಲ್ಲ (೧೩–೧೯, ೨೦)

೨. ವೈದ್ಯಶಾಸ್ತ್ರದೊಳಾದಮಾನುಂ ಕುಶಲರೆಮುಂ ಗ್ರಂಥಾರ್ಥ ಸ್ವರೂಪದಿಂದೆಲ್ಲಾ ಕುಶಲರೆಮುಂ ಕರ್ಮಜ್ಞರೆಮುಂ (೬೯-೨೧, ೨೨)

೩. ಆಮೆಲ್ಲಂ ಕೂಸುಗಳೆಮುಂ ನವಯೌವನರೆಮುಂ (೧೦೦-೧)

೪. ಮತ್ತಮಿರ್ವೆಮುಂ ಸಮಾನವಯಸರೇ(೧೨೮-೧೯) ಇತ್ಯಾದಿ.

ಮೇಲಿನ ನಾಲ್ಕು ಪ್ರಯೋಗಗಳಲ್ಲಿ ನಾಮಪದ, ಅಖ್ಯಾತ ಪ್ರತ್ಯಯ ಸಮುಚ್ಚಯ ಉಂ— ಈ ವಿನ್ಯಾಸವಿರುವುದು ವ್ಯಕ್ತವಾಗಿದೆ. ಮೂರನೆಯ ಪ್ರಯೋಗವನ್ನು ಹೊಸಗನ್ನಡಕ್ಕೆ "ನಾವೆಲ್ಲ ಕೂಸುಗಳಾಗಿದ್ದೇವೆ ಮತ್ತು ನವಯೌವನರಾಗಿದ್ದೇವೆ ಮತ್ತು'' ಎಂದು ತಿರುಗಿಸಬಹುದು. ಹೀಗೆಯೇ ಉಳಿದ ಪ್ರಯೋಗಗಳನ್ನೂ ಮಾಡಬಹುದು,

(ii) ಕ್ರಿಯಾಪದಗಳು ಸಮುಚ್ಚಾಯಕವಾಗಿ ಬಂದಾಗ ಅವುಗಳ ಅಂತ್ಯಕ್ಕೆ—ಉಂ ಸೇರುತ್ತದೆ :

೧. ನೋಟ್ಟಿಪನುಂಬರೆಪೆನುಂ ಭಾವಿಸುತ್ತಿರ್ಪೆನಪ್ಪುದಱಿಂ(೪೯-೧೬)

೨. ಅಂ ಸೋಲ್ತೆನುಂ ಸತ್ತೆನುಂ (೧೨೪೯)

(i) ಮತ್ತು (ii) ಸಮ್ಮಿಶ್ರವಾಗಿಯೂ ಬರಬಹುದು.

೧. ಕುಲಕ್ರಮಾಗತರೆಮುಂ ನಿಮ್ಮ ಪ್ರಸಾದದಿಂ ಬಾೞ್ವೆಮುಂ (೧೮೫-೨೧)

೨. ಪಂಚಮಹಾಪಾತಕರೆಮುಂ ಪೊಲ್ಲಕೆಯ್ದೆಮುಂ ಭಟ್ಟಾರರಂ ಕೊಂದೆಮುಮವರ್ ತಪದ ಮಾಹಾತ್ಮ್ಯದಿಂದಂಬರ್ದುಂಕಿದರ್ (೯೯-೧೪)

ಈ ತೆರನಾಗಿ ಸಮುಚ್ಚಯವನ್ನು ಬಳಸಿರುವುದಕ್ಕೆ ನಿದರ್ಶನಗಳು ೧೦ ನೆಯ ಶತಮಾನದ ಕನ್ನಡ ಗ್ರಂಥಗಳಲ್ಲಿ ಹೆಚ್ಚಾಗಿ ದೊರೆಯುತ್ತಿಲ್ಲ. "ಕಾವ್ಯಾವಲೋಕನ"ದಲ್ಲಿ ಉದ್ಧೃತವಾಗಿರುವ ಪಂಪಭಾರತದ ಪದ್ಯದಲ್ಲಿ

(೧೨–೩೬) "ತಂದೆಯ ಶೋಕಮನಿರ್ವೆಮುಂ ಮುನಿವರಂ ತಪೆ ಕೊಂದೊಡ ನೀಗುವಂ" "ಎಂಬ ಪಾಠವಿದೆ. ಇದರಂತೆ ಇರ್ವೆಂ + ಉಂ ಎಂದು, ನಾವು ಇಬ್ಬರಾಗಿದ್ದೇವೆ ಮತ್ತು'', ಎಂಧು ಒಟ್ಟಿನಲ್ಲಿ ನಾವಿಬ್ಬರೂ ಎಂದು ಅರ್ಥಮಾಡಬೇಕಾಗಿದೆ. 'ಇರ್ವರುಂ "ಎಂಬ ಪಾಠಾಂತರದಲ್ಲಿ ವಿಶೇಷವೇನೂ ಇಲ್ಲ 'ಇರ್ವೆಮುಂ' ಎಂಬುದು ಕವಿಪಾಠವೆಂದು ಹೇಳಬೇಕಾಗಿದೆ. ಚಾವುಂಡರಾಯ ಪುರಾಣದಲ್ಲಿ ಇರ್ವೆಮುಂ ಎಂಬುದಕ್ಕೆ ಎರಡು ಪ್ರಯೋಗಗಳು ನನ್ನ ದೃಷ್ಟಿಗೆ ಬಿದ್ದಿವೆ :

೧. ಬಾಲಿಗಧಿರಾಜ ಪಟ್ಟಮುಂ ಎನಗೆ ಯುವರಾಜ ಪಟ್ಟಮುಮಂ ಕೊಟ್ಟೊಡಂತಿರ್ವೆಮುಮಿರ್ಪಿನಸಮೆಮ್ಮಣ್ಣ ನೆನ್ನಂ ನಾಡಿಂದಟ್ಟಿ ಕಳೆಯೆ.

—(ಸೀತೆಯ ಕಥೆಯಲ್ಲಿ)

2. ಧಾತಿಕೀಷಂಡದೊಳಾಮಿರ್ವೆಮುಂ ತಪಂಗೆಯ್ದು

—(ನಮಿಜಿನನ ಕಥೆಯಲ್ಲಿ)

ಈ ನಾಲ್ಕು ಆಂತರಿಕ ಆಧಾರಗಳನ್ನು ಸಮಷ್ಟಿದೃಷ್ಟಿಯಿಂದ ನೋಡಿದರ "ವಡ್ಡಾರಾಧನೆ ಪಂಪ ಭಾರತಕ್ಕಿಂತ (ಕ್ರಿ.ಶ. ೯೪೧) ಹಿಂದಿನ ರಚನೆಯಾಗಿರಬೇಕೆಂಬ ಭಾವನೆಯುಂಟಾಗುತ್ತದೆ. ಇದು ರಚನೆಯಾದ ಕಾಲದ ಅವಧಿ ೮೯೮ರಿಂದ ೯೪೧ ಎಂದಾಗುತ್ತದೆ; ಸುಮಾರು ಕ್ರಿ. ಶ. ೯೨೦ ಎಂಬ ಕಾಲವನ್ನು ಈ ಗ್ರಂಥಕ್ಕೆ ಕೊಡಬಹುದಾಗಿದೆ. "ಆದೌ ಜನ್ಮ ಜರಾರೋಗ" ಎಂದು ಆರಂಭವಾಗುವ ಪದ್ಯ ಗುಣಭದ್ರನದಲ್ಲವೆಂದೂ, ಅವನಿಗಿಂತ ಹಿಂದಿನ ಕಾಲದ್ದೆಂದೂ ಸ್ಥಾಪಿಸಬಹುದಾದರೆ 'ವಡ್ಡಾರಾಧನೆ' ಕವಿರಾಜ ಮಾರ್ಗಕ್ಕೆ ಸಮಕಾಲಿಕವಾದ (ಕ್ರಿ.ಶ.ಸು. ೮೫೦) ಕೃತಿಯೆಂದು ಹೇಳುವುದು ಸಂಗತವಾಗುತ್ತದೆ.

## ದೇಶ

'ವಡ್ಡಾರಾಧನೆ'ಯಲ್ಲಿ ಹೇಳಿದ ಕನ್ನಡದ ಶಿವಕೋಟಿ ಕನ್ನಡ ನಾಡಿನ ಯಾವ ಪ್ರದೇಶಕ್ಕೆ ಸೇರಿದ್ದಿರಬಹುದು ? ಈ ಪ್ರಶ್ನೆಗೆ ಉತ್ತರವನ್ನು ಹೇಳುವುದು ಸಾಧ್ಯವಿಲ್ಲವಾದರೂ ಒಂದು ಊಹೆಗೆ ಅವಕಾಶವಿರುವಂತೆ ತೋರುತ್ತದೆ. ಈ ಗ್ರಂಥದಲ್ಲಿ ಬರುವ ಕಾರ್ತಿಕ ಋಷಿಯ ಕಥೆಯಲ್ಲಿ ಇದಕ್ಕೆ ಆಧಾರವಿರುವಂತಿದೆ :

೧. ಕೋಗಳಿಯನಾಳ್ವ ಕ್ರೌಂಚನೆಂಬರಸಂಗೆ ಕೊಟ್ಟರ್

೨. ತೆಂಕನಾಡ ಕಿಷ್ಕಿಂಧವೆಂಬ ಪರ್ವತಮನೆಯ್ದಿಯದಱ ಮೇಗೆ ರಾತ್ರಿ ಪ್ರತಿಮಾಯೋಗಂ ಗೆಯ್ದೊರಾ........ಅಲ್ಲಿಂ ತೊಡಗಿ ದಕ್ಷಿಣಾಪಥದೊಳದು ತೀರ್ಥಮಾಯ್ತು.

೩. ಕೋಗಳಿಯನೆಯ್ದಿಯಲ್ಲಿಯ ಬಸದಿಯೊಳ್ ಪಂಥಾತಿಚಾರ ನಿಯಮಂ ಗೆಯ್ದು

೪. ದೇವತೆ ನವಿಲರೂಪಿನಿಂದೆತ್ತಿಕೊಂಡು ಬೆನ್ನೊಳಿಟ್ಟು ಕೋಗಳಿಯ ಮೂಡಣದೆಸೆಯ ಪರ್ವತದ ಕೊಳದ ತಡಿಯೊಳ್ ಇರಿಸಿ ಪೋದೊಡೆ ಮುಡಿಪಿ

೫. ಅಂದಿಂದಿತ್ತ ಬಾದುಬ್ಬೆಯ ಪರ್ವಮುಂ ಪಗರಣದಾಟ ಪಾಟಮುಮಾದುವು

೬. ಸ್ವಾಮಿ ಕಾರ್ತಿಕ ಋಷಿಯರ್ ಮುಡಿಪಿದಲ್ಲಿಯವರ ತಂಗೆಯಪ್ಪ ವೀರಶ್ರೀ ಬಸದಿಯುಂ ಮಾಡಿದೊಡೆ........

ಮೇಲಿನ ಉದ್ಧೃತ ವಾಕ್ಯಗಳಿಂದ ತೆಂಕನಾಡಿನ ಕಿಷ್ಕಿಂಧವೆಂಬ ಬೆಟ್ಟದ ಬಳಿ ಕೋಗಳಿ ಎಂಬ ಊರು ಇದ್ದಿತು; ಅಲ್ಲಿ ಬಸದಿಗಳು ಎಂದರೆ ಜಿನ

ಮಂದಿರಗಳು ಇದ್ದುವು; ಅದಕ್ಕೆ ರಾಜ ಕ್ರೌಂಚ; ಆ ಊರಿನ ಪೂರ್ವದ ಪರ್ವತದಲ್ಲಿ ಕಾರ್ತಿಕೇಯ ಋಷಿ ಮುಡಿಪಿದನು ಎಂದರೆ ಸತ್ತನು. ಆ ಎಡೆಯಲ್ಲಿ ಅವನ ತಂಗಿ ವೀರಶ್ರೀ ಒಂದು ಬಸದಿಯನ್ನು ಕಟ್ಟಿಸಿದಳು; ಬಾದುಬ್ಬೆಯ ಹಬ್ಬ ಅಂದಿನಿಂದ ಆರಂಭವಾಯಿತು—ಎಂಬ ಅಂಶಗಳು ತಿಳಿದುಬರುತ್ತವೆ. ಇವುಗಳಲ್ಲಿ ಕ್ರೌಂಚರಾಜನೂ ಅವನ ಹೆಂಡತಿ ವೀರಶ್ರೀಯೂ ಕಥೆಯ ಪಾತ್ರಗಳಾಗಿರುವುದರಿಂದ ಅವರ ವಿಚಾರ ಮಾಡಬೇಕಾಗಿಲ್ಲ. ಉಳಿದ ಅಂಶಗಳಲ್ಲಿ ಕೋಗಳಿ ಎಂಬ ಊರು ಪ್ರಮುಖವಾಗಿದೆ. ಈ ಹೆಸರು ಹರಿಷೇಣನ ಬೃಹತ್ಕಥಾಕೋಶದಲ್ಲಿ ಬರುವುದಿಲ್ಲ; 'ವಡ್ಡಾರಾಧನೆ'ಯಲ್ಲಿರುವ ಈ ಕಥೆಯ ಆರಂಭದ ಗಾಹೆಯಲ್ಲಿ 'ರೋಹೇದಯಮಿಹ' ಎಂದಿದೆ. ವಡ್ಡಾರಾಧನೆಯಲ್ಲಿ ಈ ಹೆಸರು ಕಥಾಭಾಗದಲ್ಲಿ ಎಲ್ಲಿಯೂ ಇಲ್ಲ; ಅಲ್ಲೆಲ್ಲ ಕೋಗಳಿ ಎಂದೇ ಇದೆ. ಇದಕ್ಕೆ ಏನೋ ವಿಶಿಷ್ಟವಾದ ಕಾರಣವಿರಬಹುದು.

ಈಗಿನ ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ, ಹೂವಿನ ಹಡಗಲಿ–ಎಂಬ ತಾಲ್ಲೂಕುಗಳನ್ನು ಒಳಗೊಂಡಿದ್ದ ಪ್ರದೇಶಕ್ಕೆ ಹಿಂದಿನ ಕಾಲಗಳಲ್ಲಿ ಕೋಗಳಿ ೫೦೦ ಎಂಬ ಹೆಸರಿದ್ದಿತು; ಇದಕ್ಕೆ ಎಂದರೆ ಕೋಗಳಿನಾಡಿಗೆ ಮುಖ್ಯ ನಗರ ಕೋಗಳಿ. ಈ ನಾಡಿನ ವರ್ಣನೆ ಹಲವು ಶಾಸನಗಳಲ್ಲಿ ಕಂಡುಬರುತ್ತದೆ. ಉದಾಹರಣೆಗೆ ಒಂದು ಶಾಸನದಲ್ಲಿ: 38

ನಾಡುಗಳೊಳಗೆಲ್ಲ ಗಾಡಿವೆತ್ತಸಮುದ
ನಾಡುಗಳರಸನತಿಚೆಲ್ವ ಕೋಗಳಿ ।
ನಾಡು ನೋಡಲ್ಕೆ ಸೊಗಯಿಕ್ಕುಂ ॥

ಆ ನಾಡೊಳೆಸೆವುದು ನಾನಾವಿದ್ವಜ್ಜನ
ಸ್ಥಾನಂ ನಿಗ್ಗುಂದಮೆನಿಪಗ್ರಹಾರವ ।
ತ್ಯಾನಂದಕಾರಿ ಜಗಕೆಲ್ಲಂ ॥

ಎಂಬೆರಡು ತ್ರಿಪದಿಗಳಿವೆ. ಇದರಿಂದ ಕೋಗಳಿನಾಡು ಇತರ ನಾಡುಗಳಿ

---

38 SII, IX, Part I, No. 141 : A.Dr 1079

ಗಿಂತ ಅಧಿಕ ರಮಣೀಯವಾಗಿದ್ದಿತ್ತೆಂದೂ, ಅವರಲ್ಲಿ ನಿರ್ಗುಂದವೇ ಮುಂತಾದ ಅಗ್ರಹಾರಗಳಿದ್ದುವೆಂದೂ ತಿಳಿದುಬರುತ್ತದೆ. ಈ ನಾಡು ಚಾಳುಕ್ಯ ರಾಷ್ಟ್ರಕೂಟರ ಕಾಲಗಳಲ್ಲಿ ತುಂಬ ಪ್ರಸಿದ್ಧವಾಗಿತ್ತು. ಇದನ್ನು ಕೋಗಳಿ ೫೦೦ ಎಂದೇ ಕರೆಯುವ ವಾಡಿಕೆ ಇದ್ದಿತು.[39] ಇದಕ್ಕೆ ಮುಖ್ಯ ನಗರವಾಗಿದ್ದ ಕೋಗಳಿ ಈಗ ಒಂದು ಹಳ್ಳಿಯಾಗಿದೆ. ಇಲ್ಲಿ ಅನೇಕ ಪ್ರಾಚೀನ ಅವಶೇಷಗಳಿವೆ; ಖಿಲವಾಗಿರುವ ಜೈನ ಬಸದಿಗಳೂ ಅಲ್ಲಲ್ಲಿ ಮುರಿದುಬಿದ್ದಿರುವ ದೇವತಾಮೂರ್ತಿಗಳೂ ಇಲ್ಲಿ ಇಂದಿಗೂ ಹೇರಳವಾಗಿವೆ; ಈ ಹಳ್ಳಿಯಲ್ಲಿ ಅನೇಕ ಶಿಲಾಶಾಸನಗಳೂ ದೊರೆತಿವೆ.[40] ಶಕ. ೯೭೭ ರಲ್ಲಿ ಲಿಖಿತವಾದ ಒಂದು ಶಾಸನದಲ್ಲಿ[41] ಇಂದ್ರಕೀರ್ತಿಮುನೀಂದ್ರನು ಜೈನಬಸದಿಯ ಮಾಣಿಗಳ ವಿದ್ಯಾಭ್ಯಾಸಕ್ಕಾಗಿ ಒಂದು ದತ್ತಿಯನ್ನು ಬಿಟ್ಟಂತೆ ಹೇಳಿದೆ; ಈ ಜೈನ ಬಸದಿಯನ್ನು ಮೊದಲು ಕಟ್ಟಿಸಿದವನು ಗಂಗರಾಜನಾದ ದುರ್ವಿನೀತನೆಂದು ಆ ಶಾಸನದ ಈ ಕೆಳಗಿನ ಪದ್ಯ ಹೇಳುತ್ತದೆ :

(ಪಂಕ್ತಿ ೧೫–೧೬)

ಇದು ದುರ್ವಿನೀತನಿಂದಂ
ಮೊದಲೊಳ್ ಬಸದಿಯಿನ ನಾಡ ಮತ್ತರಘಳೆಯಂ ।
ವಿದಿತಯಶರಿನ್ದ್ರ ಕೀರ್ತಿಗ
ಳುದಿತೋದಿತವಾಗೆ ಮಾಡಿದರ್ ಕೋಗಳಿಯೊಳ್ ॥

ಗಂಗರಾಜ ದುರ್ವಿನೀತನ ಕಾಲದಿಂದ ಹಿಡಿದು (ಕ್ರಿ.ಶ.೫೫೫-೬೦೫)[42] ಹಲವು ಶತಮಾನಗಳವರೆಗೆ, ಬಹುಶಃ ಹೊಯ್ಸಳ ವಂಶದ ಅಂತ್ಯದವರೆಗೆ ಉಚ್ಛ್ರಾ

39 Inscriptions of the Madras Presidency Vol. I Bellary Inscriptions, Rangacharya. Nos, 195, 215, 234, 245,265, 267, 273 etc.
40 See Ibid. Nos.189-193, 195-196.
41 SII. IX-i. No. 117.
42 ದುರ್ವಿನೀತನ ಕಾಲದ ವಿಚಾರವಾಗಿ ಭಿನ್ನಾಭಿಪ್ರಾಯಗಳಿವೆ. ರೈಸ್. ೪೮೨-೫೧೭ ಎನ್ನುತ್ತಾರೆ. ರುಬ್ರಾಯಿಲ್ ೬೦೫-೬೫೦. ರಾ. ನರಸಿಂಹಾಚಾರ್ಯ, ೬೦೫-೬೫೦.

ಯಸ್ಥಿತಿಯಲ್ಲಿದ್ದು ಈ ಊರು ಪುಣ್ಯಕ್ಷೇತ್ರವಾಗಿತ್ತು; ಜೈನಧರ್ಮಕ್ಕೆ ಕೇಂದ್ರವಾಗಿತ್ತು, ಒಂದು ಶಾಸನದಲ್ಲಿ[43] ಇದನ್ನು ಕೋಗಳಿಯ ತೀರ್ಥವೆಂದು ಕರೆದಿದೆ. ಕ್ರಿ.ಶ. ೯೯೨ರ ಇನ್ನೊಂದು ಶಾಸನದಲ್ಲಿ[44] ಕೋಗಳಿಯ ಸ್ಥಾನಾಧಿಪತಿಗಳಾದ ಗಣಧರದೇವಭಟ್ಟಾರಕನ ಹೆಸರನ್ನು ಹೇಳಿದೆ. ಕ್ರಿ.ಶ. ೯೯೭ ರ ಇನ್ನೊಂದು ಶಾಸನದಲ್ಲಿ[45] ಕೋಗಳಿಯಯ್ನೂಱು ನಾಡಿನ ಉಲ್ಲೇಖವಿದೆ. ರಾಷ್ಟ್ರಕೂಟ ನಿತ್ಯವರ್ಷದೇವನ ಕ್ರಿ.ಶ. ೯೨೨ರ ಒಂದು ಶಾಸನದಲ್ಲಿ[46] ಮಾಸಿಯವಾಡ ನಾಲ್ವತ್ತರೊಡನೆ ಕೋಗಟಿಿಯಯ್ನೂರನ್ನು ಹೇಳಿದೆ. ಕೋಗಳಿ 'ನಾಲ್ಕುಂ ಯುಗದ ಪೊಟಿಲ್' ಎಂದು ಹಿಂದೆಯೇ ಹೇಳಿದ ಕ್ರಿ.ಶ. ೯೯೭ರ ಶಾಸನದಲ್ಲಿ ಹೊಗಳಿದೆ. ಈ ಪಟ್ಟಣ ಮುಳಗುಂದ, ಕೊಪಣ, ಶ್ರವಣಬೆಳಗೊಳ ಮುಂತಾದುವುಗಳಂತೆ ಪ್ರಸಿದ್ಧವೂ, ಪವಿತ್ರವೂ ಆದ ಕ್ಷೇತ್ರವಾಗಿತ್ತು. ಇದರ ಹೆಸರನ್ನು 'ವಡ್ಡಾರಾಧನೆ'ಯಲ್ಲಿ ಹೇಳುವುದಕ್ಕೆ ಕಾರಣವೇನು? ಹರಿಷೇಣನು (೯೩೧ ಕಾಲ) ಇದನ್ನು ಹೇಳಿಲ್ಲ. ಆದ್ದರಿಂದ ಕೋಗಟಿಿಯ ಹೆಸರನ್ನು ಇಲ್ಲಿ ತರುವುದಕ್ಕೆ ವಿಶೇಷವಾದ ಏನೋ ಕಾರಣವಿರಬೇಕು. ಬಹುಶಃ 'ವಡ್ಡಾರಾಧನೆ'ಯ ಶಿವಕೋಟಿ ಈಊರಿಗೆ ಅಥವಾ ಈ ಪ್ರದೇಶಕ್ಕೆ ಸೇರಿದವನಾಗಿರಬೇಕೆಂದೂ. ತನ್ನ ಊರ ಹೆಸರನ್ನು ಕಥೆಯಲ್ಲಿ ಹೀಗೆ ಸೇರಿಸಿದ್ದಾನೆಂದೂ ಹೇಳಬಹುದಾಗಿದೆ.

ಈ ಕಥೆಯಲ್ಲಿ ಬರುವ ಸ್ವಾಮಿ ಕಾರ್ತಿಕ ಋಷಿಗೂ ಬಳ್ಳಾರಿ ಜಿಲ್ಲೆಗೂ ಸಂಬಂಧವಿರಬಹುದು. ಈ ಋಷಿ ರಾತ್ರಿ ಪ್ರತಿಮಾಯೋಗದಲ್ಲಿ ನಿಂತದ್ದು ಕಿಷ್ಕಿಂಧವೆಂಬ ಪರ್ವತದ ಮೇಲೆ; ಅವನ ಮೇಲೆ ರಾತ್ರಿಯೆಲ್ಲ ಸುರಿದ ಮಳೆಯ ನೀರು, ಮಡುವಾಗಿ 'ಸರ್ವೌಷಧ'ವೆಂಬ ತೀರ್ಥವಾದದ್ದು ಆ ಪರ್ವತದಲ್ಲಿ. ಶಕ್ತಿಯೆಂಬ ಆಯುಧದಿಂದ ಈ ಋಷಿ ಹತನಾದದ್ದು ಕೋಗಳಿಯಲ್ಲಿ; ಅಲ್ಲಿಂದ ನವಿಲ ರೂಪಿನ ದೇವತೆ ಅವನನ್ನು ಎತ್ತಿಕೊಂಡು ಬರು

43 SII, IX-I, No. 368, 1173-1220
44 Ibid. no. 77.; Jainism in Karnataka, P. 149
45 Bombay Karantak Inscriptions, No. 22
46 SII, IX-1,57.

ತ್ತದೆ; ಕೋಗಳಿಯ ಪೂರ್ವಕ್ಕಿರುವ ಬೆಟ್ಟದಲ್ಲಿನ ಕೊಳದ ಬಳಿ ಇವನನ್ನು ಆ ದೇವತೆ ಇರಿಸುತ್ತದೆ. ಋಷಿ ಮಡಿದದ್ದು ಅಲ್ಲಿ; ಅವನಿಗೆ ಒಂದು ಬಸದಿಯನ್ನು ಮಾಡಿದ್ದು ಅಲ್ಲಿ; ಅದಕ್ಕೆ ಸ್ವಾಮಿ ಎಂಬ ತೀರ್ಥನಾಮವಾಯಿತು. ಬಳ್ಳಾರಿ ಜಿಲ್ಲೆಯ ಸೊಂಡೂರಿನ ಬಳಿ ಬೆಟ್ಟಗಳಲ್ಲಿ ಈಗ ಕುಮಾರ ಸ್ವಾಮಿಯ ದೇವಾಲಯವಿರುವುದು ಪ್ರಸಿದ್ಧವಾಗಿದೆ. ಚಂಗಗಾವುಂಡನೆಂಬಾತ ಸೂಜಿಂಗಲ್ಲು ಎಂಬ ಪ್ರದೇಶವನ್ನು ಸತ್ಯರಾಶಿಭಟ್ಟಾರನಿಗೆ ಮಠದ ಅನ್ನಸತ್ರಕ್ಕಾಗಿ ದಾನಮಾಡಿದಂತೆಯೂ, ಆ ದಾನವನ್ನು ಕೋಳಗಲ್ಲಿನಲ್ಲಿ ಪ್ರಭುವಾಗಿದ್ದ ಗಜಧರಯ್ಯನು, 'ಸ್ವಾಮಿ ಕಾರ್ತಿಕೇಯ ತಪೋವನ'ದ ಅಧಿಕಾರಿಯು ಸ್ಥಿರೀಕರಿಸಿದಂತೆಯೂ ರಾಷ್ಟ್ರಕೂಟ IIIನೆಯ ಕೃಷ್ಣನ ಕಾಲದ ಒಂದು ಶಾಸನದಲ್ಲಿ (ಕಾಲ–ಕ್ರಿ. ಶ. ೯೬೪) ಉಕ್ತವಾಗಿದೆ,[47] ಇನ್ನೊಂದು ಶಾಸನದಿಂದ[48] ಕುಮಾರಸ್ವಾಮಿ ದೇವಾಲಯವು ಶಕ ೬೪೧ (ಕ್ರಿ.ಶ.೭೧೯) ಸ್ಥಾಪಿತವಾದಂತೆ ತಿಳಿದುಬರುತ್ತದೆ. ಆದ್ದರಿಂದ ಆ ದೇವಾಲಯ ಸಾಕಷ್ಟು ಹಳೆಯದಾದ ರಚನೆಯೆಂದು ನಿರ್ಧರಿತವಾಗಿದೆ. ಕಥೆಯಲ್ಲಿನ ಸ್ವಾಮಿ ಕಾರ್ತಿಕೇಯ ಯತಿ ಕುಮಾರಸ್ವಾಮಿಯೆಂಬ ದೇವರಾಗಿಯೂ, ಆ ಬಸದಿಯೇ ಅನ್ಯದೇವಾಲಯವಾಗಿಯೂ ಪರಿವರ್ತನೆಗೊಂಡಿರಬಹುದು.[49] ಈ ಭೂ ಸನ್ನಿವೇಶವೆಲ್ಲ ಕೋಗಳಿಯ ಪೂರ್ವಕ್ಕೆ ಇರುವ ಪರ್ವತಪ್ರಾಂತವಾಗಿದೆ. ಈ ಎಲ್ಲ ಕಾರಣಗಳಿಂದ ವಡ್ಡಾರಾಧನೆಯ ಕರ್ತೃವಾದ ಶಿವಕೋಟಿ ಕೋಗಳಿ ನಾಡಿಗೆ ಎಂದರೆ ಈಗಿನ ಬಳ್ಳಾರಿ ಜಿಲ್ಲೆಯ ಪಶ್ಚಿಮಭಾಗಕ್ಕೆ ಸೇರಿದವನೆಂದು ಹೇಳಬಹುದು. ಕಾರ್ತಿಕೇಯ ಋಷಿಯ ಮರಣವಾದ ಸ್ವಲ್ಪ ಕಾಲಕ್ಕೆ ಬಾದುಬ್ಬೆಯೆಂಬ ಹಬ್ಬ ರೂಢಿಗೆ ಬಂದಿತೆಂದು ಕಥೆಯಿಂದ ತಿಳಿದುಬರುವ ಅಂಶವಾಗಿದೆಯಷ್ಟೆ. ಈ ಹಬ್ಬ ಉಕ್ತವಾಗಿರುವ ಅತ್ಯಂತ ಪ್ರಾಚೀನ ಉಲ್ಲೇಖ ನನಗೆ

---

47 Inscriptions of the Madras Presidency Vol I. No. 47; History of the Dekkan, (Bhandarkar) P. 54-55.

48 ಅದೇ-480, 481, Sewell's Antiquities, I, 108.

49 ಈ ವಿಷಯವಾಗಿ ಇನ್ನೂ ಹೆಚ್ಚಿನ ಸಂಶೋಧನೆಯ ಅವಶ್ಯಕತೆ ಇದೆ.

ಕಂಡ ಮಟ್ಟಿಗೆ ಖಾಜಿಪೇಟೆಯ ಶಿಲಾಲಿಪಿ[50] ಇದರ ಕಾಲ ಕ್ರಿ. ಶ. ೮೭೨; ಇದರ ೨೪ನೆಯ ಪಂಕ್ತಿಯಲ್ಲಿ "ಬಾಡುಬ್ಬೆಯ ಪರ್ವದಂದು" ಎಂಬ ಮಾತುಗಳಿವೆ. ಈ ಎಲ್ಲ ನೆನಪುಗಳು ಜನತೆಯ ಸ್ಮೃತಿಪಥದಲ್ಲಿ ಇನ್ನೂ ಜೀವಂತವಾಗಿದ್ದ ಕಾಲದಲ್ಲಿ 'ವಡ್ಡಾರಾಧನೆ' ರಚಿತವಾಗಿರಬಹುದು.

50 Annual Report of Archaeology, Hyderabad, 1936.

# ರಪಣ> ರವಣ — ಎಂಬುದರ ಅರ್ಥ ಮತ್ತು ನಿಷ್ಪತ್ತಿ

"ತನಗೆ ಸಾವಂ ಸಮಕಟ್ಟುವಂತೆ" ದುರ್ಯೋಧನನು ಶಕುನಿಯಿಂದ ಹೂಡಿಸಿದ ಪಗಡೆಯ ಜೂಜಿನಲ್ಲಿ ಅದರ ಸೊಕ್ಕು ತಲೆಗೇರಿದಾಗ ಯುಧಿಷ್ಠಿರನ "ಸಾಲದೆ ಜೂಜು ನಿಮ್ಮೊಗಿದೇಂಗಳ ಮಾಣಿಸಿಂ" ಎಂದು ಹೇಳಿದ ಹಿರಿಯರ ಮಾತನ್ನೂ ಕೇಳದೆ ಆನೆಗಳನ್ನೂ, ಅನರ್ಘ್ಯ ವಸ್ತು ವಾಹನಾದಿಗಳನ್ನೂ ಒಡ್ಡವಾಗಿಟ್ಟು ಸೋತಾಗ ದುರ್ಯೋಧನಾದಿಗಳು "ರಪಣಮಂ ತೋಱುಯುಮೊತ್ತೆಯನುಗ್ಗಡಿಸಿಯುಮಾಡಿಂ"ಎಂದು ಉತ್ತೇಜಿಸಿದರೆಂದು ಪಂಪನ ವರ್ಣನೆ (ಪಂಪ ಭಾರತ, ೭ – ೩೧). ಅದನ್ನು ಕೇಳಿ ಧರ್ಮರಾಜನು"ಪೆಱತೇನುಮುಪಾಯಮಿಲ್ಲದೆಮ್ಮಾಳ್ವನೆಲನೊತ್ತೆ"ಯೆಂದು ಹೇಳಿದನಂತೆ. ಇಲ್ಲಿ ಬರುವ 'ರಪಣ'ವೆಂಬುದಕ್ಕೆ 'ರವಣ'ವೆಂಬ ಒಂದು ಪಾಠವೂ ಇದೆ. ಇದರ ಅರ್ಥವನ್ನು ಪಂಪಭಾರತದ 'ಕ್ಲಿಷ್ಟಪದಗಳ ನಿಘಂಟು'ವಿನಲ್ಲಿ ಸೂಚಿಸದೆ ಪ್ರಶ್ನೆಚಿಹ್ನೆಯನ್ನು ಹಾಕಿದೆ. ಧರ್ಮರಾಜನು ಎಲ್ಲವನ್ನೂ ಸೋತು ಏನನ್ನೂ ಜೂಜಿಗೆ ಒಡ್ಡಲು ಅಸಮರ್ಥನಾಗಿ ತನ್ನ ರಾಜ್ಯವನ್ನು ಒತ್ತೆಯಿಡಬೇಕಾಗಿ ಬಂದಿತೆಂಬ ಸಂದರ್ಭದಲ್ಲಿ 'ರಪಣ' ಶಬ್ದಕ್ಕೆ ಏನೋ ಒಂದು ವಿಶಿಷ್ಟಾರ್ಥವಿರುವಂತೆ ಬೋ:ಧೆಯಾಗುತ್ತದೆ.

ಕಿಟ್ಟೆಲ್ ಅವರು ತಮ್ಮ ಕೋಶದಲ್ಲಿ ಈ ಶಬ್ದವನ್ನು ಕಾಣಿಸಿ ಕುಮಾರ ವ್ಯಾಸ ಭಾರತದಿಂದ ಮೂರು ಪ್ರಯೋಗಗಳ ಸೂಚನೆಯನ್ನೂ ಮಾಡಿ "A kind of weapon" ಎಂದು ಅದಕ್ಕೆ ಅರ್ಥವಿಸಿದ್ದಾರೆ. ಆ ಪ್ರಯೋಗಗಳನ್ನೂ ಅವುಗಳ ಸಂದರ್ಭಗಳನ್ನೂ ಪರೀಕ್ಷಿಸಿ ನೋಡುವುದು ಅವಶ್ಯಕ. "ಮಹಾಸುರನ ಬಾಣಸದ ಬೀಯಕೆ ರಪಣವುಂಟೆಮಗೆ" (Bh. ೧, ೧೦೧೪) ಎಂಬುದು ಒಂದನೆಯ ಪ್ರಯೋಗ. ಬಕವಧೆಯ ಪ್ರಸಂಗದಲ್ಲಿ ದಿನದಿನದ ಸರದಿ ತನಗೆ ಬಂದಾಗ ತನ್ನ ಮನೆಯಲ್ಲಿ ಯಾರನ್ನು ಅಸುರನಿಗೆ ಆಹಾರವಾಗಿ ಕಳಿಸಬೇಕೆಂಬ ಚಿಂತೆಯಿಂದ ವ್ಯಾಕುಲಿತನಾದ ವಿಪ್ರನಿಗೆ ಕುಂತಿ ಹೇಳಿದ ಮಾತಿದು. ಮುಂದಕ್ಕೆ "ಏಸು ಕಂಡುಗದಕ್ಕಿಯೋಗರವೈಸ ನೀನಳವಡಿಸು ಮೇಲುಂಟೇಸು ಸಾಧನವನಿತುವನು ತೆಗೆಸೆಂದಳಾ ಕುಂತಿ" ಒಂದಿವೆ, ಇಲ್ಲಿ ಅಸುರನಿಗೆ ಎಷ್ಟು ಖಂಡುಗ ಆಕ್ಕಿಯ ಅನ್ನ ಬೇಕೋ ಅಷ್ಟನ್ನು ನೀನು ಸಿದ್ಧಪಡಿಸು ಎಂಬ ತಾತ್ಪರ್ಯಕ್ಕಿಂತ ನಿನ್ನಲ್ಲಿ ಎಷ್ಟು ಖಂಡುಗ ಅಕ್ಕಿಯಿದೆಯೋ ಅಷ್ಟು ಅನ್ನವನ್ನು ಸಿದ್ಧಗೊಳಿಸು ಎಂದು ಗ್ರಹಿಸುವುದು ಲೇಸು. ನಿನ್ನಲ್ಲಿ ಎಷ್ಟು 'ಸಾಧನ' ವಿದೆಯೋ ಅಷ್ಟನ್ನು ತೆಗೆಸು ಎಂಬ ಮುಂದಿನ ಅಭಿಪ್ರಾಯ ಇದಕ್ಕೆ ಪುಷ್ಟಿಕೊಡುತ್ತದೆ. ಸಾಲದೆ ಬಂದದ್ದಕ್ಕೆ ಕುಂತಿಯ ಬಳಿ 'ಸಾಧನ' ವಿದೆಯೆಂದು ತಿಳಿಯುತ್ತದೆ. ಆದ್ದರಿಂದ ಈ ಪ್ರಯೋಗದಲ್ಲಿನ 'ರಪಣ'ಕ್ಕೆ ಸಾಧನ ಸಾಮುಗ್ರಿ ಎಂಬರ್ಥವಿರುವಂತೆ ಹೇಳಬಹುದು. ಒಂದು ಬಗೆಯ ಆಯುಧವೆಂಬ ಕಿಟ್ಟೆಲ್ಲರ ಅರ್ಥಕ್ಕೆ ಇಲ್ಲಿ ಅವಕಾಶವಿಲ್ಲ. ಎರಡನೆಯ ಪ್ರಯೋಗ "ಭಟರ ತಲೆಗಳು ಬೀಯವಾದುವು ಮತ್ತು ರಣಪನ ತೋಱುಸಾರಣಕೆ"ಎಂಬುದು(Bh೩,೨೨,೩೦)ಜಯದ್ರಥನು ದ್ರೌಪದಿಯನ್ನು ಅಪಹರಿಸಿಕೊಂಡು ಮುಂದೆ ಮುಂದೆ ಓಡುತ್ತ ಹಿಂದೆ ಹಿಂದೆ ಅಟ್ಟಿಸಿಕೊಂಡು ಬರುವ ಭೀಮಾರ್ಜುನರನ್ನುಅಡ್ಡಗಟ್ಟಿಕಾಪಾಡಬೇಕೆಂದು ತನ್ನ ಭಟರಿಗೆ ಹೇಳುತ್ತಾನೆ. ಭೀಮನು ಮರವನ್ನು ಮುರಿದು ಅವರನ್ನೆಲ್ಲ ಅದರಿಂದ ಸದೆಬಡಿದು ಮುಂದೆ ಓಡುವ ಜಯದ್ರಥನನ್ನು ಕೂಗಿ ಕರೆದು ಹೇಳುವ ಸಂದರ್ಭವಿದು. ನಿನ್ನ ಭಟರ ತಲೆಗಳೆಲ್ಲ ಮುಗಿದು ಹೋದುವು, ಎಂದರೆ ಎಲ್ಲರೂ ಸತ್ತರು, ಯುದ್ಧಕ್ಕೆ ದರ್ಪವನ್ನು ತೋರಿಸು ಎಂದರ ಬೇರೆ ಭಟರಾರಾದರೂ ಇದ್ದರೆ ಅವರನ್ನೂ ಕಾಣಿಸು, ಅವರನ್ನೂ ಕೊಂಡು ಬಿಡುತ್ತೇನೆ ಎಂಬ ಅಭಿಪ್ರಾಯ

ಈ ವಾಕ್ಯದ್ದು. ಇಲ್ಲಿ ರಪಣಕ್ಕೆ ಇದು ಯುದ್ಧದ ಸಂದರ್ಭವಾಗಿರುವುದರಿಂದ ಕಿಟ್ಟೆಲ್ಲರು ಆಯುಧವೆಂದು ಅರ್ಥೈಸಿರುವಂತೆ ಕಾಣುತ್ತದೆ. ಆದರ ಬೇರೆ ಭಟರ 'ಸಾಧನ'ವೇನಾದರೂ ಇದ್ದರೆ ತೋರಿಸೆಂಬ ಅಭಿಪ್ರಾಯಕ್ಕೆ ಎಡೆಯಿಲ್ಲದಿಲ್ಲ. "ಹಿಡಿದ ಮುಷ್ಟಿಯ ನಿನ್ನ ರಪಣವ ಕೊಡಹಿ ನಿನ್ನ ದೆವೆಳರ ಕೊಳ್ಳದೆ ಬಿಡುವೆನೇ" ಎಂದು ಮೂರನೆಯ ಪ್ರಯೋಗ, (Bh.೮,೨೪,೫೦) ಇದಕ್ಕೆ"ಮುಷ್ಟಿಗೆ ಸರ್ವ ರಪಣವ ಕೊಡಹಿ ನಿನ್ನೆದೆದಿರುಳಕೊಳ್ಳದೆ ಬಿಡುವೆನೇ" ಎಂದು ಪಾಠಾಂತರವೂ ಇರುವುದರಿಂದ ಇಲ್ಲಿನ 'ರಪಣ'ದ ಅರ್ಥನಿರ್ಣಯ ಮೊದಲೆರಡು ಪ್ರಯೋಗಗಳಲ್ಲಿರುವಷ್ಟು ಸುಲಭವಾಗಿಲ್ಲ. ಕುರುಕ್ಷೇತ್ರದ ರಣಭೂಮಿಯಲ್ಲಿ ಒಮ್ಮೆ ಕರ್ಣಾರ್ಜುನರು ಒಬ್ಬರನ್ನೊಬ್ಬರು ಇದಿರಿಸಿ ಬಾಣಗಳನ್ನು ಸುರಿಸುತ್ತಿರುವಾಗ ಅರ್ಜುನನ ಬಾಣ ಕರ್ಣನೆದೆಯನ್ನು ನಾಟಿ ಬೆನ್ನಲ್ಲಿ ಮೂಡಿದ್ದರಿಂದ ರುಧಿರಧಾರೆಯನ್ನು ಸೂಸುತ್ತ ಕರ್ಣ ಕೈಗುಂದಿ ಕೆಳಗೆ ಬೀಳುವನು. ದಳಪತಿಯ ಸಾವಿನಲ್ಲಿ ಕೌರವನ ಸೈನ್ಯ ದಿಕ್ಕಾಪಾಲಾಗಿ ಓಡಿಹೋಗುತ್ತಿರಲು ಕೃಪಗುರುಸುತರು ಅರ್ಜುನನನ್ನು ಅಡ್ಡಗಟ್ಟಿ ಕಾಳಗವಾಡುತ್ತಾರೆ. ಇಷ್ಟರಲ್ಲಿ ಕರ್ಣ ಚೇತರಿಸಿಕೊಂಡು ಬಾಣವನ್ನು ಬೆರಳಲ್ಲಿ ತೂಗುತ್ತ ಅರ್ಜುನನನ್ನು ಮೂದಲಿಸುವ ಸಂದರ್ಭದಲ್ಲಿ ಮೇಲಿನ ವಾಕ್ಯ ಬರುತ್ತದೆ: ಎಲೋ ಅರ್ಜುನ, ಹಾರುವರೊಡನೆ ನಿನ್ನ ಶೌರ್ಯಾಧಿಕ್ಯವೇಕೆ, ಹೋಗಬೇಡ, ಇತ್ತ ಬಂದಿದಿರಾಗು ನೀನು ಹಿಡಿದಿರುವ ಮುಷ್ಟಿಯ ಸರ್ವರವಣವನ್ನು ನಾನು ಕೊಡವಿ ನಿನ್ನೆದೆಯ ತಿರುಳನ್ನು ತೆಗೆಯದೆ ಬಿಡುತ್ತೇನೆಯೇ ಎಂದು ಇಲ್ಲಿನ ತಾತ್ಪರ್ಯ. 'ರವಣ'ಕ್ಕೆ ಇಲ್ಲಿ ಸಾರ, ತಿರುಳು ಎಂಬಂತಹ ಅರ್ಥವು ಸಂಗತವಾಗಿರುವಂತೆ ತೋರುತ್ತದೆ. ಈ ಪ್ರಯೋಗಕ್ಕೆ ಕೊಂಚ ಹಿಂದೆ ೪೭ನೆಯ ಪದ್ಯದಲ್ಲಿ ಅರ್ಜುನನು ಕೃಪಗುರುಸುತರನ್ನು ಕರೆದು "ನಿಮಗೆ ಜರಿಬದೋಳೊಂದು ಮುಷ್ಟಿಗೆ ರವಣವುಂಟೇ ಹಾಯ್ಕಿ ನಿಮ್ಮಾಟವನು ನೋಡುವೆನು"ಎಂದು ಮೂದಲಿಸುತ್ತಾನೆ. ನನ್ನಿಂದ ಕರ್ಣನು ಪಟ್ಟ ನೋವಿಗಾಗಿ ನೀವು ಪ್ರತಿಕ್ರಿಯೆ ಮಾಡುವಲ್ಲಿ ಒಂದು ಹಿಡಿ ರವಣವು ನಿಮ್ಮಲ್ಲಿರುವುದೇ ಆದರೆ ಅದನ್ನು ತೋರಿಸಿ, ನಿಮ್ಮಾಟವನ್ನು ನೋಡುತ್ತೇನೆ ಎಂದು ಆ ಮೂದಲಿಕೆಯ ತಾತ್ಪರ್ಯ, ಇಲ್ಲಿಯೂ 'ರವಣ'ಕ್ಕೆ ಸಾರ, ಸತ್ವ ಎಂಬಂತಹ ಅರ್ಥವನ್ನು ಹೇಳಬಹುದು. ಇವೆರಡೂ ಯುದ್ಧದ

ಸಂದರ್ಭಗಳಾಗಿರುವುದೂ ಎರಡರಲ್ಲೂ 'ರವಣ'ದ ಹಿಂದೆ ಮುಷ್ಟಿಗೆ ಶಬ್ದ ಕಾಣುವುದೂ ಮುಷ್ಟಿಯಲ್ಲಿ ಹಿಡಿಯುತಕ್ಕ ಒಂದು ಆಯುಧವೆಂದು ಕಿಟ್ಟೆಲ್ಲರು.ಅರ್ಥ ಹೇಳಿದ್ದಕ್ಕೆ ಕಾರಣಗಳಾಗಿರಬಹುದು. ಅವರು ಸೂಚಿಸಿರುವ ಈ ಅರ್ಥ ತಪ್ಪೆಂದು ಈ ಪ್ರಯೋಗಗಳ ಬಲದಿಂದಲೇ ನಿರ್ಣಾಯಕವಾಗಿ ತೀರ್ಮಾನಿಸುವುದು ಸಾಧ್ಯವಿಲ್ಲದಿದ್ದರೂ ಅದರ ಸಮೀಚೀನತೆಯ ವಿಷಯ ದಲ್ಲಿ ಸಂದೇಹಕ್ಕೆಡೆಯಿದೆಯೆಂಬುದಂತೂ ಖಚಿತವಾಗುತ್ತದೆ. ಆದ್ದರಿಂದ ಈ ಸಮಸ್ಯೆಯನ್ನು ಕೂಲಂಕಷವಾಗಿ ವಿಚಾರ ಮಾಡಬೇಕಾಗಿದೆ.

ಇದಕ್ಕೆ ಪೂರ್ವ ಕವಿಪ್ರಯೋಗಗಳ ನೆರವು ಹೇರಳವಾಗಿ ಬೇಕು. ಕನ್ನಡದಲ್ಲಿ ನನಗೆ ದೊರೆತಿರುವ ಹಲವು ಪ್ರಯೋಗಗಳನ್ನು ಕಾಣಿಸಿ ಅವುಗಳ ಸಂದರ್ಭಾನುವಾದಗಳೊಡನೆ ಶಬ್ದಾರ್ಥವೇನಿದ್ದಿರಬೇಕೆಂಬುದರ ನಿರೂಪಣೆಗೆ ಇಲ್ಲಿ ತೊಡಗಿದೆ ;

(೧) ಈ ಕೆಳಗಿನ ಪದ್ಯ 'ಕಾವ್ಯಾಲೋಕನ'ದಲ್ಲಿ ಉದ್ಧೃತವಾಗಿದೆ (ಪದ್ಯ. ೧೧೮) :

> ಕವಡಿಕೆ ಬಂದುದೋಪಳುಬುದಟ್ಟಿದಳಾಳ್ದನ ನಂಟರತ್ತಣಿಂ
> ದವದಳಮಾಯ್ತು ಪೋಯ್ತು ರವಣಂ ಪೊಲೆವಾವುಗನಂಬನಾದನಿ ।
> ನ್ನವಧರಿಸಲ್ಕ ಮಾಲುನೆನುತುಂ ಮುಗುಬ್ದಾಡುವೆನಿಲ್ಲಜಂಗೆ ತಾಂ
> ಕವಡಿಕೆ ಕೆಯ್ಯೊಳಿರ್ದುಮವು ಮುಂದಳೆಯೊಳ್ ನೆಲೆಸಿರ್ದುವಲ್ಲವೇ ॥

ಈ ಇಡೀ ಪದ್ಯದ ಪೂರ್ಣ ತಾತ್ಪರ್ಯವನ್ನು ತಿಳಿಯುವುದು ಅತಿ ಕಷ್ಟ ವಾಗಿದ್ದರೂ ಪ್ರಕೃತಕ್ಕೆ ಬೇಕಾದ ಭಾಗದ ಅರ್ಥ ಸುಮಾರಾಗಿ ಸ್ಪಷ್ಟವಾಗಿದೆ. ಇದು ಯಾವ ಸಂದರ್ಭದಲ್ಲಿ ಬರುತ್ತದೆಂಬುದನ್ನಾಗಲಿ ಯಾರ ರಚನೆಯೆಂಬು ದನ್ನಾಗಲಿ ತಿಳಿಯಲು ಯಾವ ಆಧಾರವೂ ಇಲ್ಲ. ಒಂದು ಕಾಲದಲ್ಲಿ ಶ್ರೀಮಂತ ನಾಗಿದ್ದ ಯಾವನೋ ಒಬ್ಬನಿಗೆ ಏನೋ ಕಾರಣದಿಂದ ಬಡತನ ಬಂದಡಸಿದಾಗ ಅವನು ಹೇಳಿಕೊಂಡ ಮಾತುಗಳಿವೆಯೆಂದು ತೋರುತ್ತದೆ. ಕೈಗೆ ಕವಡೆ ಬಂತು; ಪ್ರಿಯಳು ನನ್ನನ್ನು ತೊರೆದು ಅಟ್ಟಿಬಿಟ್ಟಳು, ನನ್ನ ಸ್ವಾಮಿಯಿಂದ ನಂಟರಿಂದ ನನ್ನದೆಲ್ಲವೂ ಕೊಳ್ಳೆಯಾಯಿತು (ದವದಳ — ದಟಿದುಟಿ), ರವಣವು ಹೋಯಿತು—ಎಂದು ಪ್ರಕೃತ ಭಾಗದ ತಾತ್ಪರ್ಯ. ಇಲ್ಲಿ ರವಣ ವೆಂದರೆ ಐಶ್ವರ್ಯ ಮುಂತಾದ ಅರ್ಥವಿರುವಂತೆ ಊಹಿಸಬಹುದು.

(೨) ವ್ರತಗಳನ್ನೂ ಧರ್ಮವನ್ನೂ ಸರಿಯಾಗಿ ಆಚರಣೆ ಮಾಡು ವವರಿಗೆ ಅವುಗಳಿಂದಾಗಬೇಕಾದ ಕಾರ್ಯಸಿದ್ಧಿ ಆಗಿಯೇ ಬಿಡುವುದೆಂಬಂಶವನ್ನು ಸ್ಥಾಪಿಸುವುದಕ್ಕಾಗಿ ನಯಸೇನನು ತನ್ನದೇ ಆದ ಶೈಲಿಯಲ್ಲಿ ಹಲವು ಹೋಲಿಕೆಗಳನ್ನೂ ದೃಷ್ಟಾಂತಗಳನ್ನೂ ಕೊಡುತ್ತ "ಕುಱೆಯುಂ ಕಂಡು ಕಳ-ವೆಯುಂ ಬಿತ್ತುವಂತೆ, ರವಣಮಂ ಕಂಡು ಕುಡನಂ ಕುಡುವಂತೆ"ಎಂದು ಹೇಳಿ-ದ್ದಾನೆ (ಧರ್ಮಾಮೃತ, xiv—೭೬೦), ಕೆರೆ ತುಂಬಿರುವುದನ್ನು ನೋಡಿ ಬತ್ತವನ್ನು ಬಿತ್ತಿದರೆ ಫಲ ಬರುವುದು ನಿಶ್ಚಯ. ಹಾಗೆಯೇ ಸಾಲ ಕೊಡು ವವನು ಸಾಲಗುಳಿಯ ರಪಣವನ್ನು ನೋಡಿ ಕೊಟ್ಟರೆ ಅದು ವಸೂಲಾಗುವು ದರಲ್ಲಿ ಅವನಿಗೆ ಸಂದೇಹವಿರುವುದಿಲ್ಲ. ಸಾಲಗಳಿಗೆ ಅದನ್ನು ತೀರಿಸುವ ಯೋಗ್ಯತೆ ಇದೆಯೋ ಇಲ್ಲವೋ ಎಂಬಂಶವನ್ನು ಸಾಲಿಗನು ಪರೀಕ್ಷೆ ಮಾಡುವುದು ಲೋಕರೂಢಿ. ಸಾಲಗುಳಿಗೆ ಆ ಯೋಗ್ಯತೆ ಉಂಟಾಗುವುದು ಅವನು ಚರಸ್ಥಿರ ಆಸ್ತಿಯಿಂದ. ಆದ್ದರಿಂದ ಇಲ್ಲಿ 'ರಪಣ'ಕ್ಕೆ ಆಸ್ತಿ, ಭಾಗ್ಯ ಎಂಬಂಥ ಅರ್ಥ ತಕ್ಕುದಾಗಿದೆ. ನಯಸೇನನ ಈ ಪ್ರಯೋಗವು ಬಲು ಮಟ್ಟಿಗೆ ಅರ್ಥ ನಿರ್ಣಾಯಕವಾದುದೆಂದು ಹೇಳಬಹುದು.

(೩) 'ಸೂಕ್ತಿಸುಧಾರ್ಣವ'ದಲ್ಲಿರುವ ಅಜ್ಞಾತ ಕರ್ತೃಕಗಳಾದ ಹಲವು ಪದ್ಯಗಳಲ್ಲಿ ಕೆಳಗಿನದು (೮-೪೪೧);

ನವನಖರೇಖೆಗಳ್ ಬರೆದ [ಗ] ಲ್ಲದ ರೇಖೆಗಳಂತೆ ತೋಟಿ³ ಮೂ
ಡುವ ಮೊಲೆಯಾಡುವಳ್ದಿರ್ಗಳೊಳ್ ನೆಟಱಿಸಾರಿಪ್ರೊಲಾಗೆ ನಾಡೆ ನೋ
ಡುವ [ಕ]ಡಗಣ್ಣ ಡಾಳದೊಳ್ ಪಾಸಗವಾಯೆ ಮನಂ ವಿಟರ್ಗೆ ಹೋ
ದುವು ರವಣಂ ಗುಣಕ್ಕವಳ ಜವ್ವನಸೆತ್ತದೊಳಾರೊ ಸೋಲದರ್ '

ಇದೊಂದು ರೂಪಕೋಕ್ತಿ. ನೆತ್ತಿದಾಟಕ್ಕೂ ಯೌವನಕ್ಕೂ ಸಮೀಕರಣ ವಾಗಿ ಈ ಪದ್ಯ ರಚಿತವಾಗಿದೆ. ಜವ್ವನವೇ ಪಗಡೆಯಾಟ, ಅಲ್ಲಿ ವಿಟ-ವಿಟಿಯರ ರವಣ ಹೋಯಿತು. ಎಂದರೆ ಅವರು ಆಟದಲ್ಲಿ ಸೋತು ತಾವು ಇಟ್ಟ ಒತ್ತೆಯ ಧನವನ್ನು ಕಳೆದುಕೊಂಡರು. ಅವಳ ಗುಣಕ್ಕೆ ಎಂದರೆ, ಗೆಲವನ್ನು ಕಾಣಿಸುವ ಗೆರೆಗಳ ಸಂಖ್ಯಾಧಿಕ್ಯಕ್ಕೆ ಸೋಲದವರು

ಯಾರಿದ್ದಾರೆ—ಇದು ಪದ್ಯದ ತಾತ್ಪರ್ಯ, ಇಲ್ಲಿಯೂ ರವಣಕ್ಕೆ ಬೆಲೆ ಕಾಳುವ ವಸ್ತು, ಸಾರವಸ್ತು, ಜೂಜಿನಲ್ಲಿ ಒಡ್ಡುವುದಕ್ಕೆ ತಕ್ಕುದಾದ ವಸ್ತು ಎಂಬರ್ಥ ಹೊಂದಿಕೆಯಾಗುತ್ತದೆ. ಈ ಸಂದರ್ಭದಲ್ಲಿ "ಆ ನರೆಪಂ ನರೆವಂದು ಪೊಂಗಳಂ ಸುರಿವೊಡಮಾರೊ ಸೈರಿಸುವರಾತನ ಪಲ್ಲಿಲಿವಾಯ ನಾತಮಂ" ಎಂಬ ಪಂಪನ ರಸೋಕ್ತಿಯನ್ನು ನೆನೆಯಬಹುದು (ಪಂಪಭಾರತ, iv–೧೦೦) ಮುದುಕನೊಬ್ಬನು ಸೂಳೆಯೊಡನೆ ಕೂಡುವಾಸೆಯಿಂದ ಪೋಗಿ ಹೊನ್ನು ಗಳನ್ನು ಸುರಿದರೂ ಅವನ ಬಚ್ಚುಬಾಯ ನಾತಕ್ಕೆ ಅವಳು ಹೇಸಿಕೊಳ್ಳು ತ್ತಾಳೆ; ಅವಳಿಗೆ ಅವನೂ ಬೇಡ, ಅವನ ಹೊನ್ನೂ ಬೇಡ. ಇಲ್ಲಿ ಮುದುಕ ನೆರೆಯಲು ಹೋಗಿ ಸುರಿದ ಹೊನ್ನೇ 'ರವಣ'ವೆಂದೂ ಗ್ರಹಿಕೆ ಯಾಗುತ್ತದೆ.

ಈ ಶಬ್ದವನ್ನು ಅದರ ಮುಖ್ಯಾರ್ಥ ಗೌಣಾರ್ಥಗಳೆರಡರಲ್ಲೂ ಕುಮಾರವ್ಯಾಸನಷ್ಟು ಧಾರಾಳವಾಗಿಯೂ, ಶಕ್ತಿಮಯವಾಗಿಯೂ ಬಳಸಿರುವ ಕನ್ನಡ ಕವಿ ಬೇರೊಬ್ಬನಿಲ್ಲ. ಅವನ ಅದ್ಭುತವಾದ ಶಬ್ದ ಭಂಡಾರದಲ್ಲಿ ವಿವಿಧ ವರ್ಣಗಳಿಂದ ರಂಜಿಸುವ ರತ್ನಗಳಲ್ಲಿ ಇದೊಂದು. ಅವನ ವಿಶಾಲ ಕಾವ್ಯಪರಿಚಯದಲ್ಲಿ ಬಹುಶಃ ಮುಖ್ಯವಾಗಿದ್ದ 'ಪಂಪಭಾರತ'ದಲ್ಲಿ ಆ ಪದ ಪ್ರಯೋಗವನ್ನು ಮೊದಲ ಸಲಕ್ಕೆ ಕಂಡು ಅದನ್ನು ತನ್ನ ಕೃತಿಯಲ್ಲಿ ಮೆರೆಯಿಸಿದನೆಂದು ಕಾಣುತ್ತದೆ. ಅವನ ಭಾರತಕೃತಿಯ ದ್ಯೂತ ಪ್ರಸಂಗ ವೊಂದರಲ್ಲೇ ಅದರ ಹಲವು ಪ್ರಯೋಗಗಳು ಕಾಣುತ್ತವೆ :

(೪) i. ಆಟಕ್ಕೆ ಪಣವೇನೆಂದು ಶಕುನಿ ಕೇಳಿದಾಗ ಧರ್ಮರಾಜನ ಮಾತು : "ಅರಸಿಯರ ಮೈಗಾಪುಗಳ ಕಿಂಕರರು ಸಾವಿರವಿದೆ ರವಣ ನಿಮ್ಮರಸನಲ್ಲ ಪಣವೇನು" (೨, ೧೩, ೫೭).

ii. ಧರ್ಮರಾಯನು ತನ್ನ ರಥಸಂಕುಲವನ್ನೊಡ್ಡಿ "ಈ ರಥಕೆ ನಾಲ್ವತ್ತುಸಾವಿರ ವಾರುವಂಗಳ ಕೂಟವಾ ಪರಿವಾರವಿದೆಲಾ ರವಣ" ಎಂದು ಸೌಬಲನಿಗೆ ಹೇಳಿದನು (೨, ೧೩, ೬೧).

iii. "ಉಗುಳುತಿಪೆ ನಿನ್ನನುಜರಿಂಗಿತ ರೋಷಪಾವಕನ, ಸೊಗಸು ಬೇಯುದು ರಪಣವಿಲ್ಲದ ಬೆಗಡು ನೋಯುದು...ನಿಸಗೆಸುತ ಗಹಗಹಿಸಿದನು ಶಕುನಿ" (೨, ೧೪, ೨).

iv. ಮೇಲಿನ ಮೂರನೆಯುದರಲ್ಲಿ ಶಕುನಿ ನಕ್ಕಾಗ ಉತ್ತರವಾಗಿ "ಎಲ್ಲವೊ ಸೌಬಲ ವಿತ್ತವೀಸಟಿಲಳಿವುದೇ ನೀ ನಗುವವೊಲು ನಮ್ಮೊಳಗು ಡಿಳ್ಳವೆ ರಪಣವಿದೆಲಾ ಬಹಳ ಭಂಡಾರ" ಎಂದು ಹೇಳಿದ ಧರ್ಮರಾಯ (೨, ೧೪, ೩).

v. "ಮತ್ತೆ ಸುಡಿ ಧನವ ಭೂರಮಣ" ಎಂದು ಶಕುನಿ ಹೇಳಿದಾಗ "ರೇಖೆಯು ಭಾರಿಯೊವಡ್ಡಕೆ ಪದ್ಮ ಸಂಖ್ಯೆಯ ಭೂರಿಧನವಿದೆ ರಪಣವೆಂದನು ನಗುತ ಯಮಸೂನು" (೨, ೧೪, ೭)

ಮೇಲಿನ ಎಲ್ಲ ಪ್ರಯೋಗಗಳನ್ನೂ ವಿವರವಾಗಿ ಪರಿಶೀಲಿಸುವುದು ಅಷ್ಟೇನೂ ಅವಶ್ಯವಾಗಿಲ್ಲ. ಒಟ್ಟಿನಲ್ಲಿ "ರಪಣ" ಶಬ್ದ ಧನ=ವಿತ್ತ= ಅಖಿಲಸಿರಿ=ಪಣ ಎಂಬರ್ಥದಲ್ಲಿ ಇಲ್ಲಿ ಕಾಣುತ್ತದೆ; ಒಡ್ಡ=ಪಣ ಎಂದೂ ಒಂದೆರಡು ಕಡೆ ಆಗಬಹುದು.

(೫) ನಿವಾತ ಕವಚ ಕಾಲಕೇಯರೊಡನೆ ಅರ್ಜುನ ಹೋರಾಡಿದ್ದನ್ನು ಧರ್ಮರಾಜನಿಗೆ ಅವನು ವರ್ಣಿಸುತ್ತ "ಅವರ ಕೈಮೆಗೆ ತನ್ನ ಕೈಮೆಯ ಹಿರಿದು, ಅವರೆಸುಗೆಗೆನ್ನಲೆ ರಪಣ ನೂರ್ಮಡಿ" ಎಂದನಂತೆ (೩, ೧೩, ೫೦) ಇಲ್ಲಿ ರಪಣಕ್ಕೆ ಸಾಮರ್ಥ್ಯ, ಶಕ್ತಿ ಎಂಬ ಗೌಣಾರ್ಥವಿರುವಂತೆ ಕಾಣುತ್ತದೆ.

(೬) ಕುರುಕ್ಷೇತ್ರದ ಯುದ್ಧವೆಲ್ಲ ಮುಗಿದ ತರುವಾಯ ವ್ಯಾಕುಲಿತನಾದ ಧೃತರಾಷ್ಟ್ರನಿಗೆ ಧರ್ಮರಾಜನನ್ನು ಕಾಣಿಸುತ್ತ ವೇದವ್ಯಾಸರು ಅವನನ್ನು ಸಮಾಧಾನಪಡಿಸುವಾಗ "ಧರ್ಮವೆ ರಪಣವಿಹಪರಲೋಕಕೆಲೆ ಧೃತರಾಷ್ಟ್ರ ಕೇಳೆಂದ" ಎಂದನಂತೆ (೧೦, ೧೧, ೩೪) ಧರ್ಮವೇ ಇಹಕ್ಕೂ ಪರಕ್ಕೂ ಆಸ್ತಿ ಎಂಬುದು ಇಲ್ಲಿನ ಅಭಿಪ್ರಾಯವೆಂದು ಹೇಳಬಹುದು.

ಮೇಲಿನವು ನನ್ನ ದೃಷ್ಟಿಗೆ ಇರುವರೆಗೆ ಬಂದಿರುವ ಪ್ರಯೋಗಗಳು. ಇನ್ನೂ ಹಲವು ಇತರ ಕಾವ್ಯಗಳಲ್ಲೂ ಕುಮಾರವ್ಯಾಸ ಭಾರತದಲ್ಲೂ ದೊರೆಯಬಹುದು. ಸಿಕ್ಕಿರುವಷ್ಟು ಪ್ರಯೋಗಗಳಿಂದಲೇ ಈ ಶಬ್ದದ ಅರ್ಥವನ್ನು ತಿಳಿಯಲು ಅವಕಾಶವುಂಟು. "ಒಂದು ಬಗೆಯ ಆಯುಧ" ಎಂಬ ಕಿಟ್ಟೆಲ್ಲರ ಅರ್ಥ ಈ ಎಲ್ಲ ಪ್ರಯೋಗಗಳಿಗೂ ಹೊಂದಿಕೆಯಾಗುವು ದಿಲ್ಲವೆಂದು ಸ್ಪಷ್ಟವಾಗಿಯೇ ಇದೆ. ಒಬ್ಬ ವ್ಯಕ್ತಿಗೆ ಸೇರಿದ ಎಲ್ಲ ಬಗೆಯ ಬೆಲೆಬಾಳುವ ವಸ್ತುಸಮೂಹ. ಸಾರಧನ, ವಿತ್ತ ಎಂಬುದು ಅದರ ಮುಖ್ಯಾರ್ಥ : ಸಾರ, ಸಾಮರ್ಥ್ಯ, ತಿರುಳು ಅದರ ಗೌಣಾರ್ಥ. ಮನುಷ್ಯ ನಿಗೆ ವಿತ್ತವೇ ಎರಡನೆಯ ಜೀವವಾಗಿರುವುದರಿಂದ ಅದರ ಪ್ರಧಾನತೆಯನ್ನು ಗಮನಿಸಿ ಈ ಗೌಣಾರ್ಥಗಳು ಬಂದಿರುವಂತೆ ಊಹಿಸಬಹುದು. ಜೂಜಾಟದ ಪ್ರಸಂಗದಲ್ಲಿ ಒಡ್ಡ, ಒತ್ತೆ ಎಂಬ ಅರ್ಥವೂ ಉಂಟಾಗಬಹುದು.

ಇನ್ನು ಈ ಶಬ್ದದ ನಿಷ್ಪತ್ತಿ. 'ರಪಣ'ದಲ್ಲಿ ಎರಡು ಶಬ್ದಗಳಿರು ವಂತೆ ತೋರುತ್ತದೆ. ಎರಡನೆಯದು 'ಪಣ': ಇದಕ್ಕೆ ಆಸ್ತಿ, ವಿತ್ತ ಇತ್ಯಾದಿ ಅರ್ಥಗಳಿವೆ. ಮೊದಲನೆಯದು ರೈ ಎಂಬ ಶಬ್ದ ; ಇದಕ್ಕೂ ವಿತ್ತ, ಧನ ಇತ್ಯಾದಿ ಅರ್ಥವಿದೆ. "ರೈವೃಷ್ಟಿ" ಎಂದು ಕನ್ನಡ ಕಾವ್ಯಗಳಲ್ಲಿ ಬರುವ ಶಬ್ದಕ್ಕೆ ವಸುಧಾರೆ, ಚಿನ್ನದ ಮಳೆ ಎಂಬರ್ಥ ಪ್ರಸಿದ್ಧವಾಗಿಯೇ ಇದೆ, ಇವೆರಡು ಪದಗಳೂ ಒಟ್ಟಾಗಿ ಸೇರಿ 'ರೈಪಣ'ವಾಗಿ, ಅದರಿಂದ ಣರಯ್ಪ> ರಪಣ > ರವಣ ಎಂಬ ವಿಕೃತರೂಪಗಳು ಸಂಜನಿಸಿರುವಂತೆ ಕಾಣುತ್ತದೆ. ಒಂದೇ ಭಾಷೆಗೆ ಸೇರಿದ ಸಮಾನಾರ್ಥಕವಾದ ಎರಡು ಶಬ್ದಗಳು ಕಲೆತು ಅದೇ ಅರ್ಥದಲ್ಲಿ ಬೇರೊಂದು ಶಬ್ದದಂತೆ ವ್ಯವಹೃತ ವಾಗುವುದು ಭಾಷಾಶಾಸ್ತ್ರಕ್ಕೆ ಪರಿಚಿತವಾದ ವಿಷಯ. ಇಂಥ ಶಬ್ದಗಳನ್ನು 'ಯಮಳ ಶಬ್ದ'ಗಳೆಂದು ಕರೆಯಬಹುದು (Doublets) 'ಕೊಳೆ' ಎಂಬರ್ಥ ದಲ್ಲಿ ಪ್ರಾಕೃತ ಭಾಷೆಗಳಲ್ಲಿರುವ ':ಜಲ್ಲಮಲ'ವೂ— (ಇದು ಕನ್ನಡ ಕಾವ್ಯ ಗಳಲ್ಲೂ ಪ್ರಯುಕ್ತವಾಗಿದೆ, ಅಗ್ಗಳನ ಚಂದ್ರಪ್ರಭ ಪುರಾಣ ×೧೧೧-೩೬-) ಕರಡಿ ಎಂಬರ್ಥದಲ್ಲಿರುವ ಅಚ್ಛಭಲ್ಲವೂ <ಋಕ್ಷ + ಭಲ್ಲೂಕ ಇಂಥ ಶಬ್ದ ಹೀಗೆ ಬಂಗಾಳಿಯಲ್ಲಿ ಘರ್‌ಬಾಡಿ <ಗೃಹ + ವಾಟಿಕ = ಮನೆ, ಗಾಛ್

ಪಾಲ್ <ಗಚ್ಚ+ಪಲ್ಲವ=ಚಿಗುರು ಎಂಬ ಯಮಳ ಶಬ್ದಗಳುಂಟು. ಸೊಪ್ಪುಸದೆ, ತೋಟತುಡಿಕೆ, ಹುಳಹುಪ್ಪಟೆ ಮುಂತಾದುವು ಕನ್ನಡದಲ್ಲಿ ಇಂಥ ಶಬ್ದಕ್ಕೆ ನಿದರ್ಶನಗಳು. ಎರಡು ಶಬ್ದಗೂ ಸಮಾನಾರ್ಥಕಗಳಾದುವೂ, ಭಿನ್ನಭಾಷೆಗಳಿಗೆ ಸೇರಿದುವೂ ಆಗಿದ್ದು, ಅವೆರಡೂ ಒಟ್ಟಿಗೆ ಸೇರಿ ಅದೇ ಅರ್ಥದಲ್ಲಿ ಬೇರೊಂದು ಶಬ್ದವಾಗುವುದೂ ಉಂಟು; ಇವಕ್ಕೆ polyglot ಎಂಬ ಹೆಸರಿದೆ. ಕನ್ನಡದಲ್ಲಿರುವ ಹಣ್ಣುಹಂಪಲ <ಪಣ್+ಪಣ್+ಫಲ (ಸಂಸ್ಕೃತ), ಕಸ+ಕಡ್ಡಿ <ಕಸ+ಕಾಷ್ಠ (ಸಂಸ್ಕೃತ) ಎಂಬಿವು ಇಂಥ ಶಬ್ದಗಳಾಗಿವೆ. ದಂತವಾಲ, ಪಾಲಕಾವ್ಯ, ಇಕ್ಷಗುಂಡ ಮುಂತಾದ ಸಂಸ್ಕೃತ ಶಬ್ದಗಳು ಈ ತೆರನ ಶಬ್ದಗಳೆಂದು, ವಿದ್ವಾಂಸರ ಅಭಿಪ್ರಾಯ.[1] ಆದ್ದರಿಂದ ರೈ ಮತ್ತು ಪಣ ಎಂಬೆರಡು ಶಬ್ದಗಳ ಸಮಾಹಾರದಿಂದ 'ರೈವಣ'ವಾಗಿ ಅನಂತರ ರಪಣವೆಂದು ಪರಿಣಮಿಸಿರುವುದರಲ್ಲಿ ಅಸಹಜತೆಯೇನೂ ಕಾಣುವುದಿಲ್ಲ. 'ಯಮಳಶಬ್ದ'ದಲ್ಲಿರುವ ಪೃಥಕ್ಪದಗಳು ಒಂದರ ಅರ್ಥವನ್ನು ಇನ್ನೊಂದು ಸ್ಥಿರಗೊಳಿಸುತ್ತವೆ. ಪಂಪಲು ಪಣ್ಪಲ (ಪಂಪಭಾರತ VIII-೨೮,೩೦) ಎಂಬುದರ ಅರ್ಥ ಕಾಲಕ್ರಮದಲ್ಲಿ ಅಸ್ಪಷ್ಟವಾದ್ದರಿಂದ ಆ ಅರ್ಥಸ್ಥಾಪನೆಗೆ ಈಚಿನ ಕನ್ನಡಿಗರು ಅದರ ಹಿಂದೆ ಹಣ್ಣು ಎಂಬುದನ್ನು ಸೇರಿಸಿರಬೇಕು. ಹೀಗೆಯೇ ವೈದಿಕ ಸಂಸ್ಕೃತದಲ್ಲಿ ಪ್ರಚುರವಾಗಿದ್ದ ರೈ ಶಬ್ದ ಅರ್ವಾಚೀನ ಸಂಸ್ಕೃತದ ಕಾಲದಲ್ಲಿ ತನ್ನ ಅರ್ಥಸ್ಫುಟತೆಯನ್ನು ನೀಗಿಕೊಂಡದ್ದರಿಂದ ಅದರ ನೆರವಿಗೆ ಸಮಾನಾರ್ಥಕವಾದ 'ಪಣ' ಶಬ್ದವು ಬಂದು 'ರಪಣ' ಶಬ್ದೋತ್ಪತ್ತಿಗೆ ಕಾರಣವಾಗಿರಬಹುದು. ಸಂಸ್ಕೃತದಲ್ಲಾಗಲಿ ಪ್ರಾಕೃತದಲ್ಲಾಗಲಿ ಇತರ ಭಾರತೀಯ ಭಾಷೆಗಳಲ್ಲಾಗಲಿ ನನಗೆ ತಿಳಿದ ಮಟ್ಟಿಗೆ ಈ ಶಬ್ದ ದೊರೆಯುವಂತೆ ಕಾಣುವುದಿಲ್ಲ; ಅದು ಕನ್ನಡಕ್ಕೇ

1 S K. Chatterji, polyglotism in Indo-Aryanl Proceedings of the VII All India Orienta, Conference, p. 176

ವಿಶಿಷ್ಟವಾದ ಶಬ್ದ. ಬಹುಶಃ ಪಂಪನ ಕಾಲಕ್ಕಿಂತ ಹಿಂದೆಯೇ ಇದು ಕನ್ನಡಿಗರಿಗೆ ಪರಿಚಿತವಾಗಿತ್ತು. ಆದರೆ ಇದನ್ನು ಅವರೇ ಸೃಷ್ಟಿಸಿಕೊಂಡ ರೆಂದು ಹೇಳಲಾಗುವುದಿಲ್ಲ. ಜೈನ ಸಂಸ್ಕೃತದಿಂದಲೋ ಏನೋ, ಕನ್ನಡ ಕವಿಗಳು ಇದನ್ನು ಎತ್ತಿಕೊಂಡಿರಬಹುದು.

# ಭಾಷಾ ವಿಹಾರ

(ಒಂದು ವಿಮರ್ಶೆ)

ಶ್ರೀ ದೇಸಾಯಿ ಪಾಂಡುರಂಗರಾಯರು 'ಕನ್ನಡನುಡಿ'ಯ ಕಳೆದ ಸಂಚಿಕೆಯಲ್ಲಿ(ನವಂಬರ್, ೧೫)'ಭಾಷಾ ವಿಹಾರ'ವೆಂಬ ಲೇಖನವನ್ನು ಬರೆದು ಅದರಲ್ಲಿ 'ಬಾದುಬೆ' ಮುಂತಾದ ಏಳು ಶಬ್ದಗಳ ಅರ್ಥವನ್ನು ನಿರ್ಣಯಿಸಲು ಪ್ರಯತ್ನಿಸಿದ್ದಾರೆ; ಅವುಗಳ ನಿಷ್ಪತ್ತಿಯನ್ನು ಕುರಿತು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಆ ಏಳು ಶಬ್ದಗಳಲ್ಲಿ 'ಒಲ್ಲಣಿಗೆ'ಯೂ ಒಂದಾಗಿದೆ. ಇದರ ಅರ್ಥ ವಿಚಾರವನ್ನು ಮಾಡುತ್ತ ಹಿಂದೊಮ್ಮೆ ಅದಕ್ಕೆ 'ಉಟ್ಟುಮಿಾವ ಸೀರೆ' ಎಂಬರ್ಥವೆಂದು ಸಾಧಾರವಾಗಿ ನಿರೂಪಿಸಿ ಅದರ ಮೂಲವನ್ನು ಕುರಿತು "ಇದು ಯಾವ ಭಾಷೆಯದೋ, ಕನ್ನಡಕ್ಕೆ ಹೇಗೆ ಬಂತೋ, ಇದರ ನಿಷ್ಪತ್ತಿಯೇನೋ ಯಾವುದನ್ನೂ ಸದ್ಯದಲ್ಲಿ ವಿವರಿಸಲು ಅವಕಾಶವಿಲ್ಲ" ಎಂದು ಬರೆದಿದ್ದೆ.[1] ಇದನ್ನು ಕುರಿತು ಟೀಕಿಸುತ್ತ ಶ್ರೀ ದೇಸಾಯಿ ಪಾಂಡುರಂಗರಾಯರು "ಈ ಅಭಿಪ್ರಾಯವು ಸಮರ್ಥನೀಯ

1 ಸಂಭಾವನೆ, ಪು. ೨೨೨ ೨೨೩

ವಾಗಿಲ್ಲ. ವಿಮರ್ಶಾಪೂರ್ವಕ ನೋಡಿದರೆ ಈ ಶಬ್ದವು ಇಂದಿನ ಕನ್ನಡಕ್ಕೆ ದೂರವಾಗಿಲ್ಲ. "ಇದು ಶುದ್ಧ ಕನ್ನಡಪದ" ಎಂದು ತೀರ್ಮಾನಿಸಿ, ಒಲ್ಲೆ+ ಅಣಿಗೆ ಎಂಬೆರಡು ಶಬ್ದಗಳ ಸೇರುವಣೆಯಿಂದ 'ಒಲ್ಲಣಿಗೆ' ಬಂದಿದೆಯೆಂದು ಪ್ರತಿಪಾದಿಸಿದ್ದಾರೆ. ಈ ಅಭಿಪ್ರಾಯವನ್ನೂ ಪ್ರಾಸಂಗಿಕವಾಗಿ ಅವರೇ ಹೇಳಿರುವ ಮತ್ತೆ ಕೆಲವನ್ನು ಇಲ್ಲಿ ವಿಮರ್ಶಿಸಲೂ ತೊಡಗಿದೆ. ಈ ವಿಷಯವನ್ನು ಪುನಃ ಹೆಕ್ಕಿ ನೋಡುವ ಅವಕಾಶವನ್ನು ಕಲ್ಪಿಸಿಕೊಟ್ಟಿರುವ ಶ್ರೀ ದೇಸಾಯಿಯವರಿಗೆ ನನ್ನ ಕೃತಜ್ಞತೆಗಳು.

ಮೇಲ್ಕಂಡ ನನ್ನ ಲೇಖನದಲ್ಲಿ ಹೇಳಿರುವ ಆ ಮಾತುಗಳಲ್ಲಿ ಯಾವ ಬಗೆಯೂದ ಧೋರಣೆಯೂ ಇಲ್ಲ ; ಅದು ನನ್ನ ಮಟ್ಟಿಗೆ ವಾಸ್ತವವಾಗಿರು ವುದನ್ನೇ ಹೇಳುತ್ತಿದೆ. ಆ ಶಬ್ದ ಹೇಗೆ ರೂಪುಗೊಂಡಿದೆಯೆಂಬ ಅಂಶದಲ್ಲಿ ನನಗೆ ಇದ್ದ ಸಂದೇಹವನ್ನೂ ಅನಿಶ್ಚಿತತೆಯನ್ನೂ ನನ್ನ ಮಾತು ಪ್ರತಿಬಿಂಬಿಸು ತ್ತದೆ ; ಅಲ್ಲದೆ ಸ್ವಲ್ಪಮಟ್ಟಿಗೆ ಆ ವಿಚಾರದಲ್ಲಿ ಮುಂದುವರಿದು ನನ್ನ ಮನ ಸ್ಸಿಗೆ ತೃಪ್ತಿಕರವಾಗಿ ಆ ಸಮಸ್ಯೆಯನ್ನು ಬಿಡಿಸಲಾಗದಿದ್ದುದೂ ಅದರಿಂದ ವ್ಯಕ್ತವಾಗಿದೆ. ಶ್ರೀ ಪಾಂಡುರಂಗರಾಯರ ಲೇಖನ ಏನಾದರೂ ಹೊಸ ಬೆಳಕನ್ನು ಕಾಣಿಸಬಲ್ಲದೋ ಎಂಬ ಕುತೂಹಲದಿಂದ ಪ್ರೇರಿತನಾಗಿ ಅವರ ಲೇಖನವನ್ನು ಆಸಕ್ತಿಯಿಂದ ನೋಡಿದೆ. ಸಮಸ್ಯೆ ಬಿಡುವ ಬದಲು ಹೆಚ್ಚು ತೊಡಕಾಗಿ ಪರಿಣಮಿಸಿದೆ. 'ಇದು ಶುದ್ಧ ಕನ್ನಡ ಪದ' ಎಂದು ಶ್ರೀ ದೇಸಾಯಿಯವರ ಅಭಿಪ್ರಾಯವಾಗಿದೆಯಷ್ಟೆ ; ಒಂದು ಪದ ಶುದ್ಧ ಕನ್ನಡವೇ, ಅಲ್ಲವೇ ಎಂಬುದನ್ನು ನಿರ್ಣಯಿಸುವ ಮುನ್ನ ಈ ಕೆಳಗಿನ ಅಂಶಗಳನ್ನು ಗಮನಿಸಬೇಕು.

೧. ಅದು ಕನ್ನಡವೇ ಆಗಿದ್ದರೆ ಯಾವ ಧಾತು ಮೂಲದಿಂದ ಬಂದಿರ ಬಹುದೆಂಬುದನ್ನು ಕಂಡುಹಿಡಿಯಬೇಕು ; ಅದೇ ಧಾತುವಿನಿಂದ ಹುಟ್ಟಿರುವ ಬೇರೆ ಶಬ್ದಗಳೇನಾದರೂ ಇದ್ದರೆ ಅವನ್ನು ಕಾಣಿಸಬೇಕು.

೨. ಕನ್ನಡದಲ್ಲಿ ಆ ಧಾತುವಿಲ್ಲದಿದ್ದರೆ ಇತರ ದ್ರಾವಿಡ ಭಾಷೆಗಳಲ್ಲಿ

ಆದಿರಬಹುದು; ಅದರಿಂದ ಜನ್ಯವಾದ ಇತರ ಶಬ್ದಗಳೂ ಇವನ್ನು ತೋರಿಸಬೇಕು.

೩. ಒಂದು ಶಬ್ದ ಸಂಸ್ಕೃತದಲ್ಲಿ ಏಕಾಕಿಯಾಗಿದ್ದು ಅದರ ನಿಷ್ಪತ್ತಿ ಸಂದೇಹಗ್ರಸ್ತವೆಂದು ಕಂಡು ಬಂದಾಗ, ಕನ್ನಡ ಮುಂತಾದ ದ್ರಾವಿಡ ಭಾಷೆಗಳಲ್ಲಿ ಆ ಶಬ್ದಮೂಲವೂ ಅದರಿಂದ ಕವಲೊಡೆದು ಬಂದಿರುವ ಶಬ್ದಸಮುದಾಯವೂ ಇದ್ದಾಗ; ಅದು ದ್ರಾವಿಡ (ಕನ್ನಡ) ಶಬ್ದವೆಂದು ತೀರ್ಮಾನಿಸಬಹುದು.

೪. ಯಾವುದಾದರೂ ವಸ್ತುವನ್ನೋ, ಭಾವವನ್ನೋ ಹೇಳುವ ಶಬ್ದವೊಂದು ದ್ರಾವಿಡ ಭಾಷೆಗಳಲ್ಲಿ ಏಕಮಾತ್ರವೇ ಆಗಿದ್ದು ಸಂಸ್ಕೃತದಲ್ಲಿ ಸಮಾನಾರ್ಥಕವಾದ ಹಲವು ಶಬ್ದಗಳಿದ್ದರೆ ಆಗ ಆ ಶಬ್ದ ದ್ರಾವಿಡವಾಗಿರಬಹುದು.

೫. ಸಂಸ್ಕೃತದ ಒಡಹುಟ್ಟುಗಳಾದ ಇಂಡೋ-ಯೂರೋಪಿಯನ್ ಭಾಷೆಗಳಲ್ಲಿ ಒಂದು ಶಬ್ದಕ್ಕೆ ಸಂವಾದಿ ಶಬ್ದಗಳಿಲ್ಲದಿದ್ದು ಎಲ್ಲ ದ್ರಾವಿಡ ಭಾಷೆಗಳಲ್ಲೂ ಆ ಶಬ್ದವಿದ್ದರೆ ಆಗ ಅದು ದ್ರಾವಿಡವೇ ಇರಬಹುದು.[1]

ಮೇಲ್ಕಂಡ ಅಂಶಗಳಲ್ಲಿ ಒಂದೋ ಹಲವೋ ಖಚಿತವಾಗಿ ನಿರ್ಣೀತವಾದರೆ ಆಗ ಆ ಶಬ್ದ ದ್ರಾವಿಡವೋ ದ್ರಾವಿಡೇತರವೊ ಎಂಬುದನ್ನು ಸ್ಥಾಪಿಸಬಹುದು.

## 1. ಒಲ್ಲಣಿಗೆ

'ಒಲ್ಲಣಿಗೆ'ಯಲ್ಲಿ ೧ಒಲ್ಲ+ಅಣಿಗೆ ಎಂಬೆರಡು ಶಬ್ದಗಳು ಕೂಡಿವೆಯೆಂಬ ಅಭಿಪ್ರಾಯವನ್ನು ಪರೀಕ್ಷಿಸಬೇಕು. 'ಒಲ್ಲಿ' ಎಂಬ ಪದವನ್ನು ಮೊದಲು ಎತ್ತಿಕೊಳ್ಳಬಹುದು. ಈ ಶಬ್ದವನ್ನು ಕಿಟ್ಟೆಲ್ ಅವರು ತಮ್ಮ ಕೋಶದಲ್ಲಿ

---

1 Coldwell, Comparative Grammar of the Dr. Languages (P. 566-67)

ಕಾರಕ್ಷರಗಳಿಂದ ಮುದ್ರಿಸಿ ಅದು ದೇಶ್ಯವೆಂಬ ಅಭಿಪ್ರಾಯವನ್ನು ಸೂಚಿಸಿರು ವುದೇ ಅಲ್ಲದೆ 'ಮಂಗರಾಜ ನಿಘಂಟು'ವಿನಲ್ಲಿ ಅದು ದೊರೆಯುತ್ತದೆಂದೂ ತುಳು, ತೆಲುಗು, ಮಲಯಾಳ ಭಾಷೆಗಳಲ್ಲಿ 'ಒಲ್ಲೆ' ವಲ್ಲೆ' ಎಂಬ ಅದೇ ಶಬ್ದದ ಬೇರೆ ರೂಪಗಳಿವೆಯೆಂದೂ ಹೇಳಿದ್ದಾರೆ. ಅದರ ಅರ್ಥ ಸಣ್ಣ ಧೋತ್ರ ಉತ್ತರೀಯವೂ ಹೊದೆಯುವ ವಸ್ತ್ರವೂ ಆಗಬಹುದು. ಈ ಶಬ್ದ ತಮಿಳು ಕೋಶದಲ್ಲಿ (Tamil lexicon) ಇರುವಂತೆ ಕಾಣುವದಿಲ್ಲ; ತೆಲುಗಿ ನಲ್ಲಿ 'ಒಲ್ಲಿಯ' 'ಒಲ್ಲೆ' ಎಂಬೆರಡು ರೂಪಗಳಿದ್ದು ವಸ್ತ್ರ, ಬಟ್ಟೆ ಚೀರ ಎಂಬರ್ಥವನ್ನು ಹೊಂದಿದೆ ; ಮಲಯಾಳವಲ್ಲಿ 'ಒಲ್ಲಿ' ಶಬ್ದವಿದ್ದು ಅದಕ್ಕೆ ಹೊದಿಕೆ ಎಂಬರ್ಥವಿದೆ. ಈ ಶಬ್ದ ದೇಶ್ಯವೆಂಬ ಕಿಟ್ಟೆಲ್ ಅವರ ಅಭಿಪ್ರಾಯವನ್ನೂ ಪರಿಶೀಲಿಸಬೇಕು. ಈ ಶಬ್ದದ ಮೂಲವೇನು, ಅದ ರಿಂದಲೇ ಇನ್ನಾವುದಾದರೂ ಶಬ್ದ ಬಂದಿದೆಯೆ ಎಂಬೆರಡು ಪ್ರಶ್ನೆಗಳೇಳು ತ್ತವೆ. ಇವಕ್ಕೆ ಉತ್ತರ ಈಗ ತಿಳಿದಮಟ್ಟಿಗೆ ಶಬ್ದಮೂಲ ಗೊತ್ತಿಲ್ಲ, ಬೇರೆ ದೇಶ್ಯ ಶಬ್ದಗಳಿಲ್ಲ ಎಂದಿಷ್ಟೇ. ಹಳಗನ್ನಡ ಕಾವ್ಯಗಳಲ್ಲಿ ಈ ಶಬ್ದದ ಪ್ರಯೋಗವಾಗುವಂತೆ ಕಾಣುವುದಿಲ್ಲ; ಆದ್ದರಿಂದ ಇದು ಕನ್ನಡಕ್ಕೆ ಎಷ್ಟು ಹಳೆಯದೆಂಬುದನ್ನು ಹೇಳಲಾಗದು. 'ಮಂಗರಾಜ ನಿಘಂಟುವಿ'ನ ಕಾಲಕ್ಕೆ ಎಂದರೆ ಕ್ರಿ.ಶ. ೧೪೦೦ ಸುಮಾರಿಗೆ ಇದು ಸಾಹಿತ್ಯದೊಳಕ್ಕೆ ಪ್ರವೇಶಿಸಿರ ಬಹುದು ; 'ವಲ್ಲೆ' ಎಂಬ ಬೇರೊಂದು ರೂಪವನ್ನು ಕಿಟ್ಟೆಲ್ ಅವರು ಸೂಚಿಸಿರುವುದು ಗಮನಾರ್ಹವಾಗಿದೆ ; ಮಾನಿಯರ್ ವಿಲಿಯಮ್ಸ್ ಅವರು ತಮ್ಮ ಸಂಸ್ಕೃತ–ಇಂಗ್ಲಿಷ್ ಕೋಶದಲ್ಲಿ 'ವಲ್ಲೀಪದ' ಎಂಬ ಶಬ್ದವನ್ನುಲ್ಲೇ ಖಿಸಿ ಅದಕ್ಕೆ "A kind of cloth with various marking or patterns" ಎಂದು ಅರ್ಥ ಹೇಳಿದ್ದಾರೆ. 'ಪಾಣೀ' ಎಂಬೊಂದು ಪ್ರಾಕೃತ ಶಬ್ದಕ್ಕೆ 'ವಲ್ಲೀ ವಿಶೇಷಃ' ಎಂಬ ಅರ್ಥವೂ "ಪಾಣೀ ಸಾಮಾವಲ್ಲೀ ಗುಂಜಾ ವಲ್ಲೀಯ ವತ್ಥಾಣಿ" ಎಂಬ 'ಪಣ್ಣವಣಾಸುತ್ತ'ವೆಂಬ ಜೈನ ಗ್ರಂಥದ ಪ್ರಯೋಗವೂ 'ಪಾ ಇಯ ಸದ್ದ ಮಹಣವ'ವೆಂಬ ಕೋಶದಲ್ಲಿ ದೊರೆಯು ತ್ತವೆ, ಸಾಮಾವಲ್ಲೀ ಎಂದರೆ ಶ್ಯಾಮಾದಲ್ಲೀ (ಶ್ಯಾಮವರ್ಣದ ಬಟ್ಟೆ) ಎಂದರ್ಥ; ಆದ್ದರಿಂದ 'ವಲ್ಲೀ' ಎಂಬ ಪದಕ್ಕೆ ವಸ್ತ್ರವೆಂಬ ಅರ್ಥಸ್ಥಾಪಿತ ವಾಗುವುದೇ ಅಲ್ಲದೆ ಅದು ದ್ರಾವಿಡೇತರವಾಗಿರಬಹುದೆಂಬ ಸೂಚನೆಯೂ

ದೊರೆಯುತ್ತದೆ. ವಲ್, ವಲ್, ಎಂಬ ಸಂಸ್ಕೃತ ಧಾತುವಿನಿಂದ ಈ ಶಬ್ದ ಮೂಡಿಬಂದಿರುವ ಹಾಗೆ ಕಾಣುತ್ತದೆ. ಸಂವರಣೇ, ಸಂಚರಣೇ ಎಂದು ಆ ಧಾತುವಿಗೆ ಅರ್ಥ ; ಹೊದೆ, ಮುಚ್ಚು ಮುಂತಾದ ಅಭಿಪ್ರಾಯವನ್ನೂ ಕೊಡಲು ಸಮರ್ಥವಾಗಿದೆ ; ವಲಯ, ವಲಿತ ಮುಂತಾದ ಅನೇಕ ಶಬ್ದ ಗಳು ಅದರಿಂದ ಜನಿಸಿವೆ. ತಮಿಳಿನಲ್ಲಿ "ವಲ್ಲಿಕ್ಕಯಿಟು" ಎಂಬ ಶಬ್ದಕ್ಕೆ "waistcord worn over the cloth" ಎಂಬರ್ಥವುಂಟು ; ವಲ್ಲಿ– ಕುಯಿಟು ಎಂದು ಅದರ ವಿಭಾಗ ; ಕುಯಿಟು ಎಂದರೆ ಹಗ್ಗ, ನೇಣು. 'ಉಡೈಮೇಲ್ ತರಿಕ್ಕುಂ' ಎಂಬ ಮಾತಿನಿಂದ ವಲ್ಲಿ ಎಂದರೆ ಉಡ್ಕೆ–ಉಡುಪು ಎಂಬರ್ಥ ಸ್ಫುರಿಸುತ್ತದೆ. ಈ ಕಾರಣಗಳಿಂದ ಶಬ್ದದ ಮೂಲರೂಪ ಒಲ್ಲಿ ಅಲ್ಲಿ, ವಲ್ಲೀ ಎಂದು ಹೇಳಬಹುದು. ಅದು ಸಂಸ್ಕೃತದ ಶಬ್ದವಾಗಿ ಕಾಣು ವುದೇ ಹೊರತು, ಕನ್ನಡವಲ್ಲ. ಅದು ದ್ರಾವಿಡ ಭಾಷೆಗಳ ಸ್ವಂತ ಆಸ್ತಿ ಯಲ್ಲ.

'ಒಲ್ಲಣಿಗೆ'ಯ ಪ್ರಥಮ ಪದ 'ಒಲ್ಲ' ಎಂದಿರಬೇಕೆಂದು ಹೇಳಲು ಆಧಾರಗಳು ಹೇರಳವಾಗಿವೆ. ಸಂಸ್ಕೃತದ ಉದ್ರ (ಅರ್ದ್ರ) ಎಂಬ ಪದ– ಇದಕ್ಕೆ ಗ್ರೀಕಿನಲ್ಲಿ ಸಹೋದರ ಶಬ್ದವುಂಟು–ಭಾರತೀಯ ಭಾಷೆಗಳಲ್ಲಿ ನಾನಾ ಆಕಾರಗಳನ್ನು ತಾಳಿಕೊಂಡಿದೆ; (೧) ಕನ್ನಡದಲ್ಲಿ ಅದಕ್ಕೆ 'ಒದ್ದೆ' ಎಂದಾ ಗಿದೆ. ಕಿಟ್ಟೆಲ್ಲರು ಇದನ್ನು ಅಚ್ಚಗನ್ನಡವೆಂದು ಭ್ರಮಿಸಿದ್ದಾರೆ. (೨) ಕೆಲವು ಪ್ರಾಕೃತ ಭಾಷೆಗಳಲ್ಲಿ 'ಅದ್ದ' ಎಂದಾಗುತ್ತದೆ ; ಅರ್ದ್ರಿತ>ಅದ್ದಿಯ (೩) ಇದಕ್ಕೆ 'ಅಲ್ಲ' ಎಂಬ ರೂಪವೂ ಪ್ರಾಕೃತದಲ್ಲಿ ಉಂಟಾಗಿ ಅದು ದ್ರಾವಿಡ ಭಾಷೆಗಳಿಗೂ ಬಂದಿದೆ. ಪಾಲಿ, ಅರ್ಧ ಮಾಗಧಿ ಮುಂತಾದ ಭಾಷೆಗಳಲ್ಲಿ ಈ ಕೆಳಗಿನ ಶಬ್ದಗಳು ದೊರೆಯುತ್ತವೆ :

| | |
|---|---|
| ಅಲ್ಲಮತ್ತಿಕಾಪುಂಜ | (ಅರ್ಥ : ಒದ್ದೆಯಾದ ಮಣ್ಣು ಮುದ್ದೆ) |
| ಅಲ್ಲಕುಸುಮುಟ್ಟಿ | (ಹೊಸದಾಗಿ ಕಿತ್ತ ಹಸಿಹುಲ್ಲು) |
| ಅಲ್ಲಗೋಮಯ | (ಹಸಿಸಗಣಿ) |
| ಅಲ್ಲಚಮ್ಮ | (ಹಸಿಚರ್ಮ) |

| | |
|---|---|
| ಅಲ್ಲದಾರೂನಿ | (ಹಸಿ ಕಡ್ಡಿ) |
| ಅಲ್ಲಕೇಶ | (ಒದ್ದೆಯಾದ, ತೊಳೆದ, ನಿರ್ಮಲಕೇಶ) |
| ಅಲ್ಲವತ್ಥ | (ತೊಳೆದ ಬಟ್ಟೆ) |
| ಅಲ್ಲಗ (ಕ) | (ಅರ್ದ್ರಕ; ಹಸಿಶುಂಠಿ) |
| ಅಲ್ಲ | (ಅರ್ದ್ರ; ಹಸಿಶುಂಠಿ) |
| ಅಲ್ಲ ಜೀವರ | (ಒದ್ದೆ ಬಟ್ಟೆ) |

ಸಮಾಸದ ಪೂರ್ವಪದವಾಗಿದ್ದಾಗಲೂ ಸ್ವತಂತ್ರವಾಗಿದ್ದಾಗಲೂ ಆರ್ದ್ರಶಬ್ದ ಪ್ರಾಕೃತದಲ್ಲಿ 'ಅಲ್ಲ'ವಾಗುವುದು ಮೇಲಿನ ಉದಾಹರಣೆಗಳಿಂದ ಸ್ಪಷ್ಟಪಡುತ್ತದೆ; 'ಅಲ್ಲ' ಎಂಬುದು ನಮ್ಮ ವಿಶೇಷ ಗಮನಕ್ಕೆ ಆರ್ಹ; ಹಸಿಶುಂಠಿ ಎಂಬರ್ಥದಲ್ಲಿ ಅದು ಕನ್ನಡದಲ್ಲಿ ಅಲ್ಲ ಎಂದೂ, ತಮಿಳಿನಲ್ಲಿ ಅಲ್ಲಂ ಎಂದೂ, ತೆಲುಗಿನಲ್ಲಿ ಅಲ್ಲಮು ಎಂದೂ, ಪ್ರಾಚೀನ ಕವಿ ಪ್ರಯೋಗದಲ್ಲೂ ಇಂದಿನ ಬಳಕೆಯಲ್ಲೂ ನೆಲಸಿ ನಿಂತಿದೆ. ಅದೇ ಶುದ್ಧ ದೇಶ್ಯವೆಂದು ಕಿಟ್ಟೆಲ್ಲರು ಭ್ರಾಂತಿಗೊಂಡು ಅದನ್ನು ಕಪ್ಪಕ್ಷರಗಳಲ್ಲಿ ಅಚ್ಚಿಟ್ಟಿದ್ದಾರೆ. (೪)'ಉಲ್ಲ' ಎಂಬ ಮತ್ತೊಂದು ರೂಪವೂ ಪ್ರಾಕೃತದಲ್ಲಿ ಆರ್ದ್ರಕ್ಕೆ ಉಂಟು. ಉಲ್ಲವಿ, ಉಲ್ಲಣ> ಆರ್ದ್ರೀಕರಣ, ಉಲ್ಲಣಿಯಾ> ಆರ್ದ್ರಾಯಣಿಕಾ ಎಂಬಿತ್ಯಾದಿ ಶಬ್ದಗಳೂ ಪ್ರಾಕೃತ ಕೋಶದಲ್ಲಿ ದೊರೆಯುತ್ತದೆ : ಅರ್ಧಮಾಗಧಿ ಭಾಷೆಯಲ್ಲಿ ಉಲ್ಲಣ, ಉಲ್ಲಣಿಯಾ ಎಂಬ ಪದಗಳಿವೆ. (೫) 'ಒಲ್ಲ' ಎಂಬ ಇನ್ನೊಂದು ರೂಪಾಂತರವೂ ಉಂಟಾಗಿದೆ; ಒಲ್ಲ=ಅರ್ದ್ರ. ಹಾಲರಾಜನ ಗಾಥಾಸಪ್ತತಿ, ರಾವಣವಹ, ಸೇತುಬಂಧ, ಕರ್ಪೂರಮಂಜರಿ ಮುಂತಾದ ಗ್ರಂಥಗಳಲ್ಲಿ ಇಬ್ಬರ ಪ್ರಯೋಗವಿದೆಯೆಂದು ಪಿಷಲ್ ಅವರು ಹೇಳಿದ್ದಾರೆ.[1] 'ಅನಾರ್ದ್ರ'ವು ಅಣೊಲ್ಲವಾಗಿದೆ, ಪ್ರೇಮಾರ್ದ್ರವೆಂಬುದರಿಂದ 'ಪ್ರೇಮೊಲ್ಲ'ವಾಗಿದೆ. ಆರ್ದ್ರಿತವೆಂಬುದರಿಂದ ಒಲ್ಲೆಯ ರೂಪುಗೊಂಡಿದೆ. ಮರಾಠಿ ಭಾಷೆಯಲ್ಲಿ ಓಲಾಹಣವೇಣೇಂ < ಅರ್ದ್ರಯಣ (?) ಓಲಾಣೇ < ಅವಲಂಬನೀ (?)=ವಸ್ತ್ರ, ಓಲಾಣೇ (ಸ್ನಾನವೇಳೆಯಲ್ಲಿ

1 'ಮಹಾರಾಷ್ಟ್ರ ಶಬ್ದಕೋಶ'ವನ್ನು ನೋಡಿ; ಪ್ರಶ್ನಚಿಹ್ನಗಳು ನನ್ನವು; ಸಂದೇಹ ಸೂಚಕವಾಗಿವೆ.

ಉಪಯೋಗಿಸುವ ವಸ್ತ್ರ) <ಅದ್ರಯಣ(?)[2] ಓಲೇಟೇಂ (ತೇಂ) ಮೊದಲಾದ ಶಬ್ದಗಳು ಕಾಣುತ್ತವೆ. ಆದ್ದರಿಂದ ಒಲ್ಲ, ಓಲ ಎಂಬೆರಡು ರೂಪಾಂತರಗಳೂ ಅರ್ದ್ರ ಶಬ್ದಕ್ಕಿವೆಯೆಂಬುದು ವಿಶದವಾಗಿದೆ. ಪ್ರಕೃತ 'ಒಲ್ಲಣಿಗೆ' ಎಂಬಲ್ಲಿನ 'ಒಲ್ಲ' ಆರ್ದ್ರದ-ಉದ್ರದ' ಪ್ರಾಕೃತ ರೂಪಾಂತರವಾಗಿದ್ದು ಪ್ರಾಕೃತ ಭಾಷೆಗಳ ಮೂಲಕ ಕನ್ನಡಕ್ಕೆ ಬಂದಿದೆ ಎಂಬುದರಲ್ಲಿ ಸಂದೇಹ ಪಡಲು ಕಾರಣವಿಲ್ಲ.

ಇನ್ನು ಅಣಿಗೆ ಎಂಬ ಎರಡನೆಯ ಶಬ್ದ ; ಇದನ್ನು ಕುರಿತು ಶ್ರೀ ದೇಸಾಯಿಯವರು "ಅಣಿಗೆ ಅಣಿ ಎಂಬ ಮೂಲದಿಂದ ಬಂದಿದೆ. ಅಣಿಗೊಳಿಸುವುದು ಅಣಿಗೆ; ಅಣಿಗೆಯಲ್ಲಿ ಅಂದ, ಅನುರೂಪ, ಜೋಡಣೆ ಮುಂತಾದ ಅರ್ಥಗಳು ಅಡಕವಾಗಿವೆ. ಅಣಿಗೆಯಿಂದ ಅಣಿಗೊಂಡ ಅನೇಕ ಪದಗಳು ಕನ್ನಡದಲ್ಲಿವೆ. ಅಣಿಗೆಯೇ ಹಣಿಗೆ ಆಗಿದೆ; ಅಣಿಗೆಯ ಅಸ್ತಿತ್ವವನ್ನು ಮೆರವಣಿಗೆ, ಬಾಚಣಿಕೆ, ಬೀಸಣಿಕೆ, ಕೊಲ್ಲಣಿಗೆ, ಅಡ್ಡಣಿಗೆ ಮುಂತಾದ ಪದಗಳಲ್ಲಿ ಕಂಡುಹಿಡಿಯಬಹುದು" ಎಂದು ಮುಂತಾಗಿ ಬರೆದಿದ್ದಾರೆ. ಈ ಅಭಿಪ್ರಾಯಗಳನ್ನೆಲ್ಲ ಸತ್ಯಾನ್ವೇಷಣ ದೃಷ್ಟಿಯಿಂದ ಸೂಕ್ಷ್ಮವಾಗಿ ವಿಮರ್ಶಿಸುವುದು ಅವಶ್ಯಕ. ಅಣಿಗೆಯು ಅಣಿಯಿಂದ ಬಂದಿದ್ದರೆ 'ಗೆ' ಎಂಬುದು ಪ್ರತ್ಯಯವಾಗಬೇಕು; ಪಣ್ಣುಗೆ, ಬರ್ದುಗೆ, ಉಡುಗೆ, ಅಡುಗೆ ಮುಂತಾದವುಗಳಲ್ಲಿರುವ 'ಗೆ' ಎಂಬುದು ಕೃತ್ಪ್ರತ್ಯಯ; 'ಗೆ' ಎಂಬ ತದ್ಧಿತ ಪ್ರತ್ಯಯವಿರುವಂತೆ ಕಂಡುಬಂದಿಲ್ಲ. ಆದ್ದರಿಂದ ಅಣಿ ಕ್ರಿಯಾರ್ಥಕ ಧಾತುವಾಗಿರಬೇಕು. ಕೇಶಿರಾಜನ ಧಾತು ಪಾಠದಲ್ಲಿ ಅಣ ಎಂಬ ಅಕಾರಾಂತ ಧಾತುವಿದೆಯೇ ಹೊರತು ಅಣಿ ಎಂದು ಇಕಾರಾಂತವುಳ್ಳದ್ದು ಇಲ್ಲ; ಅಣಿದಂ, ಅಣಿದಪಂ, ಅಣಿವಂ ಮುಂತಾದ ಕ್ರಿಯಾಪದಗಳೂ, ಅಣಿದು ಮೊದಲಾದ ಕೃದಂತ ರೂಪಗಳೂ ಸಾಹಿತ್ಯದಲ್ಲಿ ಪ್ರಯೋಗವಾಗಿರುವಂತೆ ಶ್ರೀ ದೇಸಾಯಿಯವರು ತಿಳಿಸಿಲ್ಲ. ಅಣಿ ಧಾತುವಿನ ಅಸ್ತಿತ್ವಕ್ಕೆ ಅವರು ಪ್ರಮಾಣಗಳನ್ನು

---

2 ನೇಮಿನಾಥಪುರಾಣ, ೫-೩೬.

ಒದಗಿಸಿಲ್ಲ; ಇರಲಿ ಅಣಿ ಎಂಬ ಧಾತುವುಂಟು; ಅಣಿ ಉಂಟು; ಅಣಿ ಎಂಬುದೂ ಇದೆ ಕನ್ನಡದಲ್ಲಿ; "ಇಂದಣ್ಮೆಸಾಯಲ್ಕಣಿದೆಂ" ಎಂದು ನೇಮಿಚಂದ್ರನ ಪ್ರಯೋಗ. ತಮಿಳಿನಲ್ಲಿ ಅಣಿ ಎಂಬ ಅಕರ್ಮಕ ಧಾತು ವೊಂದಿದ್ದು ಅದಕ್ಕೆ ಸೊಗಸಾಗು, ಭೂಷಣವಾಗು, ಅಲಂಕಾರವಾಗು ಸಾಲಾಗು ಇವೇ ಮುಂತಾದ ಅರ್ಥಗಳಿವೆ. ಇದೇ ಅಕರ್ಮಕ ಧಾತು ಕನ್ನಡ ದಲ್ಲಿಯೂ ಇದ್ದಿತೆಂದು ಹೇಳುವುದಕ್ಕೆ ಅಣಿಗೆಯನ್ನೂ, ನೇಮಿಚಂದ್ರನ ಅಣಿದೆಂ ಎಂಬುದನ್ನೂ ಬಿಟ್ಟು ಬೇರೆ ಆಧಾರವಿಲ್ಲ. ಅಣಿಗೆ ಎಂಬುದು ಸೊಗಸು ಸಾಲು, ವರ್ಣನೆ, ಒಡವೆ, ಅಲಂಕಾರ ಮುಂತಾದ ಅರ್ಥವನ್ನು ಪಡೆದು ತಮಿಳಿನ ಅಣಿಕ್ಕಮ್ ಎಂಬುದಕ್ಕೆ ಸಮಾನವಾಗಿದೆ. ಆದ್ದರಿಂದ ಒಲ್ಲಿ+ಅಣಿಗೆ ಎಂಬುದಕ್ಕೆ ಒಲ್ಲಿಯ (=ಉತ್ತರೀಯದ) ಸೊಗಸು, ಅಲಂಕಾರ ಇತ್ಯಾದಿ ಅರ್ಥಗಳು ಏರ್ಪಡುತ್ತವೆ.

'ಒಲ್ಲಣಿಗೆಯನುಡಿಸಿ' ಒಲ್ಲಣಿಗೆಯಂ 'ಪಿಜಿುವಂತೆ' ಎಂಬ ಕವಿ ಪ್ರಯೋಗಗಳಿಗೆ ಉತ್ತರೀಯದ ಸೊಗಸನ್ನು ಉಡಿಸಿ. ಒಲ್ಲಿಯ ಸೊಗಸನ್ನು ಹಿಂಡುವಂತೆ ಎಂದು ಅರ್ಥವಿಸಬೇಕಾಗುತ್ತದೆ. ಒಲ್ಲಿಯನ್ನು ಉಡಬಹುದು, ಹಿಂಡುವುದು? ಹೀಗೆ ಅರ್ಥ ಮಾಡುವುದು ಪರಿಹಾಸ್ಯಕ್ಕೆಆಸ್ಪದವಾಗುತ್ತದೆ. ಆದ್ದರಿಂದ ಇಲ್ಲಿ ಕಾಣುವ ಅಣಿಗೆಯೆಂಬ ಶಬ್ದಕ್ಕೂ ಅಣಿಗೆಯೆಂಬ ಕೃಸ್ನಾಮಕ್ಕೂ ಸಂಬಂಧವಿಲ್ಲ. ಅದು ಬೇರೆ ಏನೋ ಇರಬೇಕು.

ಕನ್ನಡ ಕವಿಗಳು ಉದ್ರುದಿಂದ ಬಂದ ಒಲ್ಲವನ್ನು ಪ್ರಾಕೃತದಿಂದ ತೆಗೆದುಕೊಂಡು ಅದಕ್ಕೆ ಅಣಿಗೆ ಎಂಬ ಶುದ್ಧ ಕನ್ನಡ ಪದವನ್ನು ಸೇರಿಸಿ ಸಮಾಸ ಮಾಡಿಕೊಂಡರೆಂದು ಭಾವಿಸುವುದಕ್ಕಿಂತ ಸಂಸ್ಕೃತದ ಇಡೀ ಸಮಾಸ ವೊಂದನ್ನು ಕನ್ನಡಕ್ಕೆ ತದ್ಭವ ಮಾಡಿಕೊಂಡರೆಂದು ತಿಳಿಯುವುದು ಹೆಚ್ಚು ಸಂಗತ. ಹಾಗಾದರೆ ಆ ಸಮಾಸವೇನಿರಬಹುದು ? "ಪಟುಯೆಂದು ವಸ್ತ್ರ ವಿಶೇಷಮುಂ" ಎಂಬ ಕೇಶಿರಾಜನ ಮಾತಿನಲ್ಲಿರುವ ಪಟು-ಸಂಸ್ಕೃತದ ಪಟ್ ಎಂಬುದರಿಂದ ಜನ್ಯವಾದುದು; ಪಟ್ ಪಡಿ ಪಟು; ಸ್ವಾರ್ಥದಲ್ಲಿ ಇದಕ್ಕೆ ಸೇರುವ ಕ ಪ್ರತ್ಯಯ ಸಮೇತವಾಗಿ ಪಟುಗೆ ಎಂದಾಗುತ್ತದೆ. ಕಿಟ್ಟೆಲ್ ಅವರು ಪಟುಯ ಮೂಲವನ್ನು ಸರಿಯಾಗಿಯೇ ನಿರ್ದೇಶಿಸಿದ್ದಾರೆ. ಆ

ಸಮಾಸದ ಉತ್ತರ ಪದ ಪಟಿಕಾ> ಪಡುಗೆ ಆಗಿರಬೇಕು. ಉದ್ರಪಟಿಕಾ ಎಂಬುದರಿಂದ ಒಲ್ಲವಲುಗೆ ಎಂದಾಗಿ ಅದೇ ಕಾಲಕ್ರಮದಲ್ಲಿ ಸ್ವಲ್ಪ ಅರ್ಥ ವ್ಯತ್ಯಾಸವನ್ನುಹೊಂದಿ ಒಲ್ಲಣಿಗೆಯಾಗಿ ಪರಿಣಮಿಸಿದೆ. ಇದರ ಚರಿತ್ರೆಯನ್ನು ಹೀಗೆ ಕಾಣಿಸಬಹುದು:

ಉದ್ರಪಟಿಕಾ> ಒಲ್ಲವಡಿಗೆ> ಒಲ್ಲವಟುಗೆ> ಒಲ್ಲಳಿಗೆ> ಒಲ್ಲಣಿಗೆ. ಆದ್ದರಿಂದ ಒಲ್ಲಣಿಗೆಯು ಒಲ್ಲವೂ ಅಣಿಗೆಯೂ ಶುದ್ಧ ಕನ್ನಡ ಪದಗಳಲ್ಲ; ದೇಶ್ಯಶಬ್ದವಾದ ಅಣಿಗೆಯೇ ಬೇರೆ, ಇಲ್ಲಿನದೇ ಬೇರೆ. ಇಲ್ಲಿನ ಅಣಿಗೆ 'ಪಟಿಕಾ'ದ ಸವೆದ ರೂಪ. ಒಲ್ಲಣಿಗೆಯೆಂಬ ಕರ್ಮಧಾರೆಯ ಸಮಾಸದಲ್ಲಿ ಪೂರ್ವಪದವಾದ ಒಲ್ಲ ಉದ್ರವಿಶೇಷಣ; ಉತ್ತರಪದವಾದ ಅಣಿಗೆ ಪಟಿಕಾ ವಿಶೇಷ್ಯ. ಹೀಗೆಯೇ ಪಟ್ಟ ಪಟಿಕಾ ಎಂಬೊಂದು ಸಂಸ್ಕೃತ ಸಮಾಸದಿಂದ ಪಟ್ಟಳಿಗೆ, ಪಟ್ಟಣಿಗೆ ಎಂಬ ಶಬ್ದ ಸಂಜನಿಸಿರುವಂತೆ ಬೋಧೆಯಾಗುತ್ತದೆ.

ಶ್ರೀ ದೇಸಾಯಿಯವರು ಪ್ರಾಸಂಗಿಕವಾಗಿ ಹೇಳಿರುವ ಕೆಲವು ಅಭಿಪ್ರಾಯಗಳ ಸಾರಾಸಾರತೆಯನ್ನು ವಿಚಾರಿಸಬೇಕಾಗಿದೆ. (೧) "ಅಣಿಗೆಯೇ ಹಣಿಗೆ" ಆಗಿದೆ. ಹಣಿಗೆ> ಅಣಿಗೆಯಾಗುವುದು ಸ್ವಾಭಾವಿಕವೇ ಹೊರತು ಅಣಿಗೆ ಹಣಿಗೆಯಾಗುವುದಿಲ್ಲ. 'ಹಣಿಗೆ'ಯೆಂಬುದು ಕೂಡ ಅದಕ್ಕಿಂತ ಪ್ರಾಚೀನವಾದ 'ಪಣಿಗೆ' ಎಂಬುದರಿಂದ ಬಂದದ್ದು. ದುಶ್ಶಾಸನನ ಎದೆಯ ರಕ್ತವನ್ನು ದ್ರೌಪದಿಯ ಜಡೆಗಟ್ಟಿದ ಮುಡಿಯ ಮೇಲೆ ಭೀಮಸೇನ ಸುರಿದು ಕುರುಳ ಸಿಕ್ಕನ್ನು ತನ್ನ "ವೈರಿಯ ಪಲ್ಲಪಣಿಗೆಯಿಂ ಬಾರ್ಚಿ"ದನೆಂದು ಪಂಪನ ವರ್ಣನೆ.[1] ಈ ಶಬ್ದ ಕಿಟ್ಟೆಲ್ ಅವರ ಕೋಶದಲ್ಲಿ ಕಾಣುವುದಿಲ್ಲ. ಅದನ್ನೂ ಸೇರಿಸಿಕೊಂಡರೆ ಪಣಿಗೆ> ಹಣಿಗೆ> ಅಣಿಗೆ ಎಂಬ ಈ ದಿಕ್ಕಿನಲ್ಲಿ ರೂಪ ವ್ಯತ್ಯಾಸಗಳಾಗಿರುವುದು ಸಹಜವೆಂದೂ, ಎದುರು ದಿಕ್ಕಿನ ವ್ಯತ್ಯಾಸ ಅಸಹಜವೆಂದೂ ಹೇಳಬಹುದು. ಬಾರ್ಚು <ಬಾಚು+ಹೆಣಿಗೆ—ಬಾಚಹಣಿಗೆ ಆಗಿ ಅನಂತರ ಬಾಚಣಿಗೆ ಆಗಿದೆ; ಸೀರಣಿಗೆಯೂ ಇಂತೆಯೇ ರೂಪುಗೊಂಡಿದೆ. ೨) "ಅಣಿಗೆಯ ಅಸ್ತಿತ್ವವನ್ನು ಮೆರವಣಿಗೆ, ಬಾಚಣಿಕೆ, ಬೀಸಣಿಕೆ,

---

1 ಪಂಪಭಾರತ, ೧೨–೧೫೫.

ಕೊಲ್ಲಣಿಗೆ, ಅಡ್ಡಣಿಗೆ ಮುಂತಾದುವುಗಳಲ್ಲಿ ಕಂಡುಹಿಡಿಯಬಹುದು." ಈ ಅಭಿಪ್ರಾಯ ಮೇಲುನೋಟಕ್ಕೆ ರಮಣೀಯ, ಒಳಹೊಕ್ಕು ನೋಡಿದರೆ ಬರಿ ಮಾಯೆ ಮೆಱುವಣಿಗೆ> ಮೆರವಣಿಗೆ ಎಂಬಲ್ಲಿ 'ವಣಿಗೆ' ಎಂಬುದು ಮೆಱು ಯೆಂಬ ಕ್ರಿಯಾರ್ಥಕ ಧಾತುವಿಗೆ ಸೇರಿರುವುದರಿಂದ ಅದು ಕೃತ್ಪ್ರತ್ಯಯ ವಾಗಿರಬೇಕು. ಹೀಗೆಯೇ "ನೆಱೆವಣಿಗೆಗುಂದಿತ್ತು ಬಲ ಕೈಮೈಮಱೆ ದರದಟರು" ಎಂಬ ಕುಮಾರವ್ಯಾಸನ ಸೂಕ್ತಿಯಲ್ಲಿ ಕಾಣುವ 'ನೆಱೆವಣಿಗೆ' ಯಲ್ಲಿಯೂ ಇರುವ ಪ್ರತ್ಯಯ'ವಣಿಗೆ''ಅಣಿಗೆ'ಯಲ್ಲ. ಬಾಚಣಿಕೆಯ ವಿಷಯ ವನ್ನುಹಿಂದೆ(೧)ರಲ್ಲಿಯೇ ಹೇಳಿದೆ.ಬೀಸಣಿಕೆ(ಗೆ)ಎಂಬ ಶಬ್ದದ ನಿಷ್ಪತ್ತಿಕೊಂಚ ತೊಡಕಾದದ್ದು. ಅದು ಬೀಸು (ತ. ವೀಶು; ತೆ. ವೀಚು; ಮ. ವೀಚುಕ) ಎಂಬ ಕನ್ನಡದ ಕ್ರಿಯಾರ್ಥಕ ಧಾತುವಿನಿಂದ ಸಿದ್ಧವಾದ ಪದವಾಗಿದ್ದರೆ ಆಗ ಅದರಲ್ಲಿನ ಅಣಿಕೆ(ಗೆ) ಎಂಬುದು ಕೃತ್ಪ್ರತ್ಯಯವಾಗಿರಬೇಕು; ಆ ಪ್ರತ್ಯಯ ವನ್ನು ಕನ್ನಡ ವ್ಯಾಕರಣಗಳು ಎಲ್ಲಿಯೂ ಹೇಳಿಲ್ಲ. ಅಣಿಗೆ (ಗೆ) ಕೃನ್ನಾಮ ವೆಂದು ಹೇಳುವುದಾದರೆ ಆಗ ಬೀಸು ಎಂಬ ಕ್ರಿಯಾಧಾತುವಿಗೆ ಅಣಿಗೆ ಸೇರಿ ಸಮಾಸವಾಗಿರಬೇಕು. ಹಾಗಿದ್ದರೆ ಅದರ ಅರ್ಥ ಬೀಸುವ ಸೊಗಸು ಇತ್ಯಾದಿ ಆಗುತ್ತದೆಯೇ ವಿನಾ ಬೀಸಿಕೊಳ್ಳುವ ಉಪಕರಣವಾಗುವುದಿಲ್ಲ. ಆದ್ದರಿಂದ 'ಬೀಸಣಿಗೆ'ಗೂ ಬೀಸು ಎಂಬ ಅಚ್ಚಗನ್ನಡ ಕ್ರಿಯಾಧಾತುವಿಗೂ ಯಾವ ಸಂಬಂಧವೂ ಇಲ್ಲ. ಸಂಸ್ಕೃತದ ವೀಜ್ (ವಿಜ್) ಎಂಬ ಧಾತುವಿನಿಂದ (ಅರ್ಥ ಗಾಳಿಹಾಕು ಇತ್ಯಾದಿ) ಹುಟ್ಟಿರುವ ವೀಜನ (ನಿಕಾ) ಎಂಬ ಶಬ್ದದಿಂದ ಬೀಸಣಿಗೆ ಬಂದಿದೆ; ಬೆಜ್ಜಣಿಗೆ ಎಂಬ ಆ ಪದದ ಇನ್ನೊಂದು ರೂಪ ಅದು ಮೇಲ್ಕಂಡ ಸಂಸ್ಕೃತ ಧಾತುವಿನಿಂದ ಬಂದದ್ದೆಂಬುದನ್ನು ಸ್ಪಷ್ಟವಾಗಿ ತೋರಿಸುತ್ತಿದೆ. ಕೊಲ್ಲಣಿಗೆ : 'ಅಣಿಗೆ'ಯೆಂಬ ಕೃತ್ಪತ್ಯಯವೇ ಇಲ್ಲದಿರು ವುದರಿಂದ ಕೊಲ್ಲಣಿಗೆಯನ್ನು ಕೃನ್ನಾಮವಾಗಿ ಭಾವಿಸುವಂತಿಲ್ಲ. ಅದು ಕೊಲ್+ಅಣಿಗೆಯಿಂದಾದ ಸಮಾಸವಾಗಿದ್ದ ಪಕ್ಷದಲ್ಲಿ ಕೊಲ್ಲುವ ಸೊಗಸು, ಜೋಡಣೆ ಮುಂತಾದ ಅರ್ಥವಾಗುತ್ತದೆಯೇ ಹೊರತು ಅದಕ್ಕೆ ಪ್ರಚುರ ವಾಗಿರುವ ಆಟವೆಂಬರ್ಥ ಬರುವುದಿಲ್ಲ. ಅದನ್ನು ಕೋಲಣಿಗೆ ಎಂದೂ ಭಾವಿಸಲಾಗುವುದಿಲ್ಲ. ಏಕೆಂದರೆ ಅಣಿಗೆ ಎಂಬ ತದ್ಭವ ಪ್ರತ್ಯಯವಿಲ್ಲ; ಕೋಲ್+ಅಣಿಗೆಯಿಂದಾದ ಸಮಾಸವೆಂದು ಹೇಳುವುದಾದರೆ ಆಗ ಕೋಲಿನ

ಅಲಂಕಾರ ಇತ್ಯಾದಿ ಅರ್ಥವಾಗುತ್ತದೆಯೇ ಹೊರತು ಆಟವಾಗುವುದಿಲ್ಲ,ಆದ್ದರಿಂದ ಕೊಲ್ಲಣಿಗೆ ಎಂಬ ಶಬ್ದ ಕನ್ನಡದ ಕೊಲ್,ಕೋಲ್ ಎಂಬೀ ಧಾತುಮೂಲಗಳಿಂದ ಬಂದಿಲ್ಲವೆಂದು ಹೇಳಬಹುದು. ಸಂಸ್ಕೃತದ> ಖೋರ್, ಖೋಲ್ (ಅರ್ಥ, ಕುಂಡು) ಎಂಬೀ ಧಾತುವಿನಿಂದ ಖೋಲ (ಕುಂಟಾಟ, ಕುಂಟುವಿಕೆ) ಇದಕ್ಕೆ ಗ್ರೀಕಿನಲ್ಲಿ ಸಗೋತ್ರ ಶಬ್ದವಿದೆ-ಎಂಬ ಶಬ್ದವುಂಟಾಗಿ, ಅದು ಖೇಲನ, ಖೇಲಕನ ಎಂಬುವುಗಳಂತೆ ಖೋಲನ, ಖೋಲನಕವಾಗಿ ಆದರಿಂದ ಕೊಲ್ಲಣಿಗೆ ಎಂಬ ಶಬ್ದ ಬಂದಿದೆ; ಕುಂಟಾಟ ಎಂಬ ಸಂಕುಚಿತಾರ್ಥ ಹೋಗಿ ಆಟವೆಂಬ ವಿಸ್ತಾರಾರ್ಥ ಪ್ರಾಪ್ತವಾಗಿದೆ. ಅಡ್ಡಣಿಗೆಯೆಂಬುದನ್ನೂ ಶುದ್ಧ ಕನ್ನಡವೆಂದು ಹೇಳಲಾಗುವುದಿಲ್ಲ. ಅದಕ್ಕೆ ತಮಿಳು, ತೆಲುಗು ಮುಂತಾದ ದ್ರಾವಿಡ ಭಾಷೆಗಳಲ್ಲಿ ಸಂವಾದಿಯಾದ ಪದವಾಗಲಿ, ಧಾತುಮೂಲವಾಗಲಿ ದೊರೆಯುವ ಹಾಗಿಲ್ಲ. ಅದು ಅನ್ಯದೇಶ್ಯವಿರಬಹುದು. ಸಂಸ್ಕೃತದ ಸ್ಥಾನ ಸ್ಥಾಪನ ಮುಂತಾದ ಶಬ್ದಗಳ ಆದ್ಯಕ್ಷರ ಪ್ರಾಕೃತದಲ್ಲಿ ಠಕಾರಾಗುವುದು ಸಾಮಾನ್ಯ ವ್ಯಾಪಾರ; ಠಾಣ, ಠವಣೆ ಮುಂತಾದ ಕನ್ನಡದಲ್ಲಿರುವ ತದ್ಭವ ಶಬ್ದಗಳಲ್ಲೂ ಆ ಠಕಾರವನ್ನು ನೋಡಬಹುದು. ಕನ್ನಡದ ಕಾವ್ಯಗಳಲ್ಲೂ ಶಾಸನಗಳಲ್ಲೂ ಠವಣೆಕೋಲ್ ಎಂಬ ಶಬ್ದವನ್ನು ಕ್ವಚಿತ್ತಾಗಿ ಕಾಣುತ್ತೇವೆ :

ಸೆಳೆಮಂಚದ ಕಾಲೆಂಬ ಠವಣಕೋ
ಲೊಳಗೊಪ್ಪುವ ಪಾನೆಂಬ ಕವಳಿಗೆಯೊ
ಳೆಳಚೌವನೆಯುವಯುವಮೆಂದೆಂಬ ಲಸತ್ಪುಸ್ತಕದೊಳಗೆ ।

ಎಂದು ಮಂಗರಸನೂ[1]

ಶ್ರೀತರತ್ನಪೀಠವಾಲಂ
ಚಿತಲಂಬನಸಮಿತಿ ನಾಲು ಮನುಯೋಗದ ಸಂ
ಗತಿಯೆನೆ ಮಣಿಖಚಿತಮದೇ
ನತಿಶಯಮಾದತ್ತೋ ಠವಣೆಕೋಲ್ ಯತಿಪತಿಯಾ ।

ಎಂದು ನಾಗಚಂದ್ರನೂ[2] ಬರೆದಿದ್ದಾರೆ. ಪುಸ್ತಕಾದಿಗಳನ್ನು ಇಟ್ಟುಕೊಳ್ಳುವುದಕ್ಕಾಗಿ ಉಪಯೋಗಿಸುವ ನಾಲ್ಕು ಕಾಲುಗಳುಳ್ಳ ಪೀಠವೊಂದು ಈ

---

1 ಜಯನೃಪಕಾವ್ಯ—೮-೫೩

2 ಮಲ್ಲಿನಾಥಪುರಾಣ, ೧೦-೧೩೪

ಶಬ್ದಕ್ಕರ್ಥವೆಂಬುದಾಗಿ ಫ್ಲೀಟ್ ಅವರು ಪ್ರತಿಪಾದಿಸಿದ್ದಾರೆ.[3] ಇದು ನೇರವಾಗಿ ಮೇಲಿನ ಪ್ರಯೋಗಗಳಿಗೆ ಹೊಂದಿಕೊಳ್ಳುತ್ತದೆ. ಭೀಷ್ಮನ ಶರಶಯನ ವರ್ಣಿಸುತ್ತ ಪಂಪನು "ಅಟ್ಟವಣಿ ಕೋಲ್ಗಳ ಮೇಲೆನೆದಿರ್ದ ವೀರಸಿದ್ಧಾಂತದ ಶಾಸನಂ ಬರೆದ ಪೊತ್ತಗೆಯಂತಮ ರಾಪಗಾತ್ಮಜಂ" ಮೆರೆದನೆಂದು ಹೇಳಿದ್ದಾನೆ.[1] ತವಣಿಕೋಲ್, ಅಟ್ಟವಯಕೋಲ್ ಎಂಬೀ ಎರಡು ಶಬ್ದಗಳೂ ಸಮಾನಾರ್ಥಕಗಳೆಂದು ಮೇಲಿನ ಪ್ರಯೋಗಗಳಿಂದಲೇ ಸ್ಪಷ್ಟವಾಗಿದೆ. ತವಣಿಗೆ ಮೂಲ ಸ್ಥಾಪನ ಶಬ್ದವಾಗಿರುವುದರಿಂದ ಅಟ್ಟವಣಿಗೆ ಮೂಲ ಆಸ್ಥಾಪನವೆಂದು ನೇರವಾಗಿ ಹೊಳೆಯುತ್ತದೆ. ಪಾಲೀ ಭಾಷೆಯಲ್ಲಿರುವ ಅಟನೀ (ಮರಾಠಿ, ಅಡಣಿ=ಮುಕ್ಕಾಲಿನ ಪೀಠ; a support, a stand inserted under the leg of a bedstead) ಎಂಬುದೂ ಅಟ್ಠಾಣ> ಅ + ಟ್ಠಾಣ (ಅರ್ಥ, Stand post) ಎಂಬುದೂ ಮೇಲೆ ಸೂಚಿಸಿರುವ ನಿಷ್ಪತ್ತಿಗೆ ಪುಷ್ಟಿಕೊಡುತ್ತವೆ. ಆದ್ದರಿಂದ ಅಡ್ಡಣಿಗೆಯ ಚರಿತ್ರೆ ಕನ್ನಡದಲ್ಲಿ ಹೀಗೆ :

ಆಸ್ಥಾಪನ (ನಿ) ಕ > *ಆತವಣಿಗೆ > ಅಟ್ಟವಣಿಗೆ < ಅಡ್ಡವಣಿಗೆ < ಅಡ್ಡಣಿಗೆ. ಇಂತು, ಶ್ರೀ ದೇಸಾಯಿಯವರು ಕೊಟ್ಟಿರುವ ಅವೆಲ್ಲ ಶಬ್ದ

---

3 "An arrangement of four Sticks fastened together in the middle, and then opened out after the fashion of a folding camp-stool, so as to stand upright on the ground and support a book laid flat on the upper ends" I.A.XII, p. 99.

1 ಪಂಪಭಾರತ, ೧೧–೬೬.

* ಈ ಶಬ್ದಕ್ಕೆ ಅರ್ಥ ಹೂವಿನ ಅಲಂಕಾರವನ್ನು ಮಾಡುವ ಚೌಕಟ್ಟು ಎಂದು ಶ್ರೀ ದೇಸಾಯಿಯವರು ಹೇಳುತ್ತಾರೆ. ಇದು ಶಿಲ್ಪಶಾಸ್ತ್ರದಲ್ಲಿ ಕಾಣುವ ಪುಷ್ಪಪಟ್ಟ ಎಂಬ ಶಬ್ದದ ರೂಪಾಂತರವೆಂದು ಹೇಳಬಹುದು; ಇದರ ಅರ್ಥ ಒಂದು ವಿಧವಾದ ಕಿರೀಟ. ಪಟ್ಟಬಾಚ್ ವರ್ಗದ ದೊರೆಗಳು ಇದನ್ನು ಧರಿಸುತ್ತಿದ್ದರು; ಕೆಲವು ದೇವತೆಗಳಿಗೆ ಇಂತಹ ಕಿರೀಟಗಳನ್ನು ಶಿಲ್ಪ

ಗಳನ್ನೂ ವಿಮರ್ಶೆ ಮಾಡಿ ನೋಡಿದಾಗ ಅವರ ಅಭಿಪ್ರಾಯ ಸಾಧುವಲ್ಲವೆಂದು ಕಂಡುಬರುತ್ತದೆ; ಆ ಶಬ್ದಗಳಲ್ಲಿ ಯಾವುದರಲ್ಲೂ ಅಣೆಯಿಂದ ಅಣಿಗೊಂಡ ಅಣೆಗೆಯನ್ನು ಕಾಣಲಾಗದು. ಮುಂದೆ ಹೂವಣಿಗೆ ಎಂದು ಅವರೇ ಕೊಟ್ಟಿರುವ ಒಂದು ಶಬ್ದದಲ್ಲಿ ಮಾತ್ರ ಹೂದೊಡಿಗೆ. ಹೂವಿನಲಂಕಾರ ಎಂಬರ್ಥವನ್ನು ಕೊಡುವ ಅಣೆಗೆ ಶಬ್ದವಿರುವಂತೆ ತೋರುತ್ತದೆ.

ಕನ್ನಡನುಡಿ; ಸಂಪುಟ ೧೫

---

ದಲ್ಲಿ ಕೆತ್ತುತ್ತಿದ್ದರು. The head dress of God and Kings"—ಎಂದು ಇದರ ವಿವರಣೆ. ಜಟಾ, ಮೌಳಿ, ಕಿರೀಟ, ಕರಂಡ, ಶಿರಸ್ತ್ರಕ, ಕುಂಡಲ, ಕೇಶಬಂಧ, ಧಮ್ಮಿಲ್ಲ, ಅಲಕ, ಚೂಡ, ಮಕುಟ, ಪಟ್ಟ—ವಿವಿಧವಾದ ಶಿರೋವೇಷ್ಟನಗಳಿದ್ದವು. ಇವುಗಳಲ್ಲಿ ಕೊನೆಯದಾದ 'ಪಟ್ಟ'ವು ಪತ್ರಪಟ್ಟ, ರತ್ನಪಟ್ಟ, ಪುಷ್ಪಪಟ್ಟ—ಎಂದು ಮೂರು ಬಗೆಯಾಗಿತ್ತು. (Indian Architecture, P. K. Acharya, p. 65). 'ಪುಷ್ಪಪಟ್ಟ' ಶಬ್ದವನ್ನು ಪಂಪನು ತನ್ನ ಭಾರತದ ಮೊದಲ ಮಂಗಳ ಪದ್ಯದಲ್ಲಿ ಬಳಸಿದ್ದಾನೆ. ಇದು ಕೆಟ್ಟು ಪುಷ್ಪವೃಷ್ಟಿ, ಪುಷ್ಪದೃಷ್ಟಿ—ಎಂಬ ಪಾಠಭೇದಗಳಾಗಿವೆ. ಪುಷ್ಪಪಟ್ಟ = ಪುಷ್ಪಪಟಿಕಾ = ಹೂವಣಿಗೆ ಎಂದು ನಿಷ್ಪತ್ತಿಯನ್ನು ನಿಶ್ಚಯಿಸಬಹುದು. ಒಂದು ತೆರನಾದ ಶಿರೋವೇಷ್ಟನ ಅಥವಾ ಕಿರೀಟ ಎಂದು ಅದರ ಅರ್ಥ. ಹೀಗೆಯೇ ರತ್ನಪಟ್ಟ ಎಂಬ ಶಬ್ದವೂ ಒಂದು ಕನ್ನಡ ಶಾಸನದಲ್ಲಿ "ರತ್ನೋದ್ಭಪಟ್ಟಮೆಂಬಂತಿರೆ" ಎಂಬೆಡೆಯಲ್ಲಿ ದೊರೆಯುತ್ತದೆ. ಹೂವಣಿಗೆ ಎಂಬ ಶಬ್ದದಲ್ಲೂ 'ಅಣೆಗೆ' ಶಬ್ದವಿಲ್ಲ.

# ಕನ್ನಡಕ್ಕೆ ಹೊಸ ನಿಘಂಟು

---

ಕನ್ನಡ ಕಾವ್ಯಗಳನ್ನು ಅಭ್ಯಾಸ ಮಾಡುವವರಿಗೆ ನಾನಾ ತೆರನಾದ ಸಹಾಯವನ್ನು ಹಿಂದಿನವರೂ ಇಂದಿನವರೂ ಮಾಡಿಕೊಟ್ಟಿದ್ದಾರೆ, ಕೊಡುತ್ತಲಿದ್ದಾರೆ. ವ್ಯಾಕರಣ, ಛಂದಸ್ಸು, ಅಲಂಕಾರ, ನಿಘಂಟು, ಕಾವ್ಯ ಸ್ವರೂಪ ನಿರೂಪಣೆ–ಮುಂತಾದ ಲಕ್ಷಣ ಶಾಸ್ತ್ರಗಳಲ್ಲಿ ನಮ್ಮವರು ಹಿಂದಿನಿಂದಲೂ ಆಸಕ್ತಿವಹಿಸಿ ಹಲವು ಗ್ರಂಥಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಪ್ರಕೃತ ನಮಗೆ ಬೇಕಾಗಿರುವುದು ನಿಘಂಟು. ಹಿಂದಿನ ನಿಘಂಟುಗಳನ್ನೂ ಕೇಶಿರಾಜನ ಧಾತು ಪಾಠವನ್ನೂ ಕಾವ್ಯಗಳಲ್ಲಿ ಅಲ್ಲಲ್ಲಿ ಕಾಣುವ ಅಪರೂಪವಾದ ಸಾವಿರಾರು ಪದಗಳನ್ನೂ ಎಚ್ಚರಿಕೆಯಿಂದ ಕಲಿತು ಕಣ್ಣಿಟ್ಟು ವಿಚಾರ ಮಾಡಿ ಹದಿನೈದು ವರ್ಷಗಳ ಕಾಲ ಒಂದೇ ಸಮನೆ ದುಡಿದು ಕನ್ನಡಕ್ಕೆ ಒಂದು ಕೋಶವನ್ನು ಮಾಡಿದ ಕೀರ್ತಿ ಡಾ॥ ಕಿಟ್ಟೆಲ್ ಅವರಿಗೆ ಸೇರಿದ್ದು. ಅದು ಪ್ರಕಟವಾಗಿ ನಲವತ್ತಾರು ವರ್ಷಗಳು ಉರುಳಿಹೋಗಿದ್ದರೂ ಅದನ್ನು ಮೀರಿಸುವ ಬೇರೊಂದು ಗ್ರಂಥ ಇದುವರೆಗೂ ಕನ್ನಡದಲ್ಲಿ ಹುಟ್ಟಿಲ್ಲ. ಅಂಥ ಮತ್ತೊಂದು ನಿಘಂಟುವಿಗೆ ಆವಶ್ಯಕತೆ ಇಲ್ಲವಾದ್ದರಿಂದ ಹುಟ್ಟಲಿಲ್ಲ ಎಂದು ಕುಂಟು ನೆಪವನ್ನು ಹೂಡಿ ಕುಳಿತುಬಿಡುವುದು ಸುಲಭವಾದ ಕೆಲಸ. ಹಿಂದಿನ ಕಾವ್ಯಗಳನ್ನು ಮೊದಲಿನಿಂದ ಕಡೆಯುವರೆಗೂ ಓದಿ ಯಾವ ಪದಕ್ಕೂ

ಬಿಡದೆ ಅರ್ಥವನ್ನು ತಿಳಿಯಲೇ ಬೇಕೆಂದು ಹಠತೊಟ್ಟು ಹೊರಟವರಿಗೆ ಮಾತ್ರ ಹೊಸ ನಿಘಂಟು ಒಂದು ಇದ್ದಿದ್ದರೆ ಚೆನ್ನಾಗಿತ್ತಲ್ಲ ಎಂದು ಅಡಿಗಡಿಗೆ ಹೇಳಬೇಕಾದ ಅವಸ್ಥೆ ಬಂದಿದೆ. ಡಾಕ್ಟರ್ ಕಿಟ್ಟೆಲ್ಲರ ಕೋಶ ಅಪೂರ್ಣವಾದದ್ದೆಂಬ ತಿಳಿವಳಿಕೆ ಅಂಥವರಿಗೆ ಅನಿವಾರ್ಯವಾಗಿ ಆಗ ಬರಲೇಬೇಕು. ಅದು ಅಪೂರ್ಣವಾಗಿದ್ದರೂ ಅದರಿಂದ ಕನ್ನಡ ಕಲಿಯುವವರಿಗೆ ಇದುವರೆಗೆ ಆಗಿರುವ, ಮುಂದೆ ಆಗುವ ಸಹಾಯವು ಎಲ್ಲರೂ ಕೃತಜ್ಞತೆಯಿಂದ ನೆನೆಯುವಂಥದು. ಕನ್ನಡ ವಿದ್ವತ್ತಿನ ಒಂದು ಭಾಗವಾದ ಶಬ್ದಾರ್ಥ ಜ್ಞಾನಕ್ಕೆ ಆ ಕೋಶ ಬಹಳ ಸಹಕಾರಿಯಾಗಿದೆ. ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ, ತಕ್ಕಮಟ್ಟಿನ ವಿದ್ವತ್ತನ್ನು ಗಳಿಸುವುದಕ್ಕೂ ಅದು ಸಾಕು ಎಂದು ತೀರ್ಮಾನಿಸಬಹುದು.

ಈ ಕೋಶ ಅಪೂರ್ಣವಾಗಿರುವುದಕ್ಕೆ ಒಂದೆರಡು ಕಾರಣಗಳನ್ನು ಸೂಚಿಸಬಹುದು. ಈಗ ಸಿಕ್ಕಿ ಅಚ್ಚಾಗಿರುವ ಹಲವು ಕಾವ್ಯಗಳು ಅವರ ಕಾಲದಲ್ಲಿ ಇನ್ನೂ ಅಜ್ಞಾತವಾಸದಲ್ಲಿದ್ದುವು. ಅವುಗಳಲ್ಲಿ ಅಡಗಿರುವ ಅಪೂರ್ವವಾದ ಪದಗಳ ಗಂಧ ಕೂಡ ಆ ಕಾಲದ ಗಾಳಿಯಲ್ಲಿ ತೇಲುತ್ತಿರಲಿಲ್ಲ. ತಮಗೆ ದೊರೆತ ಕಾವ್ಯಗಳಿಂದ ಡಾ. ಕಿಟ್ಟೆಲ್ ಅವರು ಪದಗಳನ್ನು ಅರ್ಥವಿವರಣೆಗಾಗಿ ಆರಿಸಿಕೊಳ್ಳುವಾಗ ಅನೇಕ ಪದಗಳನ್ನು ನೋಡಿಯೂ ಕೈಬಿಟ್ಟರು, ಅವುಗಳ ಅರ್ಥ ಸ್ಪಷ್ಟವಾಗಿ ತಿಳಿಯದೇ ಇದ್ದದ್ದೂ ಅದನ್ನು ಹುಡುಕುತ್ತ ಕುಳಿತುಕೊಂಡರೆ ಇನ್ನೂ ಹೆಚ್ಚು ಕಾಲ ಹಿಡಿಯುತ್ತದೆಂಬುದೂ ಅವರು ಹೀಗೆ ಮಾಡಿದ್ದಕ್ಕೆ ಕಾರಣವಾಗಿರಬೇಕು. ಅವರು ಮಾಡಿರುವಷ್ಟು ಕೆಲಸಕ್ಕೆ ಅವರ ಬದುಕು ಕೊನೆಮುಟ್ಟಬೇಕಾಯಿತು. ಮೇಲಾಗಿ ಅವರದು ವ್ಯಕ್ತಿಯ ಪ್ರಯತ್ನ. ತಮಗೆ ನೆರವಾದವರನ್ನು ಅವರು ಎದೆತುಂಬಿ ಹೊಗಳಿದ್ದರೂ ಅದನ್ನು ತೃಪ್ತಿಕರವಾಗಿ ಸಾಧಿಸುವ ಪ್ರಯತ್ನವೆಲ್ಲ ಅವರದೇ. ತಮ್ಮ ಕೋಶದಲ್ಲಿರುವ ದೋಷವನ್ನೂ, ಕೊರತೆಯನ್ನೂ ಅವರು ಚೆನ್ನಾಗಿ ತಿಳಿದವರಾಗಿದ್ದರು. "ಶಬ್ದಪಾರಮಾರ್ಗಮಸಾಧ್ಯಂ" ಎಂಬ ಕೇಶಿರಾಜನ ಉಕ್ತಿ ಅವರಿಗೆ ಚಿರಪರಿಚಿತವಾಗಿತ್ತು. ಈ ಕಾರಣಗಳಿಂದ ಅವರ ಕೋಶ ಕನ್ನಡ ಶಬ್ದಭಂಡಾರವನ್ನೆಲ್ಲ ತೆರೆದು ವಿವರಿಸಲು ಅಸಮರ್ಥವಾಯಿತು. ಅವರು ಮಾಡಿರುವ ಕೆಲಸವನ್ನು ಮುಂದುವರಿಸುವುದು ಕನ್ನಡಿಗರ ಮೇಲೆ ಬಿದ್ದಿರುವ ಹೊರೆ. ಅವರು ನಮಗೆ ದಾರಿತೋರಿಸಿದ್ದಾರೆ; ಅದನ್ನೇ ನಾವೂ ಹಿಡಿಯಬೇಕಾಗಿದೆ.

ಡಾ|| ಕಿಟ್ಟೆಲ್ ಅವರ ಕ್ರಮ ಬಹುಮಟ್ಟಿಗೆ ಶಾಸ್ತ್ರೀಯವಾದದ್ದು. ಕೆಲವು ಪದಗಳಿಗೆ ಹಿಂದಿನ ನಿಘಂಟುಗಳಿಂದ ಅರ್ಥ ತಿಳಿದುಬಂದಿರುವುದೇನೊ ನಿಜ. ಆದರೆ ಕವಿಗಳು ಅವನ್ನು ಬಳಸುವಾಗ ಅವುಗಳ ಪ್ರಸಿದ್ಧಾರ್ಥಕ್ಕಿಂತ ತುಸು ಭಿನ್ನವಾದ ಬೇರೆ ಬೇರೆ ಬಣ್ಣದ ಅರ್ಥಗಳಲ್ಲಿ ಪ್ರಯೋಗ ಮಾಡಿದ್ದಾರೆ. ಆದ್ದರಿಂದ ಅಂಥ ಪ್ರಯೋಗಗಳನ್ನು ಮೊದಲು ಹುಡುಕಬೇಕು. ಅಪೂರ್ವವಾದ ಪದಗಳಿಗೂ ಹೀಗೆಯೇ. ಬೇರೆ ಬೇರೆ ಸಂದರ್ಭಗಳಲ್ಲಿ ಹೇಗೆ ಯಾವ ಅರ್ಥದಲ್ಲಿ ಪದಗಳನ್ನು ಕವಿಗಳು ಉಪಯೋಗಿಸಿರಬಹುದೆಂಬುದನ್ನು ತಿಳಿಯಬೇಕಾದರೆ ಅವರ ಕಾವ್ಯಗಳಲ್ಲಿ ಮಿನುಗುವ ಅವರ ಪ್ರಯೋಗಗಳೇ ಶರಣು. ಸಾಧ್ಯವಾದಾಗಲೆಲ್ಲ ಡಾ. ಕಿಟ್ಟೆಲ್ಲರು ಪ್ರಯೋಗಗಳನ್ನು ತೋರಿಸಿದ್ದಾರೆ. ಹೀಗೆ ಅವುಗಳನ್ನು ಕೂಡಿ ಹಾಕಿದ ಮೇಲೆ ಅರ್ಥವಿಚಾರಕ್ಕೆ ಹೊರಟಿದ್ದಾರೆ. ಆಮೇಲೆ ಪದದ ಮೂಲವನ್ನು ಬೆದಕಿ ಕಂಡುಹಿಡಿಯಲು ಪ್ರಯತ್ನ ನಡೆಯಬೇಕು. ಅದು ಕನ್ನಡವಾಗಿದ್ದಲ್ಲಿ ಯಾವ ಧಾತುವಿನಿಂದ ನಿಷ್ಪನ್ನವಾದದ್ದು; ಇತರ ದ್ರಾವಿಡ ಭಾಷೆಗಳಲ್ಲಿ ಅವು ಇರುವುವೆ; ಅಲ್ಲಿ ಅದಕ್ಕೆ ಯಾವ ಅರ್ಥವಿದೆ; ಸಂಸ್ಕೃತ ಪ್ರಾಕೃತಗಳಿಂದ ಅದು ಬಂದಿರಬಹುದೆ ; ಬೇರೆ ಯಾವುದಾದರೂ ಭಾಷೆಯಿಂದ ಅದು ಸಾಲವಾಗಿ ಬಂದದ್ದೆ – ಎಂಬೀ ವಿಚಾರಗಳನ್ನೆಲ್ಲ ಎಚ್ಚರಿಕೆಯಿಂದ ನಡೆಸಬೇಕು. ಒಟ್ಟಿನಲ್ಲಿ ಆ ಪದದ ಚರಿತ್ರೆಯನ್ನು ತೆಗೆದು ತೋರಿಸುವುದು ಮುಖ್ಯವಾದ ಕೆಲಸ; ಇದಕ್ಕೆ ಶಬ್ದಾರ್ಥ ಶಾಸ್ತ್ರದ (Semantics) ಪರಿಚಯ ಅವಶ್ಯಕ. ಡಾ. ಕಿಟ್ಟೆಲ್ ಅವರು ಈ ಆದರ್ಶವನ್ನು ಸದಾ ಕಣ್ಣಮುಂದೆ ಇಟ್ಟುಕೊಂಡು ಆದಷ್ಟುಮಟ್ಟಿಗೆ ಗುರಿಯನ್ನು ಸಾಧಿಸಲು ಪ್ರಯತ್ನಿಸಿದ್ದಾರೆ ; ಈಗ ಇದೇ ಕ್ರಮವನ್ನು ಹಿಡಿದು ಕೆಲವು ಪದಗಳ ಅರ್ಥವಿಚಾರ ಮಾಡುವುದು ಈ ಲೇಖನದ ಮುಖ್ಯ ಉದ್ದೇಶ. ಡಾ. ಕಿಟ್ಟೆಲ್ಲರಷ್ಟು ದಕ್ಷತೆಯಿಂದ ಇವನ್ನು ನೆರವೇರಿಸಲು ಸಾಧ್ಯವಿಲ್ಲದಿದ್ದರೂ ನಮ್ರತೆಯಿಂದ ಇಲ್ಲಿ ಅದಕ್ಕೆ ತೊಡಗಿದೆ. ಎಷ್ಟೋ ವೇಳೆ ಅರ್ಥ ನಿರ್ಣಯ ಕಷ್ಟವಾಗಿದ್ದರೂ ಅದರ ವಿಚಾರ ಮಾಡಬೇಕಾದ ಅಗತ್ಯವನ್ನು ತೋರಿಸಿದೆ ; ಕನ್ನಡಕ್ಕೆ ಹೊಸ ನಿಘಂಟು ಬೇಕೆಂಬ ಮಾತಿನ ತಿರುಳನ್ನು ತೆಗೆದಿಟ್ಟಿದೆ.

೧. ಮೇಗಾಳಿ ಕಿಗ್ಗಾಳಿ—ಎರಡು ಮೂರು ವರ್ಷಗಳ ಹಿಂದೆ ಬೇಸಿಗೆ ರಜದಲ್ಲಿ ಪಟ್ಟಣ ಬಿಟ್ಟು ಹಳ್ಳಿಗೆ ಹೋಗಬೇಕಾಗಿ ಬಂದಿತು. ಆ ಹಳ್ಳಿಯ ಸುತ್ತಲೂ ಬೆಟ್ಟಗಳ ಸಾಲು, ಕಣಿವೆಗಳಲ್ಲಿ ದಟ್ಟವಾದ ಕಾಡು. ಸಂಜೆ ಕಾಲಾಡಿಸಿಕೊಂಡು ಬರೋಣವೆಂದು ನಾಲ್ಕಾರು ಜನ ಆ ಊರಿನ ನಂಟರೊಡನೆ ಬೆಟ್ಟಗಳನ್ನು ಹತ್ತಿ ಇಳಿದು ಅಲೆದಾಡುತ್ತ ಕಾಡಿನ ನಡುವೆ ದಣಿವಾರಿಸಿಕೊಳ್ಳಲು ನಿಲ್ಲಬೇಕಾಯಿತು. ಆಗ ನಂಟರೊಬ್ಬರು ತಮ್ಮ ಬೇಟೆಯ ಅನುಭವವನ್ನು ಹೇಳಲು ಮೊದಲು ಮಾಡಿದರು. ಹುಲಿ ಹೊಂಚು ಕಾದು ಹಸುವನ್ನು ಹೇಗೆ ಹಿಡಿದು ಕೊಲ್ಲುತ್ತದೆಂಬುದನ್ನು ಅವರು ಮೈತುಂಬಿ ಹೇಳುತ್ತಿರುವಾಗ ಆಶ್ಚರ್ಯದಿಂದಲೂ ಭಯದಿಂದಲೂ ಮೂಕರಾಗಿ ಬಾಯಿಬಿಟ್ಟುಕೊಂಡು ಉಳಿದ ನಾವೆಲ್ಲ ಕೇಳುತ್ತಿದ್ದೆವು. ಹೇಳುತ್ತ ಹೇಳುತ್ತ ಅವರು "ಹುಲಿ ಕಿಗ್ಗಾಳಿಗೆ ಬಂತು" ಎಂದು ಅಭಿನಯಿಸಿ ತೋರಿಸಿದರು. ಆ ಕೂಡಲೆ ನಾನು ಎದ್ದು ನಿಂತು ಕುಣಿದಾಡುತ್ತ ಅವರನ್ನು ತಬ್ಬುವ ಹಾಗೆ ಕೈಹಿಡಿದು 'ಸ್ವಾಮಿ, ಕೊಂಚ ತಾಳಿ, ಕಿಗ್ಗಾಳಿ ಎಂದರೆ ಏನು ?' ಎಂದು ಕೇಳಿದೆನು. ಉಳಿದವರಿಗೆಲ್ಲ ಆಶ್ಚರ್ಯ—ಇವನಿಗೆ ಈ ಪದದ ಅರ್ಥ ತಿಳಿಯದೇ ಎಂದು. ಅವರು ನನ್ನ ಕಡೆ ತಿರಸ್ಕಾರದಿಂದ ನೋಡಿದರು. ಅವರ ನೋಟ ನನ್ನ ಕುತೂಹಲವನ್ನು ಕುಗ್ಗಿಸಲಿಲ್ಲ. ಕಾವ್ಯದಲ್ಲಿ ಒಂದೆರಡು ಬಾರಿ ಆ ಪದವನ್ನು ಕಂಡು ಅರ್ಥವೇನೆಂದು ತಲೆ ಕೆರೆದುಕೊಂಡು ಕೋಶಗಳನ್ನೆಲ್ಲ ತಿರುವಿಹಾಕಿ ನಿರಾಶನಾಗಿದ್ದ ನನಗೆ ಅನಿರೀಕ್ಷಿತವಾದ ಕಡೆಯಿಂದ ಬೆಳಕು ಬಂದದ್ದು ಕುತೂಹಲ ಇಮ್ಮಡಿಸುವಂತಾಯಿತು. ಮುಂದಕ್ಕೆ ಕಥೆ ಹೇಳಲು ಅವರನ್ನು ಬಿಡದೆ ಅರ್ಥ ತಿಳಿಸಲೇ ಬೇಕೆಂದು ಮೊಂಡಾಟಮಾಡಿದಾಗ ಅವರು ನಕ್ಷೆ ಬರೆದು ಅದನ್ನು ವಿವರಿಸಿದರು.

ಹರಿಶ್ಚಂದ್ರನು ಬೇಟೆಯಾಡಿದ್ದನ್ನು ವರ್ಣಿಸುವಾಗ ರಾಘವಾಂಕ 'ಮೇಗಾಳಿ, ಕಿಗ್ಗಾಳಿ' ಎಂಬ ಈ ಪದವನ್ನು ಪ್ರಯೋಗಿಸಿದ್ದಾನೆ. ಪ್ರಾಣಿಗಳನ್ನು ಬೇಟೆಯಾಡುವುದಕ್ಕೆ ಪಳಗಿಸಿದ ಹುಲಿಗಳನ್ನು ಉಪಯೋಗಿಸುವ ರೂಢಿ ಇತ್ತು. ಚಿಕ್ಕ ಹಕ್ಕಿಗಳನ್ನು ಹಿಡಿಯಲು ಸಾಕಿದ ಸಾಳ್ವನೆಂಬ ಗಿಡುಗವನ್ನು ಉಪಯೋಗಿಸುವ ಹಾಗೆ. ಹರಿಶ್ಚಂದ್ರನ ಜೊತೆಯಲ್ಲಿ ಹೋದ

ಬೇಟೆಗಾರರು ಹುಲಿಯಿದ್ದ ಬೋನನ್ನು ಬಂಡಿಯ ಮೇಲಿಟ್ಟು ಕಾಡಿಗೆ ಕೊಂಡು ಹೋಗಿ ಅಲ್ಲಿ ಮೃಗಗಳ ಹಕ್ಕಿಯನ್ನು ಕಂಡುಹಿಡಿದು ಆ ದಿಕ್ಕಿಗೆ ಸರಿಯಾಗಿ ಒಂದುಕಡೆ ದೂರದಲ್ಲಿ ಎತ್ತನ್ನು ಕಟ್ಟಿ ಬೋನಿನ ಹುಲಿಗೆ ಅದನ್ನು ತೋರಿಸಿ ಬೇಟೆಯಾಡು ಎಂದು ಬೆನ್ನುತಟ್ಟಿ ಕಳಿಸುತ್ತಾರೆ. ಎತ್ತನ್ನು ಹೊಡೆಯ ಬೇಕೆಂದು ಹೊರಟ ಹುಲಿ ದಾರಿಯಲ್ಲಿರುವ ಮೃಗದ ಹಕ್ಕಿಗೆ ಹೋಗಿ ಅವು ಗಳನ್ನು ಕೊಲ್ಲುತ್ತದೆ. ಈ ಸಂದರ್ಭದಲ್ಲಿ "ಕಾಂತಾರದೊಳು ಮೃಗವ ನೆಲೆಗೊಳಿಸಿ ಮೇಗಾಳಿಯಿಂ ದೂರದಿಂ ತೋಱುತ್ತನೊಡ್ಡಿ ಕಿಗ್ಗಾಳಿಯಿಂ ಬಂಡಿಯಿಂದಿಳುಹಿ ಹುಲಿಯ ಹಾರಯಿಸಿ ತಲೆ ದಡವಿ ತೋಱು ಹಾಸವ ಕಿವಿದು" ಬೇಡರು ಬಿಟ್ಟರೆಂದು ರಾಘವಾಂಕನ ಮಾತು.[1] ಪಾಂಡವರು ಅರಗಿನ ಮನೆಯಿಂದ ಬದುಕಿ ಹಿಡಿಂಬನಿಗೆ ವನದಲ್ಲಿ ಇರಳು ಭೀಮನ ಆರೈಕೆ ಯಲ್ಲಿ ಮಲಗಿರಲು ಅವರ ಇರವು ಹಿಡಿಂಬನಿಗೆ ತಿಳಿಯಬಂದದ್ದನ್ನು ಹೇಳು ವಾಗ "ಮುರಿ ಮುರಿದು ಮೇಗಾಳಿಯಲಿ ಮೂಗರಳಿ ಮಾನವಗಂಧವಿದು ಗೋಚರಿಸಿತೆತ್ತಣದೋ"[2] ಎಂದು ಕುಮಾರವ್ಯಾಸನ ಉಕ್ತಿ. ಈ ಸಂದರ್ಭ ಗಳಲ್ಲಿ ಬರುವ 'ಮೇಗಾಳಿ', 'ಕಿಗ್ಗಾಳಿ' ಎಂಬ ಪದಗಳ ಅರ್ಥವನ್ನು ತಿಳಿಯ ಬೇಕಾಗಿದೆ. ಇದಕ್ಕೆ ಹಿಂದೆ ಸೂಚಿಸಿದ ನಕ್ಷೆಯನ್ನು ಕೆಳಗೆ ಕಾಣಿಸಿದೆ ;




ಕಾಡಿನ ಒಂದೆಡೆಯಲ್ಲಿ ಹಸು ಮೇಯುತ್ತಿದೆ. ಬೇಟೆಗಾಗಿ ಹೊರಟ ಹುಲಿ ಓಡಾಡುತ್ತ ಒಂದನೆಯ ಸ್ಥಳಕ್ಕೆ ಬಂದು ಹಸುವನ್ನು ದೂರದಿಂದ ನೋಡುತ್ತದೆ. ಗಾಳಿ ಬೀಸುವ ದಿಕ್ಕನ್ನು ತಿಳಿಯುವ ಕೌಶಲ ಹುಲಿಗೆ ಹುಟ್ಟಿನಿಂದ ಬಂದದ್ದು. ಬಾಣದ ಗುರುತು ಗಾಳಿ ಬೀಸುವ ದಿಕ್ಕನ್ನು ತೋರಿಸುತ್ತದೆ. ೧ನೆಯ ಸ್ಥಾನದಲ್ಲಿ ಹುಲಿಯಿದ್ದಾಗ ಗಾಳಿ ಅದರ ಮೇಲಿಂದ ಹಸುವಿನ ಕಡೆಗೆ ಬೀಸುತ್ತದೆ. ಇದರಿಂದ ಹಸುವಿಗೆ ಹುಲಿಯ

---

1 'ಹರಿಶ್ಚಂದ್ರ ಕಾವ್ಯ ಸಂಗ್ರಹ'. ೩೧೧—೨೧

2 'ಕನ್ನಡ ಭಾರತ', ix—೩೧.

ಸೊಗಡು ಗೊತ್ತಾಗಿ ಅದು ಓಡಿಹೋಗಬಹುದು. ಆದ್ದರಿಂದ ಹುಲಿ ಹಸುವನ್ನು ಗುರುತಿಸಿದ ಕೂಡಲೇ, ತನ್ನ ಕಡೆಯಿಂದ ಗಾಳಿ ಅದರ ಕಡೆಗೆ ಬೀಸುವಂತಿದ್ದರೆ, ಆ ಸ್ಥಳವನ್ನು ಬಿಟ್ಟು ಬಳಸಿಕೊಂಡು ಬೇಗನೆ ೨ನೆಯ ಸ್ಥಳಕ್ಕೆ ಬರುತ್ತದೆ, ಗಾಳಿ ತನ್ನ ದಿಕ್ಕನ್ನು ಅಷ್ಟರಲ್ಲಿ ಬದಲಾಯಿಸದೆ ಇದ್ದ ಪಕ್ಷದಲ್ಲಿ, ಹಸುವಿನ ಕಡೆಯಿಂದ ಹುಲಿಯ ಕಡೆಗೆ ಬೀಸುತ್ತಿರುತ್ತದೆ, ಹುಲಿಯ ಸುಳಿವು ಹಸುವಿಗೆ ಈಗ ಗೊತ್ತಾಗುವ ಹಾಗಿಲ್ಲ. ಅದು ಮೆಲ್ಲಮೆಲ್ಲಗೆ ಹಸುವಿನ ಹತ್ತಿರಕ್ಕೆ ಜುಣುಗಿ ಬಂದು ಅದಕ್ಕೆ ತಿಳಿಯದೆಯೇ ಅದರ ಕೊರಳ ಕೆಳಗೆ ನುಸಿದು ಮುಂಗೈಗಳಿಂದ ಸಾವು ಅಪ್ಪಿಕೊಳ್ಳುವಂತೆ ತಬ್ಬಿಕೊಂಡು ತನ್ನ ಹಿಂಗಾಲುಗಳನ್ನು ಹಸುವಿನ ಹಿಂಗಾಲುಗಳಿಗೆ ಅದು ಓಡದಂತೆ ಬಲವಾಗಿ ಅನಿಸಿ ಆಮೇಲೆ ಗೋಮಾಳವನ್ನು ಹಲ್ಲಿನಿಂದ ಇಂದು ರಕ್ತ ಹೀರುತ್ತದೆ. ಹಸು ಹೆದರಿಕೆಯಿಂದ ಉಚ್ಚಿಕೊಂಡು ರಕ್ತ ಕಡಿಮೆಯಾಗುತ್ತಾ ಬಂದಹಾಗೆಲ್ಲ ಶಕ್ತಿಗುಂದಿ ಏನು ಮಾಡುವುದಕ್ಕೂ ತೋರದೆ ತೆಪ್ಪಗಿರುತ್ತದೆ. ಹುಲಿ ಹಿಂಗಾಲುಗಳಿಂದ ಹಸುವಿನ ಕೆಳಹೊಟ್ಟೆಯನ್ನು ಒಡೆದು ತಾನು ಮೇಲಾಗಿ ಹಸು ಕೆಳಗಾಗುವಂತೆ ಬೀಳಿಸುತ್ತದೆ. ಇಲ್ಲಿಗೆ ಅದರ ಬೇಟೆ ಮುಗಿದಂತೆ. ಹುಲಿ ೧ನೆಯ ಸ್ಥಾನದಲ್ಲಿರುವಾಗ ಅದು ಮೇಗಾಳಿಯಲ್ಲಿರುತ್ತದೆ ; ೨ನೆಯ ಕಡೆಗೆ ಬಂದಾಗ ಅದು ಕಿಗ್ಗಾಳಿಯಲ್ಲಿರುತ್ತದೆ. ಬೇಟೆಯಾಡುವ ಮೃಗದ ಮೇಲಿಂದ ಬೇಟೆಗೆ ಗುರಿಯಾದ ಪ್ರಾಣಿಯ ಕಡೆಗೆ ಬೀಸುವ ಗಾಳಿಗೆ ಮೇಗಾಳಿಯೆಂದೂ ಪ್ರಾಣಿಯ ಕಡೆಯಿಂದ ಆ ಮೃಗದ ಕಡೆ ಬೀಸುವ ಗಾಳಿಗೆ ಕಿಗ್ಗಾಳಿಯೆಂದೂ ಹೆಸರು. ಇದು ತಿಳಿದರೆ ರಾಘವಾಂಕನ ಮಾತಿಗೆ ಅರ್ಥ ಸ್ಫುಟವಾಗುತ್ತದೆ, ಅದನ್ನು ಹೀಗೆ ತೋರಿಸಬಹುದು :

X ——> ಗಾಳಿಯ ದಿಕ್ಕು X ——> X
(ತೋಱುತ್ತು) (ಮೃಗದ ಪಕ್ಕಿ) (ಹುಲಿ)

ಮೊದಲು ಮೃಗದ ಪಕ್ಕಿಯನ್ನು ಕಂಡುಹಿಡಿದು ಅದಕ್ಕೆ ಮೇಗಾಳಿಯಲ್ಲಿ ತೋಱುತ್ತನ್ನು ಕಟ್ಟಿ ಅದನ್ನು ಹುಲಿಗೆ ತೋರಿಸಿ ಆಮೇಲೆ ಆ ಹುಲಿಯನ್ನು ಕಿಗ್ಗಾಳಿಯಲ್ಲಿ ಬಿಟ್ಟರೆ ಅದು ಎತ್ತನ್ನು ಬೇಟೆಯಾಡಲು ಹೊರಟು

ಮೃಗದ ಪಕ್ಕೆಯ ಮಾರ್ಗವಾಗಿಯೇ ಹೋಗಬೇಕಾಗುತ್ತದೆ. ಆಗ ಅದು ಅಲ್ಲಿರುವ ಮೃಗಗಳನ್ನು ಹಿಡಿಯಲು ಹವಣಿಸುತ್ತದೆ. ಅಷ್ಟು ಹೊತ್ತಿಗೆ ಕಟ್ಟಿದ ಎತ್ತನ್ನು ಬಿಚ್ಚಿಕೊಂಡು ಬರಬಹುದು. ಮೃಗಗಳು ಪಕ್ಕೆಯಲ್ಲಿ ಅವಿತುಕೊಂಡಿರುವುದರಿಂದ ಅದರ ಮೇಲೆ ಬೀಸುವ ಗಾಳಿಯಲ್ಲಿ ಅವುಗಳ ಗಂಧ ಬರಲು ಕಾರಣವಿಲ್ಲ. ಆದ್ದರಿಂದ ಹುಲಿಗೆ ಅವುಗಳ ಇರವು ತಿಳಿಯು ವಂತಿಲ್ಲ. ಇದಕ್ಕಾಗಿ ತೋಱುತ್ತನ್ನು ಕಟ್ಟಬೇಕಾಗುತ್ತದೆ ; ಕುಮಾರ ವ್ಯಾಸನ ಪ್ರಯೋಗವೂ ಈಗ ಅರ್ಥವಾಗುತ್ತದೆ. ಪಾಂಡವರ ಮೇಲಿಂದ ಹಾಯ್ದು ಬರುವ ಗಾಳಿಯನ್ನು ಮೇಗಾಳಿ ಎಂದು ಕರೆದಿದ್ದಾನೆ ; ಅವರು ಹಿಡಿಂಬನಿಗೆ ಮೇಗಾಳಿಯ ಸ್ಥಾನದಲ್ಲಿದ್ದರೆ, ಹಿಡಿಂಬನು ಕಿಗ್ಗಾಳಿಯಲ್ಲಿ ದ್ದಾನೆ.

ಈಗ ಇವೆರಡು ಪದಗಳು ಹೇಗೆ ಹುಟ್ಟಿದುವುವೆಂಬುದನ್ನು ತಿಳಿಯು ವುದು ಸುಲಭ. ಮೇಗಾಳಿ ಎಂಬುದು ಮೇಲೆ+ಗಾಳಿಯಿಂದಲೂ, ಕಿಗ್ಗಾಳಿ ಎಂಬುದು ಕಿಬೆರ್+ಗಾಳಿಯಿಂದಲೂ ಬಂದಿರಬೇಕು ಸ್ಪಷ್ಟ ; ಮೇಲ್ಗಾಳಿ> ಮೇಗಾಳಿ ; ಕಿಲ್ಗಾಳಿ> ಕಿಗ್ರ್ಗಾಳಿ> ಕಿಗ್ಗಾಳಿ. ಇವುಗಳ ಅರ್ಥ ತಿಳಿಯ ದಿರುವಾಗ "ಕಿಗ್ಗಾಳಿ (೩-೧) ಇಲ್ಲಿ ಪಾಠವೇ ತಪ್ಪಿರಬೇಕು" ಎಂದು ವಿಮರ್ಶಕರೊಬ್ಬರು ಹೇಳಿರುವುದು ಸಾಹಸದ ಮಾತೇ ಸರಿ.[1]

ಇಂಥ ಪದಗಳು ನಮ್ಮ ಜನರ ದಿನದ ಬದುಕಿನಲ್ಲಿ ಇನ್ನೂ ಬಳಕೆ ಯಾಗಿವೆ. ಕಮ್ಮಾರ ಚಮ್ಮಾರ ಗಾಣಿಗ ಈಡಿಗ ಜಾಡಬೇಡರೇ ಮುಂತಾದ ಕಸಬುದಾರರಲ್ಲಿ ಅವರವರ ಕೆಲಸಕ್ಕೆ ಸಂಬಂಧಪಟ್ಟ ಕೆಲವು ಪದಗಳು ಈಗಲೂ ರೂಢಿಯಲ್ಲಿವೆ. ಅಂಥವರೊಡನೆ ಸ್ನೇಹ ಬೆಳೆಸಿ ಅವರ ಬಳಿ ಕೊಂಚ ಓಡಾಡುತ್ತಿದ್ದರೆ ಅವರು ಬಳಸುವ ಪದಗಳ ಅರಿವುಂಟಾಗುತ್ತದೆ. ಆ ಪದ ಗಳು ಕಾವ್ಯದಲ್ಲಿ ಬಂದಾಗ ಅವಕ್ಕೆ ಅರ್ಥ ಹೇಳಬೇಕಾದರೆ ಇದೊಂದೇ ದಾರಿ, ಇದು ಒಬ್ಬರಿಂದಲೇ ಆಗುವ ಕೆಲಸವಲ್ಲ, ಶನಿವಾರದ ದಿನ ಭಿಕ್ಷೆ ಬೇಡಲು ಬಂದ ಹಳ್ಳಿಯ ಹೆಂಗಸೊಬ್ಬಳು "ಬುದ್ಧಿ, ಇವತ್ತು ವಡವಾರ, ಅಕ್ಕಿ ಕೊಡಿ" ಎಂದು ಹೇಳಿದ್ದನ್ನು ಕೇಳಿ ಅಚ್ಚರಿಯುಂಟಾಯಿತು. ಕನ್ನಡ ಶಾಸನಗಳಲ್ಲಿ

1 'ಜಯಕರ್ಣಾಟಕ', ಸಂ. IX, ಪುಟ ೭೭೬.

ಹಲವು ಸಲ ಬರುವ ವಡ್ಡವಾರದ ವಿಷಯದಲ್ಲಿ ಚರ್ಚೆ ಇನ್ನೂ ನಡೆಯು ತ್ತಿದೆ. ಅದು ಇನ್ನೂ ಬದುಕಿದೆಯೆಂದು ಕನಸಿನಲ್ಲಿಯೂ ಎಣಿಸಿರಲಿಲ್ಲ. ಆದರೆ ಇದೆ. ಬರಿ ಪುಸ್ತಕ ಓದುವವರಿಗೆ ಗೊತ್ತಿಲ್ಲ, ಅಷ್ಟೇ. ಕನ್ನಡ ಕೋಶ ಮಾಡು ವವನಿಗೆ ಹಳ್ಳಿಯ ಮಾತೂ ಜೀವನದ ರೀತಿಯೂ ತಿಳಿದಿದ್ದರೆ ತುಂಬ ಪ್ರಯೋಜನವುಂಟು.

೨. ಹುಡುಕು ನೀರು : ಹೊಲತಿಯರ ಕಾಟವನ್ನು ತಾಳಲಾರದೆ ಹರಿಶ್ಚಂದ್ರನೂ ಅವನ ಪ್ರಧಾನನೂ ಸೇರಿ ಚಾವಟಿಯಿಂದ ಅವರನ್ನು ಹೊಡೆದು ಅಟ್ಟಿದ ಬಳಿಕ ಆ ಸುದ್ದಿಯನ್ನು ತಿಳಿದ ವಿಶ್ವಾಮಿತ್ರ ಕೋಪ ದಿಂದ ಕುದಿದು ಹರಿಶ್ಚಂದ್ರನಿದ್ದೆಡೆಗೆ ಹರಿದುಬಂದು ಒಯ್ಯುತ್ತ ತನ್ನ ಪ್ರತಾಪವನ್ನು ಕೊಚ್ಚಿಕೊಳ್ಳುವಾಗ "ಕದನಕ್ಕೆಂದು ಬಂದಮರರಂ ಕೆಡಹಿ ಹುಡುಕುನೀರದ್ದು ವೆನ್ನಳವನಟಿಯಾ" ಎಂದು ಗರ್ಜಿಸುತ್ತಾನೆ.[1] ತನ್ನ 'ಸಿದ್ಧರಾಮ ಪುರಾಣ'ದಲ್ಲಿಯೂ ರಾಘವಾಂಕ ಈ ಪದ್ಯವನ್ನು ಬಳಸಿರುವುದು "ಶಿವನಂ ನೆನೆಯೆದೆಡೆಯೊಳನ್ಯಾಯಮಂ ಮಾಡಿ ಮತ್ತಂ ನೆನೆಯುತಿರ್ದೊಡಾ ಶಿವನ ನಾಮಂ ಹುಡುಕುನೀರದ್ದಿಹುದೇ ಮಗನೆ" ಎಂಬ ಪದ್ಯ ಭಾಗದಲ್ಲಿ (V೧೧–೧೮) ಕಂಡುಬರುತ್ತದೆ. ಇನ್ನೂ ಕೆಲವು ಪ್ರಯೋಗಗಳನ್ನು ನೋಡ ಬಹುದು. ಜಲಕೇಳಿಯಾಡುತ್ತಿದ್ದ ನೀರೆಯೊಬ್ಬಳ ಹುರುಡನ್ನು ನಾಗಚಂದ್ರ,

ಕಡುನೀಟು ಜಂತ್ರದಂಚೆಯ
ನಡಿಗಡಿಗಾ ನಿರೋಳರ್ದಿದಳ್ ನಡವೆಡೆಯೊಳ್[1]
ಗಡ ನಾಣ್ಚದೆ ಪುರುಡಿಪುದೆ
ನ್ನೊಡೆಸೆಂದುಯ್ದಲ್ಲಿ ಪುಡುಕುನೀರದ್ದುದವೊಲ್ ॥

ಎಂದು ವರ್ಣಿಸಿರುವನು.[2] ಪಾಪಿ ಜೀವರಿಗೆ ನರಕದಲ್ಲಿ ಆಗುವ ನಾನಾ ಹಿಂಸೆ ಗಳಲ್ಲಿ ಒಂದನ್ನು ಕುರಿತು "ವೈತರಣೀ ಪ್ರವಾಹಂಗಳೊಳ್ ಹುಡುಕುನೀರದ್ದು ವುದುಂ" ಎಂದು ಕಮಲಭವನು ಹೇಳಿದ್ದಾನೆ.[3]

---

1. 'ಹರಿಶ್ಚಂದ್ರ ಕಾವ್ಯಸಂಗ್ರಹ', V—೧೦.
2. 'ಮಲ್ಲಿನಾಥಪುರಾಣ', VI—೧೦೦.
3. 'ಶಾಂತೀಶ್ವರ ಪುರಾಣ', IX—೨೧೦ ಗದ್ಯ.

ನೀರಾಟದಲ್ಲಿ ತೊಡಗಿದ್ದ ಪೆಂಗಸರು ತಮ್ಮ ಕೊಡಗಳನ್ನು "ಅತಿ ಗರ್ವಂಬೆತ್ತುವು ತಾವಿವೆಸುತ ಕಡುಮುಳಿಸಿಂದೊತ್ತಿ ಪುಡುಕುನೀರದ್ದುವ ತೆಱನಂ" ತೋರಿಸಿದರೆಂದು ಮಂಗರಸನ ಮಾತು.[4]

ಮೇಲಿನ ಯಾವ ಪ್ರಯೋಗವನ್ನು ನೋಡಿದರೂ 'ಹುಡುಕುನೀರು' ಎಂಬುದರ ಅರ್ಥ ಖಚಿತವಾಗಿ ಆಗುವಂತಿಲ್ಲ. ಅದನ್ನು ಬೇರೆ ರೀತಿಯಿಂದ ಕಂಡುಹಿಡಿಯಬೇಕು. ಇದಕ್ಕೆ ವಿಚಾರ ಅವಶ್ಯಕ.

ಈ ಪದದ ಹಳೆಯರೂಪ 'ಪುಡುಕುನೀರ್' ಎಂದು ನಾಗಚಂದ್ರನ ಪ್ರಯೋಗ ಸಾರುತ್ತದೆ. ಪುಡುಕು + ನೀರ್ ಎಂದು ಅದರ ವಿಭಜನೆ. 'ಪುಡುಕು' ಎಂದರೆ ಏನು ? ಶೋಧನೆಮಾಡು ಎಂಬರ್ಥದಲ್ಲಿ ಪುಡುಕು > ಹುಡುಕು ಎಂಬ ಧಾತು ಬೇರೆ ಒಂದಿದೆ. ಪ್ರಕೃತ ಸಂದರ್ಭಕ್ಕೆ ಇದು ಹೊಂದುವುದಿಲ್ಲವಾದ್ದರಿಂದ ಅದರ ಗೊಡವೆ ಇಲ್ಲಿ ಬೇಡ. 'ಪುಡುಕು' ಎಂಬಲ್ಲಿರುವ ಕೊನೆಯ ಅಕ್ಷರವಾದ – ಕು ಒಂದು ಪ್ರತ್ಯಯ ಸ್ವರೂಪವಾಗಿರುವುದರಿಂದ (Formative suffix) ಈ ಪದದ ಮೂಲರೂಪ 'ಪಡು' ಎಂದಾಗುತ್ತದೆ. ಈಗ ಪಂಪನ ಒಂದು ಪದ್ಯ ನೆನಪಿಗೆ ಬರುತ್ತದೆ : [1]

ಸಂಗತ ಧೂಮಾವಳಿಯುನಿ
ಭಂಗಳೆಗೆತ್ತೊಳಱು ಪಾಯ್ದು ಪೊಗೆ ಪುಗೆ ಕಣ್ಣಂ ।
ಸಿಂಗಂಗಳಳುರೆ ಗರ್ಜಿಸಿ
ಲಂಗಿಸಿ ಪುಡಪುಡನೆ ಪುಟ್ಟಿ ಸತ್ತುವು ಪಲವುಂ ।

ಇಲ್ಲಿರುವ 'ಪುಡಪುಡನೆ ಪುಟ್ಟಿ' ಎಂಬ ಮಾತುಗಳು ಮುಖ್ಯವಾದುವು. 'ಪುಟ್ಟಿ' ಎಂಬ ಧಾತುವನ್ನು ಕೇಶಿರಾಜ ಕೊಟ್ಟು ಅದಕ್ಕೆ ದಹನಕ್ರಿಯೆ ಎಂಬರ್ಥವನ್ನು ತಿಳಿಸಿದ್ದಾನೆ. ತಮಿಳಿನಲ್ಲಿ ಇದರ ರೂಪಾಂತರವಾದ

---

4 'ಜಯನೃಪ ಕಾವ್ಯ', IX—೧೪.

---

1 'ಪಂಪಭಾರತ', V—೯೨.

ಪುಟುಂಗು ಎಂಬ ಧಾತುವುಂಟು : ಅದಕ್ಕೆ ಅರ್ಥ ಕುದಿ, ಬೇಯು ಎಂದು. ಕನ್ನಡಿಗರ ಕುಸುಬಲಕ್ಕಿ( <ಕುದಿ+ಅಕ್ಕಿ)ಎಂದು ಕರೆಯುವುದನ್ನು ತಮಿಳರು ಪುಟುಂಗಲರಿಸಿ ಎಂದು ಹೇಳುತ್ತಾರೆ. ಹುಗ್ಗಿ ಎಂಬ ಕನ್ನಡ ಪದ ಈ ಪುಟ್ಗು ಧಾತುವಿನಿಂದ ಹುಟ್ಟಿದ್ದು. ಆದ್ದರಿಂದ ಆ ಧಾತುವಿಗೆ ಸುಡು ಎಂಬರ್ಥವೊಂದೇ ಅಲ್ಲದೆ ಕುದಿ, ಬೇಯು ಎಂಬರ್ಥಗಳೂ ಇದ್ದಿರಬೇಕೆಂದು ಸ್ಪಷ್ಟವಾಗುತ್ತದೆ. ಪುಡು ಎಂಬ ಮೂಲಧಾತುವಿಗೆ ಗು–ಎಂಬ ಪ್ರತ್ಯಯ ಸೇರಿ (Formative suffix) ಪುಟ್ಗು ಆಗಿದೆ. ಆದ್ದರಿಂದ ಪುಡುವಿಗೂ ಕುದಿ, ಬೇಯು ಎಂಬರ್ಥಗಳು ಇದ್ದಿರಬೇಕು. ಪಂಪನ ಪದ್ಯದಲ್ಲಿರುವ 'ಪುಡಪುಡನೆ' ಎಂಬ ಶಬ್ದ ಪುಡು ಎಂಬ ಮೂಲಧಾತುವಿದ್ದಿರಬೇಕೆಂಬುದನ್ನು ವಿಶದಗೊಳಿಸುತ್ತದೆ. ಇದರಿಂದಲೇ 'ಪುಡುಕು' ಎಂಬ ಧಾತು ಬಂದು ಕುದಿ, ಬೇಯು ಎಂಬರ್ಥವನ್ನು ಪಡೆದಿರಬೇಕೆಂದು ಅರಿವಾಗುತ್ತದೆ.ಪುಡುಕುನೀರ್-ಎಂದರೆ ಕುದಿನೀರು ಬಿಸಿ ನೀರು ಸುಡುನೀರು ಎಂದರ್ಥ. ಇದನ್ನು ಸಮರ್ಥಿಸು ವುದಕ್ಕಾಗಿ ತೆಲುಗಿನ 'ಉಡುಕುನೀಳ್ಳು' ಎಂಬ ಪದವನ್ನು ನೋಡಬಹುದು. ಇಲ್ಲಿನ ಉಡುಕು ಎಂಬ ಶಬ್ದ ಏನು ? ಪದದ ಆದಿ ವ್ಯಂಜನ ಮಾಯವಾಗಿ ಅದರ ಮೇಲಿನ ಸ್ವರ ನಿಂತುಬಿಡುವುದು ದ್ರಾವಿಡ ಭಾಷೆಗಳಲ್ಲಿ ಕೆಲವು ವೇಳೆ ಕಾಣುವ ವ್ಯಾಪಾರ; ನೀರುಳ್ಳಿ> ಈರುಳ್ಳಿ. ಚಿಗುರು > ಇಗುರು, ತೊಡನೆ > ಒಡನೆ,ತೊಗರ್ > ಒಗರ್, ಎಂಬೀ ವ್ಯತ್ಯಾಸಗಳು ನಡೆದಿರುವ ಹಾಗೆಯೇ 'ಪುಡುಕು' ಎಂಬುದು 'ಉಡುಕು' ಎಂದು ತೆಲುಗಿನಲ್ಲಿ ಆಗಿದೆ. ಈ ಕಾರಣ ಗಳಿಂದ ಪುಡುಕುನೀರ್ ಎಂಬುದಕ್ಕೆ ಕುದಿನೀರೆಂಬರ್ಥ ಸಾಧುವಾಗಿದೆಯೆಂದು ಹೇಳಬಹುದು. ಮೇಲೆ ಕಾಣಿಸಿರುವ ಎಲ್ಲ ಪ್ರಯೋಗಗಳಿಗೂ ಇದು ಅನ್ವಯಿಸುವುದಾಗಿದೆ. ಹುಡುಕು ನೀರದ್ದುವುದು ಒಂದು ದಂಡನೆ. ಅದ್ದಿಸಿ ಕೊಂಡವನು ಎದ್ದು ಬರುವ ಹಾಗೇ ಇಲ್ಲ. ಒಂದು ವೇಳೆ ಬಂದರೆ ಮೈಯೆಲ್ಲ ಬೆಂದುಹೋಗಿರುತ್ತದೆ.

೩. ಬಡಪ :– ಅಶ್ವತ್ಥಾಮನೂ ಪಾಂಡ್ಯನೂ ಒಬ್ಬರನ್ನೊಬ್ಬರು ಎದುರಿಸಿ ಯುದ್ಧ ಮಾಡುವಾಗ ಪಾಂಡ್ಯನು ಬಾಣದ ಮಳೆ ಸುರಿಸಿದ್ದನ್ನು ಪಂಪನು,

ಎನೆ ಬೆಳ್ಮನೆಯಂಚಿನ ಸರಿ
ಮೊನೆಯಂಚಿನ ಸೋನೆ ಪಾರೆಯುಂಬಿನ ತಂದಲ್ ।
ಘನಮಾದುದಲ್ಲಿ ಕಿತ್ತುಂ
ಬೆನ ಬಡಪಮಿದೆನಿಸಿ ಪಾಂಡ್ಯನಂಬಂ ಕೞಿದಂ ॥

ಎಂದು ವರ್ಣಿಸಿದ್ದಾನೆ.[1] ಇಲ್ಲಿ 'ಬಡಪ'ಕ್ಕೆ ಪಂಪಭಾರತದ ಸಂಪಾದಕರು ಪ್ರವಾಹ ಎಂಬರ್ಥವನ್ನು ಕೊಟ್ಟಿದ್ದಾರೆ. ಅದಕ್ಕೆ ಅವರು ಯಾವ ಆಧಾರವನ್ನೂ ಸೂಚಿಸಿಲ್ಲವಾದ್ದರಿಂದ ಅದರ ವಿಷಯವಾಗಿ ಸಂದೇಹ ಹುಟ್ಟುತ್ತದೆ. ಬೇರೆ ಪ್ರಯೋಗಗಳನ್ನು ನೋಡಿ ಆಮೇಲೆ ಇದನ್ನು ನಿರ್ಣಯಿಸಬಹುದು.

ರುದ್ರಭಟ್ಟ ಮಳೆಗಾಲದ ವರ್ಣನೆ ಮಾಡುವಾಗ ಒಂದುಸಲ ಮಾತ್ರ ಈ ಪದವನ್ನು ಬಳಸಿದ್ದಾನೆ. [2]

ಬಲ್ಸರಿ ಬಱುಸರಿ ಪರ್ಮೞೆ
ಮೆಲ್ಸರಿ ತುಂತುಱ್ ತುಷಾರವಿಡುಕುಂಬನಿ ತಂ ।
ದಲ್ಸೋನೆ ನಟ್ಟ ಬಡಪಮೆ
ನಲ್ಸರಿದುವು ಬಿಡದೆ ಮೞೆಗಳಿರುಳುಂ ಪಗಲುಂ ॥

ಬೆಟ್ಟದ ತಪ್ಪಲಲ್ಲಿ ಮೇಯುತ್ತಿದ್ದ ಮಂದೆಗಳು "ಬಡಪಂ ಬೆಂಬತ್ತೆ ಮೇವಂ ಮಱಿದು''ವೆಂದೂ[3] ಆಕಾಶ ಗಂಗಾ ಪ್ರವಾಹವು "ಚಂದ್ರಕಾಂತದ ನೆಗೆವ ಮುಗಿಲಟ್ಟಣೆಗಳಂ ಮೆಟ್ಟಿಬಡಹಮನೊಡರ್ಚೆ ಬಳಸಿದಗಲಿನೊಗುಮಿಗ ತಿಂಬಿವರಿಯಿಸಿ"ದು ವೆಂದೂ[4]ಅಗ್ಗಳನ ಹೇಳಿಕೆ. ಕಮಲಭವನು ಈ ಪದವನ್ನು ಐದು ಬಾರಿ ಬಳಸಿದ್ದಾನೆ,[5] ದೇವಿಕವಿ ಇದೇ ಐದನ್ನೂಕೊಟ್ಟಿರುವುದಲ್ಲದೆ "ಈ ಭುವನ ಗರ್ಭಕುಹರಂ ತಾನಾವಗಮಿಡಿದಡಸಿನ ತುಂತುಱಿ ಹಗವಮಿದೆನಿಸಿ- ದುದು ಬಿಡದ ಬಡಹದ ಕೊರ್ಬಿಂ" ಎಂಬ ಆರನೆಯ ಪ್ರಯೋಗವನ್ನೂ

---

1 'ಪಂಪಭಾರತ', XII—೮೦
2 'ಜಗನ್ನಾಥ ವಿಜಯ', IV—೩೨.
3 'ಚಂದ್ರಪ್ರಭ ಪುರಾಣ' IV—೪೭. 4. 'ಅದೇ' VIII-೪೩ ಗದ್ಯ.
5 'ಶಾಂತೀಶ್ವರ ಪುರಾಣ' XII—೫೫, ೫೬, ೫೭, ೫೮, ೫೯.

ಮಾಡಿದ್ದಾನೆ.[6] ಇವರಿಬ್ಬರ ಕಾವ್ಯಗಳಿಂದ ಪೆರ್ವಡಹ, ತನಿವಡಹ, ಸೀರ್ಪನಿವಡಹ ಎಂಬ ಸಮಾನ ಪದಗಳು ದೊರೆಯುತ್ತವೆ. ಕೊನೆಯದಾಗಿ ಸುರಂಗನ ಈ ಕೆಳಗಿನ ಪದ್ಯವನ್ನು ಗಮನಿಸಬಹುದು.[7]

ಅಡಸರಿ ಬಲ್ಸರಿ ಮರಮಳ್
ಯಿಡುಕುಂಬನಿ ನಟ್ಟವನಿ ತುಷಾರಂ ಬಡಹಂ ।
ಜಡಿ ಜಿನುಗು ಜುಂಜು ತುಂತು
ರ್ಬೆಡದಡಿಯಿಡಗೊಡದೆ ಕುಱಿದುವಿರುಳುಂ ಪಗಲುಂ ॥

ಈ ಪ್ರಯೋಗಗಳ ಬಲದಿಂದಲೇ ಅರ್ಥನಿರ್ಣಯ ಸಾಧ್ಯ. ರುದ್ರಭಟ್ಟ ಸುರಂಗರ ಪದ್ಯಗಳನ್ನು ಕಣ್ತೆರೆದು ನೋಡಿದರೆ ಬಡಪ ಎಂಬುದು ಒಂದು ಬಗೆಯಾದ ಮಳೆಯೆಂದು ವ್ಯಕ್ತವಾಗುತ್ತದೆ. ಇರಬಹುದಾದ ಅಲ್ಪಸ್ವಲ್ಪ ಸಂದೇಹವನ್ನೂ ಹೇಮಚಂದ್ರಾಚಾರ್ಯನು ಖಚಿತವಾಗಿ ಹೋಗಲಾಡಿಸುತ್ತಾನೆ; ತನ್ನ ಪ್ರಾಕೃತ ನಿಘಂಟುವಿನಲ್ಲಿ 'ವಡಪ್ಪಂ' ಎಂಬ ಶಬ್ದವನ್ನು ಕೊಟ್ಟು ಅದಕ್ಕೆ 'ಲತಾಗಹನಂ', 'ನಿರಂತರವೃಷ್ಟಿ' ಎಂಬರ್ಥಗಳನ್ನು ಬರೆದಿದ್ದಾನೆ; "ಝಾಡಝುಡೀಸು ವಡಪ್ಪಂ" ಎಂದು ಅದಕ್ಕೆ ಪ್ರಾಕೃತ ಪರ್ಯಾಯ ಶಬ್ದಗಳನ್ನೂ ಹೇಳಿದ್ದಾನೆ;[1] ವಡಪ್ಪಂ ಎಂಬುದಕ್ಕೂ ಬಡಪಂ ಎಂಬುದಕ್ಕೂ ನಂಟುತನವಿದೆ. ಕನ್ನಡದಲ್ಲಿ ವಕಾರಾದಿಯಾದ ಶಬ್ದಗಳು ತೀರ ಕಡಿಮೆಯಾಗಿರುವುದೂ ತಮಿಳು–ತೆಲುಗು ಕೋಶಗಳಲ್ಲಿ ಈ ಪದ ದೊರೆಯದಿರುವುದೂ ವಡಪ್ಪಂ ಎಂಬುದು ದ್ರಾವಿಡೇತರ ಶಬ್ದವಾಗಿರಬಹುದೆಂಬ ಊಹೆಗೆ ಕಾರಣಗಳು. ಅದು ಕನ್ನಡಕ್ಕೆ ಬಂದು ವಿಕಾಸ ಹೊಂದಿದೆ; ವಡಪ್ಪ> ಬಡಪ> ಬಡಹ. ಈಗ ಬಳಕೆಯಲ್ಲಿದೆಯೋ ಇಲ್ಲವೋ ತಿಳಿಯದು. ಅದರ ಅರ್ಥ ನಿರಂತರವಾದ ಮಳೆಯೆಂದೇ ಹೊರತು 'ಪ್ರವಾಹ' ವಲ್ಲ; ಲತಾಗಹನ ಎಂಬರ್ಥದಲ್ಲೂ ಅದು ಕನ್ನಡದಲ್ಲಿ ಪ್ರಯೋಗವಾಗಿದ್ದರೆ ಸೋಜಿಗವೇನೂ ಅಲ್ಲ.

---

6 'ಕುಸುಮಾವಳೀ ಕಾವ್ಯಂ' V1—೪೦.
7 'ತ್ರಿಷಷ್ಟಿ ಪುರಾತನ ವಿಲಾಸ' V111—೩೯.

---

1 'ದೇಶೀ ನಾಮಮಾಲಾ' V11—೮೩

೪. ಓಹರಿ ಸಾಹರಿ —ಖರನೂ ವಿರಾಧಿತನೂ ತಂತಮ್ಮ ಸೈನ್ಯಗಳೊಡನೆ ಬಂದು ಎದುರಿಸಿ ಬಿರುಸಿನಿಂದ ಕಾಳಗವಾಡುತ್ತಿದ್ದಾಗ ಆರೆನೆಲೆಯಲ್ಲಿದ್ದ ಲಕ್ಷ್ಮಣ ಸಂತೋಷದಿಂದ ಅದನ್ನು ನೋಡುತ್ತಿದ್ದನೆಂದೂ ಆಗ ಆ ಎರಡು ಸೈನ್ಯಗಳು–"ಅರವರಿಸದೆ (ಪೋಹರಿಸಿಹರಿಯ) ಮಾಡುತ್ತಿರ್ದಪುವು ಎಂದು ಕುಮುದೇಂದು ಕವಿಯ ವರ್ಣನೆ.[2] ಇಲ್ಲಿ ಆ ಗ್ರಂಥದ ಮಾನ್ಯ ಸಂಪಾದಕರ ಪಾಠ ಸರಿಯಲ್ಲವೆಂದೂ ಅದು "—ಅರವರಿಸದೆ(ಯೋ)ಹರಿ ಸಾ(ಹ)ರಿಯಂ ಮಾಡುತ್ತಿರ್ದಪುವು" ಎಂದಿರಬೇಕೆಂದೂ ಅವರೇ ಕೊಟ್ಟಿರುವ ಪಾಠಾಂತರಗಳ ಸಹಾಯದಿಂದ ಒಂದು ಕಡೆ ಹೇಳಿದ್ದೆನು.[3] ಓಹರಿ ಸಾಹರಿ ಎಂಬ ಒಂದು ಪದ ಕನ್ನಡದಲ್ಲಿತ್ತೆಂಬುದಕ್ಕೆ ಸುರಂಗಕವಿ ಒಂದು ಆಧಾರವಾಗಿದ್ದಾನೆ. ಅವನ ಗ್ರಂಥದ ಕಲಿಕಾಮದೇವರ ಕಥೆಯಲ್ಲಿ ಯುದ್ಧವರ್ಣನೆ ಬರುತ್ತದೆ. ಅಲ್ಲಿ "ಅಂತು ಪೋಹರಿ ಸಾಹರಿಯಾಗಿ ಕಾದುವರಂ ಕಲಿಕಾಮದೇವಂ ಕಂಡು ಕೋಪಮಂ ತಾಳ್ದಾಗಳ್" ಎಂದು ಪ್ರಯೋಗವಿದೆ.[4] ಇದರ ಅರ್ಥವನ್ನು ತಿಳಿಯಬೇಕಾದರೆ, ತೆಲುಗು ಸಾಹಿತ್ಯದಿಂದ ನೆರವು ಬರುತ್ತದೆ. ಕೃಷ್ಣದೇವರಾಯನು ಬರೆದಿರುವ 'ಅಮುಕ್ತ ಮಾಲ್ಯದ' ಎಂಬ ಕಾವ್ಯದಲ್ಲಿ "ಓಹರಿ ಸಾಹರಿಂ ಬ್ರಥಮವೊಲ್ಕಿಡುಧಾರಲ" ಎಂಬ ಪ್ರಯೋಗವಿದೆಯೆಂದೂ, ಅದಕ್ಕೆ 'ತಂಡೋಪತಂಡವಾಗಿ' ಎಂಬರ್ಥವಿದೆಯೆಂದೂ ತಿಳಿದುಬಂದಿದೆ.[1] ಈ ಅರ್ಥ ಸುರಂಗಕವಿಯ ಪ್ರಯೋಗಕ್ಕೆ ಚೆನ್ನಾಗಿ ಹೊಂದುತ್ತದೆ; ಕುಮುದೇಂದುವಿನ ಪದ್ಯಕ್ಕೆ ಅಷ್ಟು ಚೆನ್ನಾಗಿ ಸೇರುವುದಿಲ್ಲ. ಆದರೂ ಅದರ ಅರ್ಥಸ್ಥೂಲವಾಗಿ ತಿಳಿದ ಹಾಗಾಗಿದೆ; ತುಸು ಭಿನ್ನವಾದ ಬೇರೆ ಯಾವುದಾದರೂ ಅಭಿಪ್ರಾಯ ಆ ಪದದಿಂದ ಸೂಚಿತವಾಗಿರಬಹುದು.

---

2 'ಕುಮುದೇಂದು ರಾಮಾಯಣ', VIII—೫೨.

3 'ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ', XX IV—ಪುಟ ೨೩೪.

4 'ತ್ರಿಷಷ್ಟಿ ಪುರಾತನ ವಿಲಾಸ', V—೯ ಗದ್ಯ.

---

1. 'ಶಬ್ದರತ್ನಾಕರವು', ಪುಟ ೨೮೬.

೫. ಒಲ್ಲಣಿಗೆ — ಈಗ ತಿಳಿದಮಟ್ಟಿಗೆ ಈ ಪದವನ್ನು ಮೊದಲು ಬಳಸಿರುವುದು ಶಿವಕೋಟ್ಯಾಚಾರ್ಯನ 'ವಡ್ಡಾರಾಧನೆ'ಯೆಂಬ ಗ್ರಂಥದಲ್ಲಿ. ಗಂಭೀರೆ ಎಂಬಾಕೆ ಮಗಳ ಊರಿಗೆ ಹೋಗುತ್ತ ದಾರಿಯಲ್ಲಿ ಕಳ್ಳರ ಕೈಗೆ ಸಿಕ್ಕಿಬಿದ್ದು ಉಪಾಯದಿಂದ ಅವರನ್ನು ನಂಬಿಸಿ ಹತ್ತಿರಿದ್ದ ಊರಿಗೆ ಅವರನ್ನು ಕರೆದುಕೊಂಡುಹೋಗಿ "ಅವರ್ಗೆಲ್ಲಂ ನೀರನಡಿಸಿ ತಲೆಯಂ ಪೂಸಿಸಿಯೊಲ್ಲಣಿಗೆ ಯುಡಿಸಿ ತಲೆಯೊಳ್ ಕಟ್ಟಿಯುಂ" ಹೊಯ್ಯುತ್ತಾಳೆ.[2] ಕರ್ಣನ ಪರಾಕ್ರಮ ವನ್ನು ಶಾರದ್ವತನಿಂದ ಹೊಗಳಿಸುತ್ತ ಪಂಪನು "ಮುನ್ನೆ ಚಕ್ಷುಷ್ಮನೆಂಬ ಮನುವಾದ ಕಾಲದೊಳ್ ಧರಾತಳಮನೊಲ್ಲಣಿಗೆಯಿಂ ಪಿಡಿವಂತೆ....ಪಿಡಿದ ಸಾಹಸಮುಮಂ" ಎಂದೂ[3] ಭೂಮಿ ಕೋಪಗೊಂಡು ಹಿಂದಿನ ಹಗೆ ಕಾರಣವಾಗಿ ಕರ್ಣನ ರಥದ ಗಾಲಿಯನ್ನು ನುಂಗುವ ಸಂದರ್ಭದಲ್ಲಿ "ತನ್ನಂ ಮು(ನ್ನೆ ಮುಯ್ಯೇಱಿ) ಸೂಜ್ವಿರಮೊಲ್ಲಣಿಗೆಯಂ ಪಿಡಿವಂತೆ ಪಿಂಡಿ ಪಿಡಿದ ಪಗೆಗೆ" ಎಂದೂ ಉಸುರಿದ್ದಾನೆ. ಬ್ರಾಹ್ಮಣರು ಮಾಡುವ ಶ್ರಾದ್ಧಾದಿ ಕರ್ಮಗಳಿಂದ ಏನೂ ಪ್ರಯೋಜನವಿಲ್ಲವೆಂದು ನಗುತ್ತ

ಮೀದೊಲ್ಲಣಿಗೆಯ ಪಿಡಿನೀ
ರಿಂದಂ ಕಾವ್ಗರ್ಜೆ ನೆಲದೊಳಿರ್ದಾ ಕೊಟಿನೀ
ರಿಂದಂ ಪಾರ್ವರ ಮಡಗೂ
ಟುಂದಂ ಪಿತೃತೃಪ್ತಿಯಕ್ಕುಮೆಂಬರ್ ಪಾರ್ವರ್ ॥

ಎಂಬುದಾಗಿ ಬ್ರಹ್ಮ ಶಿವನ ಚುಚ್ಚುಮಾತು.[5] ಇವು ಇದುವರೆಗೆ ಸಿಕ್ಕಿರುವ ಪ್ರಯೋಗಗಳು. ಇವರ ಅರ್ಥವೇನು ?

ಪಂಪಭಾರತದ ಸಂಪಾದಕರು ಇದಕ್ಕೆ 'ಗಾಣ' ಎಂದು ಅರ್ಥ ಹೇಳಿ ಬಿಟ್ಟರು. ಆಧಾರವಿದೆಯೊ, ಬರಿ ಊಹೆಯೊ ತಿಳಿಯದು. ವಿದ್ವಾಂಸ ರೊಬ್ಬರು ಯಾವ ವಿಷಯವಾಗಿಯೋ ಬರೆಯ ಹೊರಟು ಹೇಗೋ ಈ ಪದಕ್ಕೆ ಕೈಹಾಕಿ ಇದಕ್ಕೆ 'ಅರ್ದ್ರವಸ್ತ್ರ' ಎಂಬರ್ಥವಿರಬೇಕೆಂದೂ ಬೇರೆ ಯಾವ

---

2 'ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ', XXIV, ಸಂಚಿಕೆ ೪–೫.
3 'ಪಂಪಭಾರತ' XII—೪೮ ಗದ್ಯ. 4 ಅದೇ XII—೨೦೬ಗದ್ಯ.
5 'ಸಮಯಪರೀಕ್ಷೆ' X ೧.

ಪ್ರಯೋಗದ ಬಲವೂ ಇಲ್ಲದೆಯೇ ಊಹಿಸಿದ್ದಾರೆ.[6] ಊಹೆ ಸರಿಯಾಗಿದೆ ; ಅದು ಸಾಧಾರವಾಗಿಯೂ ಇದಕ್ಕೆ ಚೆನ್ನಾಗಿತ್ತು. ಸ್ನಾನಮಾಡುವಾಗ ಉಡುವ ಬಟ್ಟೆಯೆಂದು ಆ ಪದಕ್ಕೆ ಅರ್ಥ ಪ್ರಯೋಗಗಳಿಂದಲೇ ಸ್ಪಷ್ಟವಾಗಿದೆ. ಪಂಪನ ಮೊದಲನೆಯ ಪ್ರಯೋಗದಲ್ಲಿ 'ಬಲ್ಲಣಿಗೆಯಿಂ' ಎಂಬ ತೃತೀಯೆಗೆ ಬದಲಾಗಿ ದ್ವಿತೀಯ ಇರಬೇಕು. ಮೀಯುವಾಗ ಉಡುವ ಬಟ್ಟೆಯು ನೆಯ್ಗೆ ಜಾಳುಜಾಳು ; ಬೇಗ ನೀರನ್ನು ಹೀರುತ್ತದೆ ; ಒಂದು ತೊಟ್ಟು ನೀರೂ ಕೂಡ ಇಲ್ಲದಂತೆ ಹಿಂಡುವುದೂ ಅತಿ ಸುಲಭ. ಈ ಸೌಲಭ್ಯ ಪಂಪನ ಪ್ರಯೋಗದಲ್ಲಿ ಧ್ವನಿತವಾಗಿದೆ ; ವಾಚ್ಯಾರ್ಥವೇನೊ ಬಟ್ಟೆಯೆಂದೇ. ಈ ಅರ್ಥವನ್ನು ಸಮರ್ಥಿಸುವುದಕ್ಕೆ ಇಲ್ಲಿ ತುಳು ಭಾಷೆ ನೆರವಾಗುತ್ತದೆ. ಆ ಭಾಷೆಯ ಕೋಶವೊಂದರಲ್ಲಿ ಒಲ್ಲಣಿಗೆ ಎಂಬ ನಾಮಪದ A Cloth Coveringthe Privities ಎಂಬರ್ಥದಲ್ಲಿ ಕಂಡುಬರುತ್ತದೆ.[1] ತುಳುವರಲ್ಲಿ ಈ ಪದ ಇನ್ನೂ ಜೀವಂತವಾಗಿರಬಹುದು. ಇದು ಯಾವ ಭಾಷೆಯದೊ, ಕನ್ನಡಕ್ಕೆ ಹೇಗೆ ಬಂತೋ ಇದರ ನಿಷ್ಪತ್ತಿಯೇನೊ ಯಾವುದನ್ನೂ ಸದ್ಯದಲ್ಲಿ ವಿವರಿಸಲು ಅವಕಾಶವಿಲ್ಲ.

೬. ಮೂವಿಟ್ಟಿ — ಪಂಪಭಾರತ (VI—30)ರಲ್ಲಿ ಬರುವ ಈ ಪದಕ್ಕೆ ಆ ಗ್ರಂಥದ ಸಂಪಾದಕರು ಅರ್ಥ ಹೇಳುವಾಗ ಅದನ್ನು ಮೂರು+ಬಿಟ್ಟಿ ಎಂದು ವಿಭಾಗಿಸಿ ವಿಷ್ಟಿ ಎಂಬ ಎರಡನೆಯದರ ಸಂಸ್ಕೃತಮೂಲವನ್ನು ಸೂಚಿಸಿ ಪೊನ್ನನ 'ಶಾಂತಿ ಪುರಾಣ'ದ ಒಂದು ಪ್ರಯೋಗವನ್ನೂ ತೋರಿಸಿ (IX—2) ತಟಸ್ಥರಾಗಿದ್ದಾರೆ, 'ವಿಷ್ಟಿ'ಗೆ ಅರ್ಥವೇನೆಂದು ವಿಶದಪಡಿಸಿಲ್ಲ, ಅದನ್ನು ತಿಳಿದ ಮೇಲೆ ಮೂರು ಬಿಟ್ಟಿಗಳಾವುವೆಂಬುದನ್ನು ಗೊತ್ತುಹಚ್ಚಬೇಕಾಗಿದೆ, ಇನ್ನೂ ಕೆಲವು ಪ್ರಯೋಗಗಳನ್ನು ನೋಡೋಣ. ಪಾರ್ಶ್ವಪಂಡಿತನದು ಹೀಗಿದೆ ;[2]

ಕಟ್ಟೆಯ್ದೆ ಕಪ್ಪಮಂ ಮಗು  
ಳ್ದಿಟ್ಟೆಯ ಬಟುಗೊಲ್ದು ಪೇಲ್ದ ತಾಣಕ್ಕೆ ನೃಪ ॥  
ರ್ವಿಟ್ಟು ಭುಜಗರ್ವಮಂ ಮೂ  
ವಿಟ್ಟಿಗೆ ಬರೆ ನೆಗಲ್ದ ನೆಳೆಯಾಳರವಿಂದ ನೃಪಂ ॥

---

6 'ಪಣ್ಡಿತಮಂಡಲ ಪತ್ರಿಕೆ', ೧೯೩೬, ನವರಾತ್ರಿಯ ಸಂಚಿಕೆ, ಪುಟ ೨೪.

ದಾವಣಗೆರೆ ೩೨ನೆಯ ಶಾಸನದಲ್ಲಿ "ಭಯದಿಂ ಮೂವಿಟ್ಟಿಯಿಂ ಬಂದು ಜೀವಿಸದಿರ್ಪುದ್ದತರಿಲ್ಲ" ಎಂದೂ ೨೫೧ನೆಯ ಶಾಸನದಲ್ಲಿ "ವೀರಾರಿ ನೃಪಾರಂ ಬರಿಸಿದಂ ಮೂವಿಟ್ಟಿಗಂ ಬೆಟ್ಟಿಗಂ" ಎಂದೂ ಈ ಪದ ಬಳಕೆ ಯಾಗಿದೆ. ನಾಗಚಂದ್ರನು 'ಇಟುವಿಟ್ಟಿ' (ಇಟುವ—ಬಿಟ್ಟಿ; ಇದು ಎಟುವಿಷ್ಟಿ ಎಂದಿರಬೇಕೇನೋ ?) ಎಂಬ ಹೊಸ ಪದವನ್ನು ನಿರ್ಮಿಸಿ ಕೊಂಡಿದ್ದಾನೆ. 'ಮೂವಿಟ್ಟಿಗಂಬರಿಸಿದಂ ಎಂಬುದಕ್ಕೆ 'ಶಾಸನಪದ್ಯ ಮಂಜರಿ'ಯ ಕೋಶದಲ್ಲಿ ' ದಾಸರನ್ನಾಗಿ ಮಾಡಿದನು' ಎಂದು ಅರ್ಥ ಸೂಚಿತವಾಗಿದೆ. ಇದು ಸರಿಯೇ ? ವಿಷ್ಟಿ ಎಂಬುದು ಅರ್ಥಶಾಸ್ತ್ರಕ್ಕೆ ಸಂಬಂಧಿಸಿದ ಪದ. ಇದಕ್ಕೆ ಕೌಟಿಲ್ಯನ ವಿವರಣೆ ಹೀಗೆ: "ಶಿಬಿರ ಮಾರ್ಗ ಸೇತು ಕೂಪ ತೀರ್ಥಶೋಧನ ಕರ್ಮಯಂತ್ರ ಆಯುಧಾವರಣ ಉಪಕರಣ ಗ್ರಾಸವಹನಂ ಅಯೋಧನಾಚ್ಚ ಪ್ರಹರಣಾವರಣ ಪ್ರತಿವಿದ್ಧಾಪನಯನಂ ಇತಿ ವಿಷ್ಟಿಕರ್ಮಾಣಿ". [1] ಸೈನ್ಯ ಬೀಡುಬಿಟ್ಟಿರುವಾಗಲೂ, ಪಯಣ ಮಾಡು ತ್ತಿರುವಾಗಲೂ ಅದಕ್ಕೆ ಬೇಕಾದ ಅನುಕೂಲ್ಯಗಳನ್ನೆಲ್ಲ ಒದಗಿಸಿಕೊಡಲು ಸಂಬಳ ಕೊಡದೆ ಚಾಕರಿ ತೆಗೆಯುವ ರೂಢಿ ಹಿಂದೆ ಇತ್ತು. ಕೌಟಿಲ್ಯನ ವಾಕ್ಯಕ್ಕೆ ಮಾಡಿರುವ ಇಂಗ್ಲಿಷಿನ ತರ್ಜುಮೆಯಲ್ಲಿ ವಿಷ್ಟಿ ಕರ್ಮಗಳನ್ನು ಮೂರು ಗುಂಪುಗಳಾಗಿ ವಿಭಾಗಿಸಿರುವುದು ಕಂಡುಬರುತ್ತದೆ. [2] ಶೋಧನ ಕರ್ಮ, ವಹನ ಕರ್ಮ, ಅಪನಯನ ಕರ್ಮ ಎಂಬ ಈ ಮೂರು ಬಗೆಯಾದ ವಿಷ್ಟಿಗಳನ್ನು ಕನ್ನಡ ಕವಿಗಳು 'ಮೂವಿಟ್ಟಿ' ಎಂಬ ಪದದಿಂದ ನಿರ್ದೇಶಿಸಿ ರುವ ಹಾಗೆ ಕಾಣುತ್ತದೆ. ಸೋತ ರಾಜರು ಗೆದ್ದ ರಾಜರಿಗೆ ಈ ವಿಷ್ಟಿ ಕರ್ಮಗಳನ್ನೂ ಮಾಡುವ ದೈನ್ಯಾವಸ್ಥೆಗೆ ಗುರಿಯಾಗುತ್ತಿದ್ದರು ; ಗೆದ್ದವನ ಪರಾಕ್ರಮವನ್ನು ಹೇಳುವ ಕನ್ನಡದ ಧಾಟಿಯನ್ನು ಮೇಲಿನ ಪ್ರಯೋಗ ಗಳಲ್ಲಿ ಕಾಣುತ್ತೇವೆ. ಪಂಪ, ಪೊನ್ನ ಪಾರ್ಶ್ವರ ಪದ್ಯಗಳಲ್ಲಿ 'ಮೂವಿಟ್ಟಿ'ಗೆ

---

1 'ಕೌಟಿಲೀಯ ಅರ್ಥಶಾಸ್ತ್ರ', ಪುಟ ೩೭೧ (Mysore Govt. Oriental library Editon)

2 Kautiliya Arthasastra : Tr. Dr. Shamasastri, P. 339.

ಇರುವ ಅನುಪೂರ್ವಿ ಹೆಚ್ಚು ಕಡಿಮೆ ಒಂದೇ ರೀತಿಯಾಗಿರುವುದು ಸೋಜಿಗದ ವಿಷಯ.

ಮೇಲೆ ಕೊಟ್ಟಿರುವ ಪದಗಳು ಮಾದರಿಗಾಗಿ ಎತ್ತಿಕೊಂಡವು. ಕನ್ನಡ ಕಾವ್ಯಗಳಲ್ಲಿಯೂ ಶಾಸನಗಳಲ್ಲಿಯೂ ಇಂಥ ಸಾವಿರಾರು ಪದಗಳು ಅವಿತು ಕೊಂಡಿವೆ. ಕಾವ್ಯಗಳಲ್ಲಿ ಕೆಲವು ಮುದ್ರಿತ; ಹಲವು ಇನ್ನೂ ಅಚ್ಚು ಕೂಟದ ಮುಖವನ್ನೇ ನೋಡಿಲ್ಲ. ಶಾಸನಗಳೂ ಲೆಕ್ಕವಿಲ್ಲದಷ್ಟಿವೆ. ಇವುಗಳನ್ನೆಲ್ಲ ಕಣ್ಣಿಟ್ಟು ಓದಿ ಸರಿಯಾದ ಪಾಠವೇನೆಂಬುದನ್ನೂ ನಿರ್ಣಯಿಸಿ ಪದಗಳನ್ನು ಕೂಡಿಹಾಕುವ ಕೆಲಸ ಮೊದಲು ನಡೆಯಬೇಕು. ಇದಾದ ಹೊರತು ಮುಂದೆ ಕಾಲಿಡುವಹಾಗಿಲ್ಲ.

ನಮ್ಮ ಕವಿಗಳಲ್ಲನೇಕರು ಹಲವು ಶಾಸ್ತ್ರಗಳನ್ನು ಬಲ್ಲವರಾಗಿದ್ದರು. "ತರ್ಕ ವ್ಯಾಕರಣ ಭರತ ಚಾಣಕ್ಯ ವಾತ್ಸ್ಯಾಯನ ಭಾರತ ರಾಮಾಯಣ ಮೋಕ್ಷೋಪಾಯಾತ್ಮಜ್ಞಾನ ಧಾತುವಾದ ರತ್ನಪರೀಕ್ಷಾ ವೈದ್ಯಕ ಜ್ಯೋತಿಷ ಧನುರ್ವೇದ ಗಜತುರಗ ಪುರುಷಲಕ್ಷಣ ದ್ಯೂತೇಂದ್ರಜಾಲ ಪ್ರಕೀರ್ಣೇಷು ಪರಿಚಯಃ ಕವಿ ಸಾಮ್ರಾಜ್ಯ ವ್ಯಂಜನಃ" ಎಂಬ ಕ್ಷೇಮೇಂದ್ರನ ಮಾತಿನಂತೆ 3 ಕವಿಯಾಗಲು ಬಯಸುವವನು ಈ ಶಾಸ್ತ್ರಗಳನ್ನೂ ಇಲ್ಲಿ ಹೇಳದೆ ಇರುವ ಚಿತ್ರ–ಸೂಪಶಾಸ್ತ್ರಾದಿಗಳನ್ನೂ ಕಲಿತಿರಬೇಕಾಗಿತ್ತು; ಪ್ರತಿಭೆಯೊಂದೇ ಕಾವ್ಯಸೃಷ್ಟಿಗೆ ಪರಿಕರವೆಂಬ ರಾಜಶೇಖರನ ಮಾತನ್ನು ಮೊದಲು ಒಪ್ಪಿ ಕೊಂಡು ಆಮೇಲೆ ಕ್ಷೇಮೇಂದ್ರನ ಮಾತಿಗೆ ಬೆಲೆ ಕಟ್ಟಬೇಕಾಗಿದೆ. ಈ ವಿಷಯ ಹಾಗಿರಲಿ. ನಮ್ಮ ಹಿರಿಯ ಕವಿಗಳಲ್ಲಿ ಪ್ರತಿಭೆಯೂ ಶಾಸ್ತ್ರ ಪರಿಚಯವೂ ಒಂದರೊಡನೊಂದು ಮೇಲಾಟ ನಡೆಸುತ್ತಿವೆ. ಇದರಿಂದ ಒಂದು ಕಡೆ ಕಾವ್ಯಸೌಂದರ್ಯದ ಬುಗ್ಗೆ ಬೆಳಗಿದ್ದರೆ ಮತ್ತೊಂದು ಕಡೆ ಆಯಾ ಶಾಸ್ತ್ರದ ಶಬ್ದ ಪ್ರವಾಹವು ಹೆದರಿಸುವಂತೆ ಮೊರೆಯುತ್ತಿದೆ. ಇದರ ಜೊತೆಗೆ 'ಚತುರ್ಭಾಷಾ ಕವಿ ಚಕ್ರವರ್ತಿ'ಗಳ ಪಾಂಡಿತ್ಯ ಬೇರೆ ಉಂಟು. ಅವರ ಪದಗಳಿಗೆ ಅರ್ಥೈಸಬೇಕಾದರೆ ನಿಘಂಟುಕಾರನಿಗೆ ಈ ವಿವಿಧ ಶಾಸ್ತ್ರ

3 'ಕವಿಕಂಠಾಭರಣ' V ಸಂಧಿ.

ಪರಿಭಾಷೆಗಳ ಪರಿಚಯ ಇರಲೇಬೇಕು. ಕನ್ನಡಭಾಷೆ ಸಾಹಿತ್ಯಗಳ ತುಂಬು ಪಾಂಡಿತ್ಯದೊಡನೆ ಸಂಸ್ಕೃತ ಪ್ರಾಕೃತ ತಮಿಳು, ತೆಲುಗು, ಮಲಯಾಳವೇ ಮುಂತಾದ ಭಾಷೆಗಳ ಪರಿಜ್ಞಾನವೂ ಸಾಹಿತ್ಯಗಳ ಲೋಲುಪ್ತಿಯೂ ತುಳು ಮೊದಲಾದ ಇತರ ದ್ರಾವಿಡ ಭಾಷೆಗಳ ವ್ಯಾಕರಣ ಕೋಶಗಳ ಸಾನ್ನಿಧ್ಯವೂ ಆಧುನಿಕ ಭಾಷಾ ಶಾಸ್ತ್ರದ ತಿರುವುಮುರುವುಗಳ ಗಭೀರ ಜ್ಞಾನವೂ ಭಾಷೆಯ ಒಳಭೇದಗಳ ತಿಳಿವಳಿಕೆಯೂ ಗ್ರಾಮಜೀವನದ ಅರಿವೂ ಅಲ್ಲದೆ ಶಕ್ತಿಯೂ ತಾಳ್ಮೆಯೂ ಸಹೃದಯತೆಯಿಂದ ಸೇರಬೇಕು. ಇಷ್ಟೆಲ್ಲ ಒಂದೇ ವ್ಯಕ್ತಿಯಲ್ಲಿ ಸಂಗಮಿಸಿದ್ದರೆ ಅದು ಅವನ ಪುಣ್ಯ, ಭಾಷೆಯ ಭಾಗ್ಯ. ಆದರೆ ಅದು ಮೊರಡಿಯಲ್ಲಿ ಮಾದಲದ ಹಣ್ಣು ಬಿಟ್ಟಂತೆ.

ಆದ್ದರಿಂದ ಕನ್ನಡಕ್ಕೆ ಒಂದು ಹೊಸ ನಿಘಂಟುವನ್ನು ಮಾಡುವುದು ಬರಿ ಬಾಯಿಮಾತಿನಿಂದ ಆಗುವ ಕೆಲಸವಲ್ಲವೆಂದು ತಿಳಿದಹಾಗಾಯಿತು. ಕನ್ನಡದಲ್ಲಿ ಪಾಂಡಿತ್ಯವೇನಿದೆ, ಇದ್ದರೂ ಅದರಿಂದ ಆಗಬೇಕಾದದ್ದೇನು ಎಂದು ತಾತ್ಸಾರದಿಂದ ಮೂಗು ಮುರಿಯುವವರು ಒಂದಿಷ್ಟು ಕಣ್ಣುಬಿಟ್ಟು ನೋಡಲಿ; ಇದರಿಂದ ಅಂಥವರ ತಾತ್ಸಾರ ಪ್ರೋತ್ಸಾಹವಾಗಿ ಪರಿಣಮಿಸಲಿ. ಕನ್ನಡದಲ್ಲಿ ಆಳವಾದ ಪಾಂಡಿತ್ಯವಿದ್ದು ಹಿಂದೆ ಹೇಳಿದ ಶಾಸ್ತ್ರಗಳಲ್ಲೂ ಭಾಷೆಗಳಲ್ಲೂ, ಕನಿಷ್ಠಪಕ್ಷ ಒಂದರಲ್ಲಿಯಾದರೂ, ಪರಿಚಯವಿರುವ ಹತ್ತಾರು ಜನರು ಒಕ್ಕೂಟವಾಗಿ ಹಮ್ಮುಬಿಮ್ಮುಗಳಿಲ್ಲದೆ, ಕಲಹಕಾತರ ಗಳಿಲ್ಲದೆ ಸಹಕರಿಸಿ ಮಾಡಬೇಕಾದ ಕೆಲಸವಿದು. ಮದ್ರಾಸ್ ವಿಶ್ವವಿದ್ಯಾ ನಿಲಯದ ಸರ್ಕಾರದ ಪ್ರೋತ್ಸಾಹದಿಂದ ದುಡಿದು ತಮಿಳು ಭಾಷೆಗೆ ದೊಡ್ಡ ನಿಘಂಟು ತಯಾರಿಸಿದೆ. ಇಂಥ ಹೆಮ್ಮೆ ಕನ್ನಡಕ್ಕೂ ಬೇಗ ಉಂಟಾಗಲಿ.

## ಪೊನ್ನನೂ, ಕಾಳಿದಾಸನೂ

ಪೊನ್ನನು ಕವಿರತ್ನತ್ರಯದಲ್ಲಿ ಒಬ್ಬನು; ರನ್ನನಂತಹ ಕವಿಯಿಂದ ಅಸದೃಶವಾದ ಪ್ರಶಸ್ತಿಯನ್ನು ಸಂಪಾದಿಸಿದವನು; ಸಾಲದ್ದಕ್ಕೆ ಕವಿ ಚಕ್ರವರ್ತಿ ಎಂಬ ಬಿರುದಾಂಕಿತನು ಬೇರೆ; ಇಂತಹವನು ವಿಷಯದಲ್ಲಿ ಅವನ ಕಾವ್ಯ ಗಳನ್ನು ಓದಿ ಅವುಗಳ ತೂಕ, ಬೆಲೆ, ಬಣ್ಣ – ಇವುಗಳನ್ನು ಕಟ್ಟುವುದು ಕಷ್ಟವಾದ ಕೆಲಸವೇ ಸರಿ. ಅಲ್ಲದೆ ಇವನ ಕಾವ್ಯಗಳಲ್ಲಿ ಇದುವರೆಗೆ ದೊರೆ ತಿರುವುದು ಶಾಂತಿಪುರಾಣವೊಂದೇ. ಇದು ಜೈನಮತದ ಪ್ರಕ್ರಿಯೆಗಳಿಂದಲೂ ಜನ್ಮಾಂತರದ ಕಥೆಗಳಿಂದಲೂ ತುಂಬಿರುವುದರಿಂದ ಪೊನ್ನನ ನಿಜವಾದ ಯೋಗ್ಯತೆಯನ್ನು ತಿಳಿಯುವುದಕ್ಕೆ ಇದೊಂದರಿಂದಲೇ ಸಾಧ್ಯವಿಲ್ಲ. ಇದು ವರೆಗೂ ಸಿಕ್ಕದೆ ಇರುವ ಇವನ "ಭುವನೈಕರಾಮಾಭ್ಯುದಯ" ಎಂಬ ಗ್ರಂಥವು ಸಿಕ್ಕಿದರೆ ಪೊನ್ನನ ಯೋಗ್ಯತಾ ಪರೀಕ್ಷೆಗೆ ಬಹಳ ಅನುಕೂಲವಾಗುವುದು. ಆದರೆ ಅದು ಇದುವರೆಗೂ ಬೆಳಕಿಗೆ ಬಾರದೆ ಇರುವುದರಿಂದ ಪೊನ್ನನನ್ನು ವಿಮರ್ಶಿಸಲು ಸದ್ಯಕ್ಕೆ "ಶಾಂತಿಪುರಾಣ"ವೊಂದನ್ನೇ ನಾವು ಆಧಾರವಾಗಿಟ್ಟು ಕೊಳ್ಳಬೇಕಾಗಿದೆ. ಇದನ್ನು ಶ್ರಮವಹಿಸಿ ಪ್ರಕಟಿಸಿರುವ ಮಹನೀಯರಾದ ವಿದ್ವಾಂಸರುಗಳಿಗೆ ನಮ್ಮ ವಿನಯಪೂರ್ವಕವಾದ ಧನ್ಯವಾದಗಳು.

ಪೊನ್ನನು ತನಗೆ ಹಿಂದೆ ಇದ್ದ ಕವಿಗಳನ್ನು ಸ್ಮರಿಸುವಾಗ ಕನ್ನಡ ಕವಿಗಳಲ್ಲಿ ಅಸಗನನ್ನೂ ಸಂಸ್ಕೃತ ಕವಿಗಳಲ್ಲಿ ಕಾಳಿದಾಸನನ್ನೂ ಸ್ಮರಿಸಿರುತ್ತಾನೆ. ಅಲ್ಲದೆ ತನ್ನ ಕಾವ್ಯದ ಮಹಿಮೆಯನ್ನು –

ಕನ್ನಡ ಕವಿತೆಯೊಳಸಗಂ
ಗನ್ನೂರ್ಮಡಿ ರೇಖೆಗಗ್ಗಳಂ ಸಕ್ಕದದೊಳ್
ಮುನ್ನುಳ್ಳ ಕಾಳಿದಾಸಂ
ಗನ್ನಾಲ್ವಡಿ ರಚನೆಯೊಳ್ ಕುರುಳ್ಗಳಸವಣಂ ॥

ಎಂಬ ಪದ್ಯದಲ್ಲಿ ಹೇಳಿಕೊಂಡಿರುತ್ತಾನೆ. ಕನ್ನಡ ಕವಿಯಾದ ಅಸಗನ ವಿಚಾರವಾಗಿ ನಮಗೆ ಏನೂ ಹೆಚ್ಚು ವಿಚಾರಗಳು ತಿಳಿದುಬಂದಿಲ್ಲ. ಇವನ ಕಾವ್ಯಗಳಾವುವು, ಅವುಗಳ ಯೋಗ್ಯತೆಯು ಎಂತಹುದು – ಎಂಬ ವಿಷಯಗಳನ್ನು ತಿಳಿದುಕೊಳ್ಳುವುದಕ್ಕೆ ತಕ್ಕ ಸಾಧನಗಳು ಇದುವರೆಗೂ ಒಂದಾದರೂ ದೊರೆತಿಲ್ಲ. ಆದರೆ ಪೊನ್ನನಂತಹ ಕವಿಯು ಇವನನ್ನು ಸ್ಮರಿಸಿರುವುದರಿಂದ ಅಸಗನು ಅಂತಹ ಕೀಳು ಕವಿಯಲ್ಲವೆಂಬುದನ್ನು ನಾವು ನಂಬಬಹುದು. ಇನ್ನು ಪೊನ್ನನ "ಕನ್ನಡ ಕವಿತೆಯೊಳಸಗಂಗಂ ನೂರ್ಮಡಿ" ಎಂಬ ಮಾತುಗಳ ನಿಜವಾದ ಬೆಲೆಯನ್ನು ನಾವು ತಿಳಿಯುವುದು ಹೇಗೆ ? ಆದುದರಿಂದ ಇವುಗಳ ವಿಚಾರವಾಗಿ ಏನು ಹೇಳುವುದಕ್ಕೂ ಈಗ ಸಾಧ್ಯವಿಲ್ಲ.

ಇನ್ನು ಪೊನ್ನನು ಕಾಳಿದಾಸನ ವಿಚಾರವಾಗಿ ಹೇಳುವ ಮಾತುಗಳನ್ನು ನೋಡೋಣ. "ರೇಖೆಗಗ್ಗಳಂ ಸಕ್ಕದದೊಳ್ ಮುನ್ನುಳ್ಳ ಕಾಳಿದಾಸಂಗಂ ನಾಲ್ವಡಿ ರಚನೆಯೊಳ್ ಕರುಳ್ಗಳ ಸವಣಂ" ಎಂಬ ಮಾತುಗಳನ್ನು ಯಾರಾದರೂ ಒಂದು ಸಲ ಓದಿದರೆ, ಕೇಳಿದರೆ ಸಾಕು. ಪೊನ್ನನು ದೈನ್ಯದೋಷದೂಷಿತನಲ್ಲ ಎನಿಸುತ್ತದೆ. ಇನ್ನು ಯಾವ ಕವಿಯನ್ನಾದರೂ ಸುಲಭವಾಗಿ ಎತ್ತಿಹಾಕಬಹುದು. ಕಾಳಿದಾಸನ ವಿಚಾರವಾಗಿ ಮಾತ್ರ ಬಹಳ ಜಾಗರೂಕತೆಯಿಂದ ನಡೆಯಬೇಕು; ಆ ಮಹಾನುಭಾವನು ಒಂದು ದೊಡ್ಡ ತೊಳಗಿ ಬೆಳಗುವ ದಿವ್ಯಜ್ಯೋತಿ. ರನ್ನನು —

---

* ಪ್ರಬುದ್ಧ ಕರ್ಣಾಟಕ, ಸಂ. ೧೨, ಸಂ. ೨

ಪದ್ಯ ರಚನೆಯೊಳ್ ಕಾಳಿದಾಸನುಂ
ಗದ್ಯ ರಚನೆಯೊಳ್ ಬಾಣನುಂ
... ... ... ... ... ಎಮಗಭಿವಂದ್ಯರೆ

ಎಂದು ಕಾಳಿದಾಸನನ್ನು ಭಕ್ತಿಪೂರ್ವಕವಾಗಿ ಸ್ಮರಿಸಿ ನಮಸ್ಕರಿಸಿ ಮುಂದಕ್ಕೆ ತೆರಳುವನು. ಪಂಪನು ತನ್ನ ಸ್ವಭಾವಕ್ಕೆ ತಕ್ಕಹಾಗೆ ಯಾರ ನಾಮೋಲ್ಲೇಖವನ್ನೂ ಮಾಡದೆ ಯಾವ ಕಾವ್ಯವನ್ನೂ, ಕವಿಯನ್ನೂ ಹೆಸರು ಹೇಳಿ ವ್ಯಕ್ತಿ ನಿರ್ದೇಶ ಮಾಡದೆ, ಹೀಯಾಳಿಸದೆ "ವ್ಯಾಸ ಮುನೀಂದ್ರ ರುಂದ್ರ ವಚನಾಮೃತ ವಾರ್ಧಿಯನೀಸುವೆಂ ಕವಿವ್ಯಾಸನ್‌ನೆಂಬ ಗರ್ವಮೆನಗಿಲ್ಲ" ಎಂದು ಎಷ್ಟೋ ನಮ್ರಭಾವವನ್ನು ವಹಿಸಿ ಕಥೆಯನ್ನು ಹೇಳಲುಪಕ್ರಮಿಸುತ್ತಾನೆ. ಹೀಗಿರುವಾಗ ಪೊನ್ನನು ಏಕೆ ತನ್ನ ಪ್ರಶಸ್ತಿಯನ್ನು ಬರೆದುಕೊಂಡು ಕಾಳಿದಾಸನನ್ನೇ ಎತ್ತಿಹಾಕಿರುವನು ?

ಪೊನ್ನನು "ರಚನೆ"ಯಲ್ಲಿ ಕಾಳಿದಾಸನಿಗಿಂತಲೂ ತಾನು "ನಾಲ್ವಡಿ" ಎಂದು ಹೇಳಿಕೊಂಡಿರುವನಷ್ಟೆ. ಆತನು "ರಚನೆ" ಎಂಬ ಪದವನ್ನು ಯಾವ ಅಭಿಪ್ರಾಯವನ್ನಿಟ್ಟುಕೊಂಡು ಉಪಯೋಗಿಸಿರುವನೊ ಅದನ್ನು ನಿರ್ಣಯಿಸಿ ಹೇಳುವುದು ಕಷ್ಟ. "ರಚನೆ" ಎಂಬ ಪದದ ವ್ಯಾಪನೆಯು ವಿಸ್ತಾರವಾದುದು. ಇದು ತಕ್ಕ ಪದಗಳನ್ನು ಒಂದೊಂದಕ್ಕೆ ಮೈತ್ರಿಯು ತಪ್ಪದ ಹಾಗೆ ಜೋಡಿಸುವುದಾಗಬಹುದು. ಪಾತ್ರಗಳಿಗೆ ಜೀವಕಳೆಯನ್ನು ತುಂಬಿ ಅವುಗಳನ್ನು ಕಣ್ಣಿಗೆ ಕಟ್ಟಿದ ಹಾಗೆ ತೋರಿಸುವ ಅದೊಂದು ಬಗೆಯ ಕೌಶಲವಾಗಬಹುದು. ಮನಸ್ಸಿನ ಮೇಲೆ ಅನೇಕ ಪರಿಣಾಮಗಳನ್ನುಂಟುಮಾಡಿ ಬೇಗಬೇಗನೆ ಬದಲಾಯಿಸುವ ಸನ್ನಿವೇಶಗಳನ್ನು ಒಂದಾದಮೇಲೊಂದು ಸಮಯವರಿತು ನೇಯುವುದಾಗಬಹುದು. ಅಥವಾ ಇವೆಲ್ಲವೂ ಒಟ್ಟಾಗಿ ಒಂದು ಕಡೆ ಇದ್ದರೆ ಅದನ್ನೂ "ರಚನೆ" ಎಂಬ ಪದದಿಂದ ನಿರ್ದೇಶಿಸಬಹುದು. ಇಷ್ಟು ವಿಸ್ತಾರವಾದ ರಚನೆಯಲ್ಲಿ ಪೊನ್ನನು ನಿಜವಾಗಿಯೂ ಕಾಳಿದಾಸನಿಗಿಂತ "ನಾಲ್ವಡಿ"ಯೇ ಎಂಬುದನ್ನು ಸಕಾರಣವಾಗಿ ವಿಮರ್ಶಿಸೋಣ.

ಕಾಳಿದಾಸನು ಎಂತಹ ಸನ್ನಿವೇಶಗಳನ್ನು ಕಲ್ಪಿಸಿ ವರ್ಣಿಸಿರುವನೊ ಅಂತಹ ಸನ್ನಿವೇಶಗಳನ್ನೇ ತಾನು ಕಲ್ಪಿಸಿ ಕಾಳಿದಾಸನಿಗಿಂತಲೂ ಬಹಳ

ಚೆನ್ನಾಗಿ ವರ್ಣಿಸಿದ್ದರೆ ಅವನು ಆ ಕವಿಗಿಂತ "ನಾಲ್ವಡಿ"ಯೇ ಸರಿ. ಇಂತಹ ಸನ್ನಿವೇಶಗಳು ಶಾಂತಿಪುರಾಣದಲ್ಲಿ ಕೆಲವು ದೊರೆಯುತ್ತವೆ. ಶಾಂತಿಪುರಾಣ ವನ್ನು ಓದಿ ಪುಸ್ತಕವನ್ನು ಮುಚ್ಚಿ ಕೆಳಗಿಟ್ಟ ಮೇಲೆ ಜನ್ಮಾಂತರದ ಕಥೆಗಳಲ್ಲಿ ಹಲವು ಮರೆತು ಹೋಗಿ ಜ್ಯೋತಿಃಪ್ರಭೆಯ ಸ್ವಯಂವರ ವರ್ಣನೆಯೂ, ಶಾಂತೀಶ್ವರ ದಿಗ್ವಿಜಯ ವರ್ಣನೆಯೂ ಮನಸ್ಸಿನ ಮುಂದೆ ಬಂದು ನಲಿ ದಾಡುತ್ತದೆ. ಇವಕ್ಕೆ ಸಮಾನವಾದ ಸನ್ನಿವೇಶಗಳು ಕಾಳಿದಾಸನ ರಘುವಂಶ ದಲ್ಲಿ ದೊರೆಯುತ್ತವೆ. ಜ್ಯೋತಿಃಪ್ರಭೆಯ ಸ್ವಯಂವರವು ಇಂದುಮತಿಯ ಸ್ವಯಂವರಕ್ಕೂ, ಶಾಂತೀಶನ ದಿಗ್ವಿಜಯವು ರಘುಮಹಾರಾಜನ ದಿಗ್ವಿಜಯಕ್ಕೂ ಸರಿ ಹೋಲುತ್ತವೆ. ಪೊನ್ನನ ವರ್ಣನೆಯು ಕಾಳಿದಾಸನ ವರ್ಣನೆಯ ಪಡಿ ಅಚ್ಚು. ಕಾಳಿದಾಸನ ಕೈವಾಡವನ್ನು ಪೊನ್ನನ ವರ್ಣನೆ ಯಲ್ಲಿ ಬಹಳ ವಿಶದವಾಗಿ ನೋಡಬಹುದು. ಪೊನ್ನನು ಕಾಳಿದಾಸನ ವರ್ಣನಾ ರೀತಿಯನ್ನೇ ಅನುಸರಿಸಿ ಅವನಿಂದ ಪದ್ಯಗಳನ್ನು ಭಾಷಾಂತರಿಸಿರುತ್ತಾನೆ; ರಘುವಂಶದ ಸರ್ಗ ಸರ್ಗಗಳನ್ನೇ ಭಾಷಾಂತರಿಸಿ ತನ್ನವೆಂದು ಹೇಳಿಕೊಂಡಿ ದ್ದಾನೆ. ಮುಂದೆ ಕೊಡುವ ಉದಾಹರಣೆಗಳಿಂದ ಈ ವಿಷಯವು ತಾನಾಗಿಯೇ ಸ್ಪಷ್ಟವಾಗುತ್ತದೆ.

ಮೊದಲು ಜ್ಯೋತಿಃಪ್ರಭೆಯ ಸ್ವಯಂವರ ವರ್ಣನೆಯನ್ನು ತೆಗೆದು ಕೊಳ್ಳೋಣ. ಈ ಜ್ಯೋತಿಃಪ್ರಭೆಗೆ ಶ್ರೀವಿಜಯ ಮತ್ತು ವಿಜಯ ಎಂಬ ಇಬ್ಬರು ಅಣ್ಣಂದಿರಿರುತ್ತಾರೆ. ಇವರು ಪೌದನಪುರಕ್ಕೆ ಅರಸನಾದ ತ್ರಿಪೃಷ್ಠನ ಮಕ್ಕಳು. ತ್ರಿಪೃಷ್ಠನು ಬಹಳ ಕಾಲ ರಾಜ್ಯವಾಳಿ ಸತ್ತು ಏಳನೆಯ ನರಕಕ್ಕೆ ಹೋಗುತ್ತಾನೆ. ಈಗ ಪೌದನಪುರಕ್ಕೆ ಶ್ರೀವಿಜಯನು ರಾಜನಾಗಿ ತನ್ನ ತಂಗಿಯಾದ ಜ್ಯೋತಿಃಪ್ರಭೆಯ ಸ್ವಯಂವರವನ್ನು ನಡೆಸುತ್ತಾನೆ. ಶಾಂತಿ ನಾಥನು ತನ್ನ ಮೊದಲಿನ ನಾಲ್ಕನೆಯ ಜನ್ಮದಲ್ಲಿ ಅಮಿತತೇಜನಾಗಿದ್ದನು. ಅಮಿತತೇಜನು ರಥನೂಪುರಚಕ್ರವಾಳಪುರಕ್ಕೆ ಅರಸನಾದ ಅರ್ಕಕೀರ್ತಿಯ ಮಗನು. ಅರ್ಕಕೀರ್ತಿಯು ಯಶೋವಂತನಾಗಿ ಬಹಳ ಕಾಲ ರಾಜ್ಯವಾಳಿ ಕೊನೆಗೆ ಸಂನ್ಯಾಸವನ್ನು ವಹಿಸಿ ಅಮಿತತೇಜನಿಗೆ ಪಟ್ಟವನ್ನು ಕಟ್ಟಿ ಅಭಿ ನಂದನ ಮುನಿಗಳ ಶಿಷ್ಯನಾಗಿ ಹೊರಟುಹೋಗುತ್ತಾನೆ. ಈ ಅಮಿತತೇಜ ನನ್ನೇ ಜ್ಯೋತಿಃಪ್ರಭೆಯು ಸ್ವಯಂವರದಲ್ಲಿ ವರಿಸುತ್ತಾಳೆ.

ಅಮಿತತೇಜನ ಪೌದನಪುರ ಪ್ರವೇಶದ ಮೊದಲುಗೊಂಡು ಸ್ವಯಂವರವು ಮುಗಿದು ಶಾಸ್ತ್ರೋಕ್ತವಾಗಿ ಕನ್ಯಾದಾನವಾಗುವವರೆಗೂ ಪೊನ್ನನು ಕಾಳಿದಾಸನನ್ನೇ ಎಡೆಬಿಡದೆ ಅನುಕರಿಸಿರುತ್ತಾನೆ. ಅಮಿತತೇಜನು ಉಪವನದ ಒಂದೆಡೆಯಲ್ಲಿ ಬೀಡನ್ನು ಬಿಡುತ್ತಾನೆ. ಅಮಿತತೇಜನನ್ನು ಎದುರುಗೊಳ್ಳುವುದಕ್ಕೆ ಶ್ರೀವಿಜಯನು ಬರುತ್ತಾನೆ; ಅಜನನ್ನು ಎದುರುಗೊಳ್ಳುವುದಕ್ಕೆ ಭೋಜನು ಬರುತ್ತಾನೆ.

ಹೀಗೆ ಅಮಿತತೇಜನಿಗೂ ಅಜಕುಮಾರನಿಗೂ ಪುರಪ್ರವೇಶವಾದ ಮೇಲೆ ಅಲ್ಲಿ ನೆರೆದಿದ್ದ ರಾಜರು ಇವರಿಬ್ಬರ ಬೆಡಗನ್ನೂ ವಿಲಾಸವನ್ನೂ ನೋಡಿ ಆಶ್ಚರ್ಯಚಕಿತರಾದರು. ಇಷ್ಟು ಹೊತ್ತಿಗೆ ಇರುಳಾಯಿತು. ಅಜನು ನಿದ್ದೆ ಮಾಡುವುದಕ್ಕೆ ಹೊರಟನು; ಅಮಿತತೇಜನಿಗೂ ಹಾಗೆಯೇ ನಿದ್ರಾಂಗನಾಸಂಗಮವು ಉಂಟಾಯಿತು.

ಬೆಳಗಾಯಿತು. ವಂಧಿಮಾಗಧರು ಅಜನನ್ನೂ, ಅಮಿತತೇಜನನ್ನೂ ಎಚ್ಚರಗೊಳಿಸಲು ಇಬ್ಬರೂ "ಸೆಜ್ಜೆವನೆಯಿನೆೞ್ದುರ್ದು ಪ್ರಾಭಾತಿಕ ಕ್ರಿಯೆಯಂ ನಿರ್ವರ್ತಿಸಿ" ಅಲಂಕಾರ ಮಾಡಿಕೊಂಡು ಸ್ವಯಂವರ ಮಂಟಪಕ್ಕೆ ಬರುತ್ತಾರೆ. ಕಾಳಿದಾಸನು ಪದ್ಯದಲ್ಲಿ ಹೇಳಿರುವ ಈ ಭಾಗವನ್ನು ಪೊನ್ನನು ಗದ್ಯದಲ್ಲಿ ಹೇಳಿದ್ದಾನೆ. ಇಲ್ಲಿಗೆ ಕಾಳಿದಾಸನು ೫ನೆಯ ಸ್ವರ್ಗವನ್ನು ಪೂರ್ತಿ ಮಾಡುತ್ತಾನೆ. ಪೊನ್ನನು ಇನ್ನೂ ಬರೆಯುತ್ತಲೇ ಇದ್ದಾನೆ. ಸ್ವಯಂವರ ಶಾಲೆಯನ್ನು ಪ್ರವೇಶಿಸಿದ ಕೂಡಲೇ ಸ್ವಯಂವರ ಗೃಹದಲ್ಲಿ ನೆರೆದಿರುವ ರಾಜರು ಮಾಡುವ ಶೃಂಗಾರ ಚೇಷ್ಟೆಗಳನ್ನು ವರ್ಣಿಸುವಾಗ ಪೊನ್ನನು ಕಾಳಿದಾಸನನ್ನು ಹೇಗೆ ಭಾಷಾಂತರಿಸುತ್ತಾನೆ, ನೋಡಿ !

೧) ಲೀಲಾಬ್ಜಮಂ ಕರೋದ್ಧೃತ
ನಾಲಮನತಃಪರಾಗಪರಿವೇಷಮನಾ।
ಲೋಲದಳ ನಿಪತ ಮಧುಕರ
ಮಾಲೆಯನೊರ್ವಂ ತಗುಳ್ದು ತಿರಿಪಿದ
ನಾಗಳ್ ! ಅಧ್ಯಾಸ ೫-೧೦೦

(೧) ಕಶ್ಚಿತ್ಕರಾಭ್ಯಾಮುಪಗೂಢನಾಲಂ
ಆಲೋಲಪತ್ರಾಭಿಹತ ದ್ವಿರೇಫಮ
ರಜೋಭಿರಂತಃ ಪರಿವೇಷಬಂಧಿ
ಲೀಲಾರವಿಂದಂ ಭ್ರಮಯಾಂಚಕಾರ
ಸರ್ಗ ೬, ೩೨

(೨) ಸೊಗಯಿಪ ನಲ್ಲಳ ಘನಕುಚ
ಯುಗಲಕಮೊಳ್ದೊಡೆಗಮೊದವಿ
ದುಗಃರೊಳ್ ಪೊಂಗೆ: ॥
ದಗೆಯು ಪೊಸ ಗಜ಼ಿಗಳಂ ಲೀ
ಲೆಗೆ ಸೂಟಿಯೊಳ್ ಸೀಳಲೊರ್ವ
ನುದ್ಧತಸಾದಂ ॥

(೨) ವಿಲಾಸಿನಿ: ವಿಭ್ರಮ ದಂತಪತ್ರಂ
ಅಪಾಂಡರಂ ಕೇತಕಬರ್ಹಮನ್ಯಃ ॥
ಪ್ರಿಯಾನಿತಂ ಬೋಚಿತ ಸನ್ನಿವೇಶೈ
ವಿಪಾಟಯಾಮಾಸ ಯುವಾನಖಾಗ್ರೈ
೧೭

(೩) ದಾರದ ಲಂಬಣಮಂ ಕೇ
ಯೂರ ಶಿಖಾಕೋಟಿಯೊಳೆ
ತಗುಳ್ದು ದನಿಭಪ ॥
ಸೊಲರುಭುಜಂ ಸಾಚೀಕೃತ
ಚಾರುವದನನೊರ್ವನಿರದುರಕ್ಕದ
ನುಯ್ಯಂ ೧೦೪

(೩) ವಿಸ್ರಸ್ತಮಂಸಾದಪರೋ ವಿಲಾಸೀ
ರತ್ನಾನುವಿದ್ಧಾಂಗದ ಕೋಟಿಲಗ್ನಂ
ಪ್ರಾಲಂಬಮುತ್ಕೃಷ್ಟ ಯಥಾವಕಾಶಂ
ನಿನಾ ಯ ಸಾಚೀಕೃತ ಚಾರುವಕ್ತ್ರ
೧೪

(೪) ಇಂಬಾಗಿರೆಯುಂ ಮಕುಟಮ
ದಂ ಬಿಣ್ಪನೊಳೋರೆವೋದೊಡೋ
ಸರಿಪವೊಲೊ ॥
ರ್ವಂ ಬಹಳನಖಮಯೂಖ ಕ
ದಂಬಕಮಂ ಕರಮನುತ್ತಮಾಂಗ
ಕ್ಕುಯ್ದಂ ೦೨

(೪) ಕಶ್ಚಿದ್ಯಥಾಭಾವಮುಸ್ಥಿತೋಪಿ
ಸ್ವಸಂನಿವೇಶಾದ್ವ್ಯತಿಲಂಘನೀವ ॥
ವಜ್ರಾಂಶು ಗರ್ಭಾಂಗುಲ ರಂಧ್ರ
ಮೇಕಂ
ವ್ಯಾಪಾರಯಾಮಾಸ ಕರಂ ಕಿರೀಟೇ ॥
೧೯

ಹೀಗೆ ಪೊನ್ನನು ಕಾಳಿದಾಸನ ದಾರಿಯಲ್ಲಿಯೇ ನಡೆದು ಸ್ವಯಂಪ್ರಭೆಯ ರಥವನ್ನು ಮಗಧರಾಜನ ಹತ್ತಿರ ನಿಲ್ಲಿಸುತ್ತಾನೆ. .ಕಾಳಿದಾಸನು ಇಲ್ಲಿ ನೆರೆದಿರುವ ಕೆಲವು ಪ್ರಸಿದ್ಧ ರಾಜರ ಹೆಸರುಗಳನ್ನು ಹೇಳಿದ್ದಾನೆ. ಪೊನ್ನನೂ ಇವರ ಹೆಸರನ್ನೇ ಹೇಳಿರುತ್ತಾನೆ. ಮಗಧ, ಅಂಗ, ಅವಂತಿ, ಅನೂಪ – ಈ ದೇಶಗಳ ರಾಜರೂ, ನೀಪಕುಲದ ಶೂರ ಸೇನಾಧಿಪನೂ, ಕಳಿಂಗದೇಶದ ದೊರೆಯೂ, ಪಾಂಡ್ಯನೃಪನೂ - ಇವರೆಲ್ಲರೂ ಸ್ವಯಂವರಕ್ಕೆ ಬಂದಿದ್ದರು.

---

ಶಾಂತಿ ೮೧–೮೩; ರಘು ೬೪-೬೫

ಶಾಂತಿ ೮೫, ೮೭, ೮೯, ೯೦; ರಘು ೭೯, ೭೮, ೭೦, ೭೧

ಕಾಳಿದಾಸನು ಕೊನೆಗೆ ಅಜ ಕುಮಾರನನ್ನು ಹೇಳುತ್ತಾನೆ; ಪೊನ್ನನು ಕೊನೆಗೆ ಅಮಿತತೇಜನ ಹೆಸರನ್ನು ಹೇಳುತ್ತಾನೆ. ಇಲ್ಲಿ ಪೊನ್ನನು ಬರೆದಿರುವ ಪ್ರತಿಯೊಂದು ಪದ್ಯಕ್ಕೂ ಕಾಳಿದಾಸನಲ್ಲಿ ಮೂಲವು ದೊರೆಯುತ್ತದೆ. ಸ್ವಯಂಪ್ರಭೆಯು ಹೇಗೆ ಯಾವ ಯಾವ ರಾಜರ ಬಳಿಗೆ ಹೋಗಿ, ಅವರ ವಿಷಯವಾದ ಪ್ರಶಂಸೆಗಳನ್ನು ಕಿವಿಯಾರ ಕೇಳಿ ಅವರೆಲ್ಲರನ್ನೂ ಕೊನೆಗೆ ನಿರಾಕರಿಸಿದಳೊ, ಹಾಗೆಯೇ ಇಂದುಮತಿಯೂ ನಿರಾಕರಿಸಿರುತ್ತಾಳೆ. ಇಲ್ಲಿಗೆ ಸ್ವಯಂಪ್ರಭೆಯ ಸ್ವಯಂವರವು ಮುಗಿಯಿತು. ಪೊನ್ನನೂ ಐದನೆಯ ಆಶ್ವಾಸವನ್ನು ಮುಗಿಸಿರುತ್ತಾನೆ. ಕಾಳಿದಾಸನು ಆರನೆಯ ಸರ್ಗವನ್ನು ಮುಗಿಸುವುದರಲ್ಲಿದ್ದಾನೆ. ಆ ಸರ್ಗದ ಕೊನೆಯಲ್ಲಿರುವ ಪದ್ಯವನ್ನು ಪೊನ್ನನು ಭಾಷಾಂತರಿಸಿದ್ದಾನೆ ಎಂಬುದನ್ನು ನೋಡಬಹುದು :—

ನೀರದ ಮುಕ್ತ ಶೀತಕರನಂ ನವಚಂದ್ರಿಕೆ ಪೊರ್ದುವಂತಕೂ
ಪಾರಮುನಿಂದ್ರಸಿಂಧು ಪುಗುವಂತೆ ಸುರೇಭಮನಭ್ರಮೂಗಜ
ಸ್ತ್ರೀ ರಮಣೀಚ್ಛೆಯಿಂದೆಳಸುವಂತೆ ಸಮಾನವರಂಗೆ ಕನ್ನೆಕೆ
ಯ್ಯಾರೆ ಕನಲ್ದೊನಲ್ದುದು ಮನಂ ನೆರೆದಿರ್ದ ಸುರೇಂದ್ರಯೂಥದಾ ॥

ಶಾಂತಿ. ಆ. ೬-೨

ಶಶಿನಮುಪಗತೇಯಂ ಕೌಮುದೀ ಮೇಘಮುಕ್ತಂ
ಜಲನಿಧಿಮನುರೂಪಂ ಜಹ್ನುಕನ್ಯಾವತೀರ್ಣಾ
ಇತಿ ದಮಗುಣಯೋಗ ಪ್ರೀತಯಸ್ತತ್ರ ಪೌರಾಃ
ಶ್ರವಣಕಟು ನೃಪಾಣಾಮೇಕವಾಕ್ಯಂ ವಿವವ್ರುಃ ॥

ರಘು. ಸ. ೬-೮೫

ಸಾಮಾನ್ಯವಾಗಿ ಯಾವುದಾದರೂ ಒಂದು ಸ್ವಯಂವರವು ಮುಗಿಯಿತೆಂದರೆ ಕನ್ಯೆಯನ್ನು ಪರಿಗ್ರಹಿಸಿದ ವರನು ಇತರ ರಾಜರೊಡನೆ ಯುದ್ಧಕ್ಕೆ ಸಿದ್ಧನಾಗಿರಬೇಕು. ರಘುವಂಶದಲ್ಲಿ ಸ್ವಯಂವರವಾಗಿ ಪಾಣಿಗ್ರಹಣಕ್ಕೆ ಮುಂಚೆ ಯುದ್ಧವಾಗುವುದಿಲ್ಲ. ಅಜಕುಮಾರನು ಇಂದುಮತಿಯನ್ನು

---

ಶಾಂತಿ. ೧೯, ೧೧೬, ೧೨೨, ೧೩೧, ೧೩೩, ೨೩೮, ೧೪೫, ೧೪೮, ೧೫೪, ೧೫೯.
ರಘು. ೨೪, ೩೦, ೩೮, ೫೦, ೫೪, ೬೦, ೬೬, ೬೭, ೭೭, ೮೨.

ಮದುವೆ ಮಾಡಿಕೊಂಡು ತನ್ನ ಪಟ್ಟಣಕ್ಕೆ ಹಿಂದಿರುಗಿ ಹೋಗುತ್ತಿದ್ದಾಗ ದಾರಿಯಲ್ಲಿ ಹೊಂಚುಹಾಕುತ್ತಿದ್ದ ರಾಜರೆಲ್ಲರೂ ಒಟ್ಟಾಗಿ ಸೇರಿ ಇಂದುಮತಿಯನ್ನು ಅಪಹರಿಸಬೇಕೆಂಬ ಉದ್ದೇಶದಿಂದ ಯುದ್ಧವನ್ನು ಹೂಡುತ್ತಾರೆ. ಕೊನೆಗೆ ಅಜನು ಅವರೆಲ್ಲರನ್ನೂ ನಿರಾಯಾಸವಾಗಿ ಗೆಲ್ಲುತ್ತಾನೆ. ಪೊನ್ನನು ಇಲ್ಲಿ ಯುದ್ಧ ವರ್ಣನೆಯನ್ನು ಮಾಡುವುದಿಲ್ಲ. ಸುಮ್ಮನೆ ಕಾಳಿದಾಸನು —

ಲಿಂಗೈರ್ಮುದಃ ಸಂವೃತವಿಕ್ರಿಯಾಸ್ತೇ
ಹ್ರದಾಃ ಪ್ರಸನ್ನಾ ಇವ ಗೂಢನಕ್ರಾಃ
ವೈದರ್ಭಮಾಮಂತ್ರ್ಯ ಯಯುಸ್ತದೀಯಾಂ
ಪ್ರತ್ಯರ್ಪ್ಯ ಪೂಜಾಮುಪದಾ ಛಲೇನ ॥ ಸಂ. ೭-೩೦

ಎಂಬ ಒಂದು ಶ್ಲೋಕದ ಅರ್ಥವನ್ನು ಗದ್ಯದಲ್ಲಿ ಹೇಳಿ ಪಾಣಿಗ್ರಹಣ ವರ್ಣನೆಗೆ ಮೊದಲು ಮಾಡುತ್ತಾನೆ. ಇಲ್ಲಿಯೂ ಪೊನ್ನನಿಗೆ ಕಾಳಿದಾಸನನ್ನು ಬಿಟ್ಟರೆ ಆಗುವುದಿಲ್ಲ. ಅವನ ವರ್ಣನಾ ಪದ್ಯಗಳನ್ನೇ ಕನ್ನಡದಲ್ಲಿ ಬರೆದಿರುತ್ತಾನೆ. ಹೀಗೆ ಪೊನ್ನನು ಸ್ವಯಂಪ್ರಭೆ, ಅಮಿತತೇಜರ ಮದುವೆಯನ್ನು ವರ್ಣಿಸಿ ಇನ್ನು ಮುಂದೆ ತಾನು ಹೇಳುವ ಕಥಾ ಸನ್ನಿವೇಶಕ್ಕೂ ರಘುವಂಶದಲ್ಲಿ ಅಜ-ಇಂದುಮತಿಯರ ವಿವಾಹಾನಂತರ ಬರುವ ಸನ್ನಿವೇಶಗಳಿಗೂ ಏನೂ ಸಂಬಂಧವಿಲ್ಲದುದರಿಂದ ಕಾಳಿದಾಸನನ್ನು ಅವನು ಇಲ್ಲಿಗೆ ಬಿಡಬೇಕಾಯಿತು. ಸ್ವಯಂಪ್ರಭೆಯ ಸ್ವಯಂವರದ ವರ್ಣನೆಯಲ್ಲೆಲ್ಲಾ ಪೊನ್ನನು ಸ್ವತಃ ಬರೆದಿರುವ ಪದ್ಯಗಳು ಐದೋ, ಆರೋ ಸಿಕ್ಕಬಹುದು.

ಇನ್ನು ರಘುವಂಶಕ್ಕೂ ಶಾಂತಿಪುರಾಣಕ್ಕೂ ಸಮಾನವಾದ ಇನ್ನೊಂದು ಸನ್ನಿವೇಶದ ಕಡೆಗೆ ತೆರಳೋಣ. ಪೊನ್ನನು ಶಾಂತೀಶ್ವರನ ದಿಗ್ವಿಜಯವನ್ನು ವರ್ಣಿಸುವಾಗ ರಘುಮಹಾರಾಜನ ಜೈತ್ರಯಾತ್ರೆಯನ್ನು ಹೇಳುವ ರಘು

---

ನಿಜದೇಶಪ್ರಸ್ಥಾನಾಭಿಮುಖರ್ ಅಂತಸ್ಥಕೋಪಾವಲೇಪರ್, ಬಹಿಃಪ್ರಮೋದಗಳಿ. ಸಂವೃತಾಕಾರರ್ ಗೂಢ ನಕ್ರ ಪ್ರಸನ್ನ ಹ್ರದಂಗಳಂತೆ ಪಯಣಂಬೋದರ್
ಅ. ೬, ಪುಟ ೧೧೮, ಗದ್ಯಂ
ಶಾಂತಿ ೪, ೧೪, ೨೧; ರಘು ೪, ೨೨, ೩೩

ವಂಶದ ೪ನೆಯ ಸರ್ಗವನ್ನು ಅನುಸರಿಸಿರುತ್ತಾನೆ. ರಘುವು ಆಗತಾನೆ ತಂದೆಯ ಅಪ್ಪಣೆಯಂತೆ ರಾಜ್ಯಭಾರವನ್ನು ವಹಿಸಿ ಪ್ರಜೆಗಳ ಮನಸ್ಸನ್ನು ಸಂತೋಷಪಡಿಸಿ ಅವರ ಪ್ರೀತಿಗೆ ಪಾತ್ರನಾಗಿರುತ್ತಾನೆ. ಶಾಂತಿನಾಥನೂ ತನ್ನ ತಂದೆಯಾದ ವಿಶ್ವಸೇನನಿಂದ ರಾಜ್ಯವನ್ನು ಪಡೆದು ಆಯುಧಶಾಲೆಗೆ ಹೊಸದಾಗಿ ಬಂದ ಚಕ್ರಾಯುಧವನ್ನು ಪೂಜಿಸಿ ಎಲ್ಲರಿಗೂ ಬೇಕಾದವನಾಗಿರುತ್ತಾನೆ. ಇಬ್ಬರೂ ದಿಗ್ವಿಜಯ ಯಾತ್ರೆಗೆ ಹೊರಡಬೇಕು. ಸೇನೆಗಳೆಲ್ಲವನ್ನೂ ಸಿದ್ಧಪಡಿಸಿಕೊಂಡಾಯಿತು. ಇಷ್ಟು ಹೊತ್ತಿಗೆ ಶರತ್ಕಾಲವು ತನ್ನ ಸೊಬಗನ್ನು ಬೀರುತ್ತ ಮೆಲ್ಲಮೆಲ್ಲಗೆ ತಲೆದೋರಿತು. ಪೊನ್ನನು ಶರತ್ಕಾಲದ ಸೊಬಗಿಗೆ ಮನಸೋತು —

> "ಅನ್ನೆಗಮಂಬುಜಾತರಜ ಸೀಕರಮಂ ನಡೆಗೊಂಡು ಮಾಳೆ ಸಂ
> ಪನ್ನತೆಯೊಳ್ ಪೊದಳ್ದು ಪೊಸಪೂವಿನ ಕಂಪಿನೊಳಳ್ದು ಚಿತ್ತಜೋ
> ತ್ಪನ್ನ ವಿಳಾಸಮಂ ವಿರಹಿಗಿರ್ವಡಿಮಾಡಿ ಶರದ್ವಪಂ ಸಮೀ
> ರನ್ನಸು ಸೋಂಕೆ ಘರ್ಮಜಲಬಿಂದುವನಾಜಿಸಿದತ್ತು ನಲ್ಲರಾ ॥"

ಎಂಬ ಒಂದು ಪದ್ಯದಲ್ಲಿ ಮನವಾರೆ ಹಾಡಿ ಶಾಂತಿನಾಥನ ಜೈತ್ರಯಾತ್ರೆಯನ್ನು ವರ್ಣಿಸಲು ಮೊದಲು ಮಾಡುವುದಕ್ಕೆ ಮುಂಚೆ ಕಾಳಿದಾಸನು ಶರದೃತುವನ್ನು ವರ್ಣನೆ ಮಾಡಿರುವ ೯ ಪದ್ಯಗಳನ್ನು ಭಾಷಾಂತರಿಸಿರುತ್ತಾನೆ.

ಶಾಂತಿನಾಥನು ಮ್ಲೇಚ್ಛರನ್ನು ಜಯಿಸುವ ವರ್ಣನೆಯನ್ನೂ ಅಲ್ಲಲ್ಲಿ ಬರುವ ವ್ಯಂತರೇಶರ ಕಥೆಗಳನ್ನೂ ಬಿಟ್ಟುಬಿಟ್ಟರೆ ರಘುವಿನ ದಿಗ್ವಿಜಯ ವರ್ಣನೆಗೂ ಪೊನ್ನನ ಶಾಂತೀಶನ ವರ್ಣನೆಗೂ ಏನೂ ಹೆಚ್ಚು ಕಡಮೆಯೇ ಕಾಣುವುದಿಲ್ಲ. ಪೊನ್ನನು ರಘುವಂಶದ ೪ನೆ ಸರ್ಗದ ಮೊದಲಿನ ೧೦–೧೨ ಪದ್ಯಗಳನ್ನು ಬಿಟ್ಟು ಬಿಟ್ಟು ಮಿಕ್ಕ ಆ ಸರ್ಗವೆಲ್ಲವನ್ನೂ ಭಾಷಾಂತರಿಸಿ ತನ್ನ ಗ್ರಂಥದಲ್ಲಿ ಸೇರಿಸಿಕೊಂಡಿರುತ್ತಾನೆ. ಇದಕ್ಕೆ ಉದಾಹರಣೆಯನ್ನು ಕೊಡಬೇಕಾದರೆ ಪೊನ್ನನ ವರ್ಣನೆಯೆಲ್ಲವನ್ನೂ, ರಘುವಂಶದ ೪ನೆ ಸರ್ಗವನ್ನೂ ಇಲ್ಲಿ ಬರೆಯಬೇಕಾಗುತ್ತದೆ.

———

ಶಾಂತಿ ೧೩೫, ೧೩೬, ೧೩೮, ೧೪೧; ರಘು ೧೬, ೧೭, ೨೦, ೨೪.

ಈ ಭಾಗಗಳನ್ನೇ ಅಲ್ಲದೆ ಸಮಯ ಸಿಕ್ಕಾಗಲೆಲ್ಲ ಪೊನ್ನನು ಕಾಳಿದಾಸನ ಕೃತಿಗಳಿಂದ ಪದ್ಯಗಳನ್ನು ತೆಗೆದು ತನಗೆ ಬೇಕಾದ ಬದಲಾವಣೆಗಳನ್ನು ಮಾಡಿ ತನ್ನ ಕಾವ್ಯದಲ್ಲಿ ಸೇರಿಸಿಕೊಂಡಿರುತ್ತಾನೆ. ಉದಾಹರಣೆ — ೪, ೫೫; ೫, ೭೪; ರಘು ೭, ೬೩, ೬೭.

ಅಂತೂ ಪೊನ್ನನು ಕಾಳಿದಾಸನ ಕೃತಿಗಳನ್ನು ಚೆನ್ನಾಗಿ ಓದಿ ಅವನ ಹೃದಯವನ್ನು ಅರಿತ ಜಾಣನಾದ ಸಹೃದಯನಾಗಿದ್ದನು. ಇಷ್ಟೇ ಅಲ್ಲದೆ ಪೊನ್ನನು ಇನ್ನೂ ಉಳಿದ ಪ್ರಸಿದ್ಧರಾದ ಸಂಸ್ಕೃತ ಕವಿಗಳ ಕಾವ್ಯಗಳನ್ನು ಓದಿ ಅವರ ಭಾವಗಳನ್ನೂ ವರ್ಣನೆಗಳನ್ನೂ ಅನುಕರಿಸಿರಬಹುದೆಂದು ತೋರುತ್ತದೆ.

ಪೊನ್ನನ ಕಾವ್ಯವನ್ನು ನಾವು ಯಾವ ವಿಧದಲ್ಲಿ ವಿಮರ್ಶಿಸಿ ನೋಡಿದರೂ ಅದು ಕಾಳಿದಾಸನ ಕೃತಿಗಳಿಗೆ ಸಮತೂಗಲಾರದು. ಅವನ ಪದಬಂಧವೇನೋ ಅವನು ಹೇಳಿಕೊಂಡಿರುವ ಹಾಗೆ "ಅತಿಗಂಭೀರ"ವಾಗಿದೆ. ಬಹು ಶ್ರುತರೂ ಅಲ್ಪ ಶ್ರುತರೂ ಅವನ ಪದ ಸಂಬಂಧದ ನುಣ್ಪನ್ನೂ ಇಂಪನ್ನೂ ರುಚಿ ನೋಡಿ ಆನಂದಪಡಬಹುದು. ಪೊನ್ನನಿಗೆ ಭಾಷೆಯ ಮೇಲೆ ಎಣೆಯಿಲ್ಲದ ಹತೋಟಿಯು ಇದೆ. ವಾಣಿಯನ್ನು ಕರೆದು "ತೊಟ್ಟಿ ತೊಟ್ಟಿವೆಸಕೆಯ್" ಎಂದು ಅಪ್ಪಣೆ ಮಾಡುವ ಶಕ್ತಿಯು ಪೊನ್ನನಲ್ಲಿದೆ. ಆದರೆ ಕಾಳಿದಾಸನ ಪದ ರಚನೆಯೊಡನೆ ಹೋಲಿಸಿ ನೋಡಲಾಗಿ ಪೊನ್ನನ ಪದಬಂಧವು ಬಹಳ ಒರಟಾದುದೆಂದು ಹೇಳಬಹುದು. ಕಾಳಿದಾಸನ ಪದಬಂಧವು ನಳನಳಿಸುವ, ಮುಟ್ಟಿದರೆ ಮಾಸುವ, ಎಳೆಗಾಳಿ ಸೋಕಿದರೆ ನಡುಗುವ ಕಂಪಿಡಿದ ಮಲ್ಲಿಗೆಯ ಮಲರು. ಇಂತಹ ಕಾಳಿದಾಸನ ನೈಸರ್ಗಿಕವಾದ ಪದಬಂಧವೆಲ್ಲಿ? ಪೊನ್ನನ ಪದಬಂಧವೆಲ್ಲಿ? ಹೀಗೆಯೇ ಪಾತ್ರ ರಚನೆಯಲ್ಲಿಯೂ ಉಸಿರಾಡದೆ ಎವೆಯಿಕ್ಕದೆ ಕೇಳುವ, ನೋಡುವ ಸನ್ನಿವೇಶಗಳನ್ನು ತಂದೊಡ್ಡುವ ಕೌಶಲದಲ್ಲಿಯೂ, ಕಾಳಿದಾಸನ ಹಾಗೆಯೇ ಅತಿ ದೀರ್ಘವಾದ ಸಮಾಸಗಳಿಂದ ಕೂಡಿದ ಪದಗಳನ್ನೇ ಹಾಕದೆ ಕೂಡಿದ ಮಟ್ಟಿಗೆ ಸಣ್ಣ ಸಣ್ಣ ಕನ್ನಡ ಪದಗಳನ್ನೇ ಪ್ರಯೋಗ ಮಾಡಿ ತನ್ನ ಮನಸ್ಸಿನಲ್ಲಿರುವ ಅಭಿಪ್ರಾಯವು ಒಂದು ಸಲ ಓದಿದರೆ ತಟ್ಟನೆ ಮನಸ್ಸಿಗೆ ನಾಟುವ ಹಾಗೆ ಪ್ರಸನ್ನವಾದ,

ಸರಳವಾದ, ಮೃದುವಾದ ಶೈಲಿಯಲ್ಲಿ ಪೊನ್ನನು ಬರೆದಿರುತ್ತಾನೆ. ಇವನು ಮಾಡಿರುವ ನರಕ ವರ್ಣನೆಯನ್ನು ಓದಿದರೆ ಈ ವಿಷಯವು ವಿಶದವಾಗು ತ್ತದೆ. ಎಲ್ಲಾ ರೀತಿಯಲ್ಲಿಯೂ ಪೊನ್ನನಿಗೆ ಕಾಳಿದಾಸನು ಗುರಿ, ಪೊನ್ನನು ತನ್ನ ಧ್ಯೇಯವನ್ನು ಸಾಧಿಸುವುದರಲ್ಲಿ ಬಹುದೂರ ಮುಂದುವರಿದಿರುತ್ತಾನೆ. ಆದರೆ ಕಾಳಿದಾಸನಿಗೂ ಪೊನ್ನನಿಗೂ ನಡುವೆ ಇನ್ನೂ ಬಹಳ ದೊಡ್ಡ ಅಂತರ ವಿದೆ ಎಂಬುದನ್ನು ನಾವು ಮರೆಯಲಾಗುವುದಿಲ್ಲ.

ಆದರೆ ಕೆಲವರು "ಪಂಪ, ರನ್ನರು, ಕಾಳಿದಾಸ, ಭಾರವಿ ಭಟ್ಟ, ನಾರಾಯಣ, ಬಾಣ ಮುಂತಾದ ಸಂಸ್ಕೃತ ಕವಿಗಳಿಂದ ಕೆಲವು ಪದ್ಯಗಳನ್ನು ಅನುವಾದ ಮಾಡಿ ತಮ್ಮ ಕಾವ್ಯಗಳಲ್ಲಿ ಸೇರಿಸಿಕೊಂಡಿರುತ್ತಾರೆ. ಹಾಗೆಯೇ ಪೊನ್ನನೂ ಕಾಳಿದಾಸನಿಂದ ಅನುವಾದಿಸಿರುತ್ತಾನೆ. ಪೊನ್ನನು ಕೃತಿಚೋರ ನಾದರೆ ಪಂಪ, ರನ್ನರೂ ಕೃತಿಚೋರರಾಗಲೇಬೇಕು" ಎಂದು ಹೇಳಬಹುದು. ಇದಕ್ಕೆ ಉತ್ತರವನ್ನು ಕೊಡುವುದು ಅಷ್ಟೇನೂ ಕಷ್ಟವಲ್ಲ. ಪಂಪ, ರನ್ನ ರೇನೋ ಕೆಲವು ಪದ್ಯಗಳನ್ನು ಸಂಸ್ಕೃತ ಕವಿಗಳಿಂದ ಅನುವಾದಿಸಿರುವುದು ನಿಜ. ಆದರೆ ಅವರು ಅಂತಹ ಪದ್ಯಗಳ ಮೇಲೆ ತಮಗೆ ಸಹಜವಾದ ಒಂದು ಪ್ರತಿಭೆಯನ್ನು ಬೀರಿ ತಮ್ಮದೇ ಆದ ಒಂದು ಕವಿತಾಮುದ್ರೆಯನ್ನು ಅವುಗಳ ಮೇಲೆ ಒತ್ತಿರುತ್ತಾರೆ. ತಾವು ಅನುವಾದಿಸಿರುವ ಭಾವಗಳನ್ನು ವಿವರಿಸಿ ಅವುಗಳಿಗೆ ಇನ್ನೂ ಹೆಚ್ಚಾದ ಕಳೆಯನ್ನು ಕಟ್ಟಿರುತ್ತಾರೆ. ಇದರಿಂದ ಆ ಪದ್ಯಗಳು ಅವರ ಕೃತಿಗಳೇ ಆಗಿವೆ. ಅಲ್ಲದೆ ಅವರು ಅನುವಾದಿಸಿರುವ ಪದ್ಯಗಳ ಸಂಖ್ಯೆಯೂ ಬಹಳ ಕಡಮೆ. ಪೊನ್ನನಂತೆ ಸರ್ಗ ಸರ್ಗಗಳನ್ನೇನೂ ಅವರು ತೆಗೆದುಕೊಂಡಿಲ್ಲ. ತಾವು ಅನುವಾದಿಸಿರುವ ಕವಿಗಳ ಹೆಸರುಗಳನ್ನು ಹೇಳಿ ಪಂಪ ರನ್ನರೇನೂ ಅವರನ್ನು ಗರ್ವದಿಂದ ಎತ್ತಿಹಾಕಿಲ್ಲ. ಅವರನ್ನು ಮಾನಸಿಕವಾಗಿಯೇ ಪೂಜಿಸುವ, ಗೌರವಿಸುವ ಸ್ವಭಾವವು ಪಂಪ ರನ್ನರದು. ಪೊನ್ನನೂ ತಾನು ಅನುವಾದಿಸಿರುವ ಪದ್ಯಗಳಿಗೆ ತನ್ನದೇ ಆದ ಒಂದು ಕಳೆ ಯನ್ನು ಕಟ್ಟಿರುವುದಾದರೆ ಅವನನ್ನು ನಾವು ಕೃತಿಚೋರನೆಂದು ಕರೆಯು ಬೇಕಾಗಿಲ್ಲ. ಹೀಗೆ ಮಾಡದೆ ಪೊನ್ನನು ಎಷ್ಟೋ ಎಡೆಗಳಲ್ಲಿ ಕುಡಿಮಿಂಚಿನಂತೆ ರಮಣೀಯವಾದ ಹೊಳಪುಳ್ಳ ಕಾಳಿದಾಸನ "ಧ್ವನಿ"ಗಳನ್ನು ಬಿಚ್ಚಿ ಹೇಳಿ

ಅವನ ಕಾವ್ಯದಲ್ಲಿರುವ ನಯವಾದ ಒಂದು ನೈಸರ್ಗಿಕತೆಯನ್ನು ಬಿಡಿಸಿರುವನು. ಇನ್ನು ಕೆಲವು ಪದ್ಯಗಳನ್ನು ಕಾಳಿದಾಸನ ಆಶಯಕ್ಕೆ ಸ್ವಲ್ಪವೂ ಕೇಡುಂಟಾಗದ ಹಾಗೆ ಪೊನ್ನನು ಭಾಷಾಂತರಿಸಿರುತ್ತಾನೆ. ಹೀಗೆ ಮಾಡಿದ್ದರಿಂದ ಅವನೇನೂ ತಾನು ಅನುವಾದಿಸಿರುವ ಪದ್ಯಗಳಿಗೆ ಮೂಲದಲ್ಲಿರುವುದಕ್ಕಿಂತ ಹೆಚ್ಚು ಕಳೆಯನ್ನು ಕಟ್ಟಿದ ಹಾಗಾಗಲಿಲ್ಲ. ಹೀಗೆ ಕವಿಚಕ್ರವರ್ತಿಯಾದ ಪೊನ್ನನನ್ನು ನಾವು ಕಾಳಿದಾಸನಿಗೆ ಋಣಿಯೆಂದು ತೋರಿಸಿದುದರಿಂದ ಪೊನ್ನ ಪಕ್ಷಪಾತಿಗಳು ತಮ್ಮ ಮನಸ್ಸನ್ನು ವೃಥಾ ನೋಯಿಸಿಕೊಳ್ಳಬಾರದೆಂದು ನಾವು ಸವಿನಯವಾಗಿ ಬೇಡುತ್ತೇವೆ. ನಮಗೇನೂ ಪೊನ್ನನನ್ನು ಕಂಡರೆ ಹಗೆತನವಿಲ್ಲ. ಇತರರಿಗೆ ಅವನಲ್ಲಿ ಎಷ್ಟು ಗೌರವವಿದೆಯೊ ಅಷ್ಟೇ ಗೌರವವು ನಮಗೂ ಅವನಲ್ಲಿದೆ. ಆದರೆ ಇರುವ ಸಂಗತಿಯನ್ನು ಇರುವ ಹಾಗೆ ಹೇಳಿರುತ್ತೇವೆ. ಅಂತೂ ಪೊನ್ನನು ತನ್ನ ವಿಷಯವಾಗಿ ಹೇಳಿಕೊಂಡಿರುವ ಕೆಲವು ಮಾತುಗಳು ಅತಿಶಯೋಕ್ತಿಯೆಂದು ಒಪ್ಪಿಕೊಳ್ಳಬೇಕು.

ಕಾಳಿದಾಸನ ಇಂದುಮತೀ ಸ್ವಯಂವರ ವರ್ಣನೆಯನ್ನೂ, ರಘುರಾಜನ ದಿಗ್ವಿಜಯ ವರ್ಣನೆಯನ್ನೂ ನಾವು ಖಂಡಕಾವ್ಯಗಳೆಂದು ಕರೆದರೆ ಪೊನ್ನನ ಜ್ಯೋತಿರ್ಮಾಲೆಯ ಸ್ವಯಂವರ ವರ್ಣನೆಯನ್ನೂ, ಶಾಂತೀಶನ ದಿಗ್ವಿಜಯ ವರ್ಣನೆಯನ್ನೂ ಹಾಗೆಯೇ ಕರೆಯಬೇಕು. ಇವುಗಳನ್ನು ಅಲ್ಲಲ್ಲಿ ಬರುವ ವ್ಯಂತರೇಶರ ಕಥೆಗಳನ್ನು ಕಿತ್ತುಹಾಕಿ ಶಾಂತಿಪುರಾಣದಿಂದ ಹೊರಕ್ಕೆ ತೆಗೆದು ಮುದ್ರಿಸಿದರೆ ನಮಗೆ ಎರಡು ಒಳ್ಳೆಯ ಖಂಡ ಕಾವ್ಯಗಳು ದೊರೆಯುತ್ತವೆ. ಇವುಗಳಿಗಿಂತ ಉತ್ತಮವಾದ ಭಾಷಾಂತರವನ್ನು ಮಾಡುವುದು ಸುಲಭವಲ್ಲ. ಪೊನ್ನನು ಆ ಕೆಲಸವನ್ನು ತಾನೆ ನಮಗಾಗಿ ಮಾಡಿರುತ್ತಾನೆ. ಇದಕ್ಕಾಗಿ ಅವನಿಗೆ ನಾವು ಎಷ್ಟು ಕೃತಜ್ಞರಾಗಿದ್ದರೂ ತೀರದು.

## ಧವಳವೆಂಬ ಹಾಡಿನ ಸ್ವರೂಪ

'ಧವಳ' ಎಂಬ ಪದಕ್ಕೆ ಇರುವ ಹಲವು ಅರ್ಥಗಳನ್ನು ಆಶ್ರಯಿಸಿ ರನ್ನನಿಂದ ರಚಿತವಾಗಿರುವ ಈ ಕೆಳಗಿನ ಪದ್ಯ ಅವನ 'ಗದಾಯುದ್ಧ' ಕಾವ್ಯದಲ್ಲಿ ದೊರೆಯುತ್ತದೆ :

> ಧವಳಗಜೇಂದ್ರಮುಂ ಧವಳಚಾಮರಮುಂ ಧವಳಾತಪತ್ರಮುಂ
> ಧವಳವಿಲೋಚನೋತ್ಪಲ ಲವಧೂಜನಮುಂ ಬೆರಸಪ್ಪುದಿಕ್ತಟಂ
> ಧವಳಿಸೆ ಕೀರ್ತಿಯಿಂಧವಳಮಂಗಳಗೇಯದಿನೊಪ್ಪಿ ಬರ್ಪ ಕೌ
> ರವಧವಳಂಗೆ ದೇಸಿಗನೆ ಬರ್ಪವೊಲೊರ್ವನೆ ಬರ್ಪುದಾದುದೇ ॥

ಈ ಪದ್ಯಕ್ಕೆ ಶ್ರೀ ತೀ.ನಂ. ಶ್ರೀಕಂಠಯ್ಯನವರು ಬರೆದಿರುವ ಟಿಪ್ಪಣಿ: 'ಧವಳಾತಪತ್ರ ಶ್ವೇತಪತ್ರ, ಧವಳ ಮಂಗಳೇಯ—ಧವಳವೆಂಬ ಮಂಗಳ ಗೀತ, ಧವಳ ಎಂಬ ರಾಗವೂ ಉಂಟು. ಕೌರವ ಧವಳ—ಕೌರವ ಪುಂಗವ, ಕೌರವ ಶ್ರೇಷ್ಠ ; ಇಲ್ಲಿ ಧವಳ ಎಂದರೆ ಉತ್ತಮವಾದ ವೃಷಭ. ಈ ಪದ್ಯದಲ್ಲಿ ಧವಳ ಶಬ್ದದ ನಾನಾರ್ಥಗಳನ್ನು ಕವಿ ಉಪಯೋಗಿಸಿಕೊಂಡಿದ್ದಾನೆ. ಧವಳ[1] ಎಂದರೆ ಮಂಗಳ ಕಾಲದಲ್ಲಿ ಹೇಳುವ ಒಂದು ಬಗೆಯಾದ ಹಾಡು

---

'ಶ್ರೀ ಪಂಜೆಯವ ನೆನಪಿಗಾಗಿ ' (1952), ಪುಟಗಳು ೯೦—೯೪

1 ಗದಾಯುದ್ಧ ಸಂಗ್ರಹ, ಪು. ೧೫೦

ಎಂದೂ ಅದು ಒಂದು ರಾಗದ ಹೆಸರೆಂದೂ ಸ್ಪಷ್ಟವಾಗಿದೆ. ಸಂಗೀತಶಾಸ್ತ್ರದಲ್ಲಿ "ಧವಲ : ರಾಗ ವಿಶೇಷಃ ಭರತಮತೇ ಹಿಂದೋಲರಾಗ ಸ್ಯಾಷ್ಟಮ ಪುತ್ರಃ " ಎಂಬ ವಿವರಣೆಯಿದೆಯೆಂದು ತಿಳಿಯುತ್ತದೆ. ಹಿಂದೋಲರಾಗ[2] ದಿಂದ ಜನ್ಯವಾದ ರಾಗಗಳಲ್ಲಿ ಇದು ಎಂಟನೆಯದೆಂದು ಕಾಣುತ್ತದೆ. ಛಂದ ಶ್ಯಾಸ್ತ್ರದಲ್ಲಿ ಧವಲ ಎಂಬ ಹೆಸರಿನ ಒಂದು ವೃತ್ತವಿದೆ ; ಇದರಲ್ಲಿ ಪಾದ ವೊಂದಕ್ಕೆ ೧೯ ಅಕ್ಷರಗಳಿದ್ದು ಆರುನಗಣಗಳು—ಒಂದು ಗುರುವಿನ ವಿನ್ಯಾಸ ಕಂಡುಬರುತ್ತದೆ. ಪ್ರಕೃತ[3] ಇಲ್ಲಿ ಧವಳವು ರಾಗ ವಿಶೇಷವೆಂಬ ಅಂಶವನ್ನಾಗಲಿ ಅದು ಒಂದು ವೃತ್ತವೆಂಬ ಸಂಗತಿಯನ್ನಾಗಲಿ ಅಷ್ಟಾಗಿ ಗಮನಿಸದೆ ಅದು ಒಂದು ಜಾತಿಯ ಹಾಡೆಂಬುದನ್ನು ಮಾತ್ರ ಪರಿಶೀಲನೆಗೆ ಎತ್ತಿಕೊಂಡಿದೆ. ಸಿದ್ಧರಾಮನು ಮಾಡಿಸಿದ ಸಾವಿರಾರು ಮಂಗಳ ವಿವಾಹಗಳ ಸಂದರ್ಭದಲ್ಲಿ ಅಂಗನೆಯರು 'ಆರತಿಗಳಂ ಬೆಳಗಿ' ಅಲ್ಲಲ್ಲಿ ಧವಳವನ್ನು ಹಾಡುತ್ತಿದ್ದರಂತೆ. ಅದು ಮಂಗಳದ ಸಮಯದಲ್ಲಿ ಆರತಿ ಎತ್ತುವಾಗ ಹೆಣ್ಣುಮಕ್ಕಳು ಹೇಳುವ ಹಾಡೆಂಬುದರಲ್ಲಿ ಸಂದೇಹವಿಲ್ಲ. ಈ ಜಾತಿಯ ಹಾಡು ಹತ್ತನೆಯ ಶತಮಾನದ ಕನ್ನಡ ಜನತೆಯಲ್ಲಿ ಪ್ರಚುರವಾಗಿದ್ದಿತೆಂಬುದಕ್ಕೆ ರನ್ನನು ಸಾಕ್ಷಿ ; ಅಲ್ಲಿಂದ ಮುಂದಕ್ಕೆ ೧೩ನೆಯ ಶತಮಾನದಲ್ಲಿಯೂ ಅದು ಜನಬಳಕೆಯಲ್ಲಿದ್ದಿತೆಂಬುದನ್ನು ರಾಘವಾಂಕ ಹೇಳುತ್ತಾನೆ. ಈಗಲೂ ಹೆಣ್ಣುಮಕ್ಕಳು ಹೇಳುವ ಹಾಡುಗಳಲ್ಲಿ 'ಧವಳ' ಗಳು ಅಲ್ಲಲ್ಲಿ ಹುದುಗಿಕೊಂಡಿರಬಹುದು. ಹೀಗೆ ಕನ್ನಡದಲ್ಲಿ ಅಂದಿನ ಕಾಲದಿಂದಲೂ ಜನಪ್ರಿಯವಾಗಿರುವ ಈ ಹಾಡಿನ ಸ್ವರೂಪವೇನೆಂಬುದನ್ನು ಆದಷ್ಟು ಮಟ್ಟಿಗೆ ವಿವರಿಸುವುದು ಈ ಲೇಖನದ ಉದ್ದೇಶ.

ತೆಲುಗು ಸಾಹಿತ್ಯದಲ್ಲೂ ತೆಲುಗು ಹೆಣ್ಣುಮಕ್ಕಳ ಹಾಡುಗಳಲ್ಲೂ 'ಧವಳ' ವೆಂಬ ಹಾಡಿನ ಉಲ್ಲೇಖ ಕಂಡುಬರುವುದಲ್ಲದೆ ಅದರ ಸ್ವರೂಪವನ್ನು ತಿಳಿಯಲನುಕೂಲಿಸುವಂತೆ ಕೆಲವು ಹಾಡುಗಳೂ ದೊರೆಯುತ್ತವೆ. ಶ್ರೀ ಚಿಂತಾದೀಕ್ಷಿತರು ತಾವು ಬರೆದಿರುವ 'ಆಡ್ಲನಾಳ ಪಾಟಲು' (ಹೆಂಗಸರ ಹಾಡುಗಳು) ಎಂಬ ಲೇಖನದಲ್ಲಿ ಹಲವು ಬಗೆಯ ಹಾಡುಗಳನ್ನು ಹೆಸರಿಸಿ

---

2 ಶಬ್ದಕಲ್ಪದ್ರುಮದಲ್ಲಿ ನೋಡಿ. 3 ಪ್ರಾಕೃತ ಪೈಂಗಳ ೨-೧೯೨

ಅವುಗಳು ಕೆಲವು ಪ್ರಯೋಗಗಳನ್ನು ತೋರಿಸಿದ್ದಾರೆ. ಅಪ್ಪಕವೀಯ[4] ಆನಂದರಂಗರಾಟ್ ಛಂದಸ್ಸು, ಗುಡಾರು ವೆಂಕಟದಾಸ ಕವಿಯ ಬಲರಾಮ ಚರಿತ್ರೆ, ವೆಂಕಟೇಶ್ವರವಿಜಯ ವಿಲಾಸಮು, ಲಕ್ಷ್ಮಣ ದೀಪಿಕೆ, ಚೇಮಕೂರು ವೆಂಕಟಕವಿಯ ವಿಜಯ ವಿಲಾಸಮು—ಈ ಆಂಧ್ರ ಗ್ರಂಥಗಳಲ್ಲಿ 'ಧವಳ' ಎಂಬ ಹಾಡಿದೆ. ಹೆಸರನ್ನು ಮಾತ್ರ ಹೇಳಿದೆ. ಚಿಕ್ಕಯ್ಯ ಚರಿತ್ರ,[5] ಪ್ರಹ್ಲಾದ ವಿಜಯಮು ಮೊದಲಾದ ಯಕ್ಷಗಾನ ಕೃತಿಗಳಲ್ಲಿ ಕೆಲವು ಧವಳ ಗಳು ದೊರೆಯುತ್ತವೆ. 'ಅಪ್ಪಕವೀಯ' ದಲ್ಲಿ 'ಧವಳ'ಕ್ಕೆ ಒಂದು ಲಕ್ಷ್ಯವೂ ದೊರೆಯುತ್ತದೆ. ಶ್ರೀ ಚಿಂತಾದೀಕ್ಷಿತರು ಹಲವು ಗ್ರಂಥಗಳಿಂದ ಉದ್ಧರಿಸಿ ಕೊಟ್ಟಿರುವ ಕೆಲವು ಧವಳಗಳನ್ನು ಇಲ್ಲಿ ಕಾಣಿಸಿದೆ.

1. ರುದ್ರಕವಿ ಬರೆದಿರುವ 'ಸುಗ್ರೀವ ವಿಜಯಮು' ಎಂಬ ಗ್ರಂಥ ದಲ್ಲಿ ಸುಗ್ರೀವ ಪಟ್ಟಾಭಿಷೇಕವಾದ ಮೇಲೆ ಪುಣ್ಯಾಂಗನೆಯರು ಈ ಕೆಳಗಿನ ಧವಳಗಳನ್ನು ಹಾಡಿದರೇದು ಹೇಳಿದೆ.

ಶ್ರೀ ರಾಮುಡು ಗುಣಧಾಮುಡು ವಾರಿಜಲೋಚನುಡು
ಶೂರತ ರಾವಣು ಗೊಲ್ಚೀ ನಾರೀಮಣಿ ದೇವಲಯುನ
ರಾಮುನಿ ಕೃಪ ಕಪಿ ರಾಜ್ಯಮು ಕ್ಷೇಮಂಬುನ ಪಾಲಿಂಚೇ
ಶ್ರೀಮಂತುಡು ಸುಗ್ರೀವುಡು ಭೂಮಂಡಲಿ ಪೊಗಡೊಂದು
ಸಂಗರವಿಜಯುಮುಕೋನುಪ್ಪೊಂಗೆಡು ಸುಗ್ರೀವುನಕು
ಸಂಗತಿಗಾ ಯುವರಾಜ್ಯತನಂಗದುಡಿಲ ಪೆಂಪ್ಪೊಂದು

2. ವಿಜಯರಾಘವ ನೃಪತಿಗೂ ಕಾಂತಿಮತಿಗೂ ವಿವಾಹವಾದ ಸಂದರ್ಭದಲ್ಲಿ ಬ್ರಾಹ್ಮಣ ಸ್ತ್ರೀಯರು ಧವಳಗಳನ್ನು ಹಾಡಿದರೇದು 'ಮನ್ನಾರು ದಾಸ ವಿಲಾಸನಾಟಕಮುಲು' ಎಂಬ ಗ್ರಂಥದಲ್ಲಿ ಉಕ್ತವಾಗಿದೆ :

---

4. ಭಾರತಿ (ರಜತೋತ್ಸವ ಸಂಚಿಕೆ, ಜನವರಿ ೧೯೪೯) ; ಸಂಪುಟ. ೨೬, ಸಂ. ೧, ಪು. ೧೫೦—೧೯೨.

5. ಅದೇ ಪು. ೧೮೭.

ಜಯ ಜಯ ತಂಜಪುರ ವಾಸಾ
ಜಯ ಜಯ ಮಂಜುಳಹಾಸ
ಜಯ ಜಯ ಮದನವಿಲಾಸ
ಜಯ ಜಯ ಮನ್ನಾರುದಾಸ ॥
ಜಯ ಜಯ ಸುಜನ ವಿಧೇಯ
ಜಯ ಜಯ ಸಮರ ಗಾಂಗೇಯ
ಜಯ ಜಯ ದಾಸರಾಧೇಯ
ಜಯ ಜಯ ದಕ್ಷಿಣ ರಾಯ ॥

3. "ಭವಾನೀ ಶಂಕರ ವಿಲಾಸ" ಎಂಬ ಯಕ್ಷಗಾನದಲ್ಲಿ ಉಮಾ ಮಹೇಶ್ವರರನ್ನು ಚಿನ್ನದ ಉಯ್ಯಾಲೆಯಲ್ಲಿ ಕುಳ್ಳಿರಿಸಿ ಸಖಿಯರು ಕೈವಾರಿ ಸುತ್ತ ಹಾಡಿದ ಧವಳ ಹೀಗಿದೆ :

ಜಯ ಜಯ ಜಗದಾಧಾರಾ ಜಯ ಜಯ ಜಲಧಿಗಭೀರಾ
ಜಯ ಜಯ ಶೈಲವಿಹಾರಾ ಜಯ ಜಯ ಮಂದರ ಧೀರಾ
ಜಯ ಜಯ ಪನ್ನಗ ಹಾರಾ ಜಯ ಜಯ ವೈರಿವಿದಾರಾ॥

4. ಕಾಕುಮಾರಿ ಅಪ್ಪಕವಿ ಸ್ವನಾಮಖ್ಯಾತವಾದ ಲಕ್ಷಣ ಗ್ರಂಥದಲ್ಲಿ ಧವಳಕ್ಕೆ ಕೊಟ್ಟಿರುವ ಲಕ್ಷ್ಯ (4-401)

ಅಕ್ಷರ ಹರಿವಿಕ ಜಾಂಬುರು । ಹಾಕ್ಷಾ ಯಕ್ಷಪಸಖ
ರಕ್ಷಕ ಸುರವಿದುರ ದ್ವಿಪ । ರಕ್ಷಾರಾಕ್ಷಸ ವಿದಳನ
ಪಕ್ಷಗಪತಿರಥ ಪೌಂಡ್ರ ವಿ । ಪಕ್ಷಾಭಕ್ಷಿತದವಶಿಖಿ ।
ವೃಕ್ಷಗ ಸಹಚರ ಋಕ್ಷಪ । ದೃಕ್ಷಾಋಕ್ಷಪಸುಹಿತ್ರೃಪ॥

ಕನ್ನಡದಲ್ಲಿಯೂ "ಧವಳದ ಹಾಡು" ಜನಪದ ಸಾಹಿತ್ಯದಲ್ಲೂ ಹೆಂಗಳೆಯರ ಹಾಡಿನಲ್ಲೂ ಬಳಕೆಯಲ್ಲಿದ್ದಂತೆ ಕಾಣುತ್ತದೆ. "ಧವಳದ ಹಾಡು ಮುಂತಾದುವು" ಎಂಬ ಹೆಸರಿನ ಒಂದು ಗ್ರಂಥ ಮದ್ರಾಸು ಓರಿಯಂಟಲ್ ಲೈಬ್ರರಿಯಲ್ಲಿರುವಂತೆ ಆ ಸಂಸ್ಥೆಯ ಕನ್ನಡ ಕೈಬರಹದ ಗ್ರಂಥಗಳ ಸೂಚಿಯಿಂದ

ಗೊತ್ತಾಗುತ್ತದೆ.[6] "ಇದರಲ್ಲಿ ಸೀಮಂತದ ಧವಲ, ಜಾತಕರ್ಮ ಧವಲ, ಉಪನಯುನದ ಧವಲ, ಭರತೇಶ್ವರನ ಧವಲ" ಮುಂತಾದ ಹಾಡುಗಳಿವೆ.[7] ಈ ಹಾಡುಗಳು ಯಾರಿಂದ ರಚಿತವಾದುವೆಂಬುದನ್ನು ತಿಳಿಯುವುದಕ್ಕೆ ಯಾವ ಗ್ರಂಥಸ್ಥವಾದ ಆಧಾರವೂ ದೊರೆಯುವುದಿಲ್ಲ. ಇದರ ತಾಳೆಯೋಲೆಯ ಪ್ರತಿ ತುಂಬ ಜೀರ್ಣವಾಗಿರುವುದರಿಂದ ಅಲ್ಲಲ್ಲಿ ಹಾಡುಗಳ ಪಾದಗಳು ತ್ರುಟಿತವಾಗಿ ನಷ್ಟವಾಗಿವೆ. ಇದರಿಂದ ಉದ್ಧೃತವಾಗಿ ಮುದ್ರಿತವಾಗಿರುವ ಕೆಲವು ಹಾಡುಗಳನ್ನು ಇಲ್ಲಿ ನೋಡಬಹುದು.

1) ಮಂಗಳವಾಗಲಿ ಧರೆಗೆ । ಮಂಗಳವಾಗಲಿ ಜನಕೆ
ಮಂಗಳವತಿಶಯುವಾಗಲಿ ।......... ॥

2) ಸೊಗಸುವ ಸೊಬಗಿನೊಡನೆ । ಮೊಗದೋರುವ ಯೌವನದ ॥
ಮೃಗರಾಜೇಂದ್ರನ ಮದುವೆ ।............ ॥

3) ತನ್ನ ಕುಲದ ಹಿರಿಯರು । ಮನ್ನಿಸಿ ಕರೆಯಿಸಿ ಮನೆಗೆ ॥
ಬಿನ್ನವಿಸಿದನವರಿಗೆ । ತನ್ನಂತಸ್ಥವನು

4) ಮದಗಜಗಳ ನಲಿದೇಲು । ಮದವಕ್ಕಳು ಕುಳ್ಳಿರಲು ।
ಚದುರೆಯುರಂದ ಚಮರಗಳ ಡಾಳಿಸುತಿರಲು ॥

5) ಬೆಳಗಾಯಿತು ಬೆಳಗಿನೊಳು । ಗೆಲುವಿಂದರೆ ಕಣ್ದೆರೆದು
ಝುಳಕವಮಾಡಿ ಸಿಂಗರಿಸಿ ।........... ಚಿತಾರ್ಥದೊಳಂ ॥

6) ತಾವರೆಯುಲಿ ಕಳಹಂಸೆ । ಭಾವೆರಸಿ ಯಿ ರ್ಪಂತೆ ॥
ದೇವಿಸಹಿತ ಸೆಜ್ಜೆಯುಮನೆ ।............ದರ್ಾ ॥

ಮೇಲೆ ಕಾಣಿಸಿರುವ ಕನ್ನಡದ ಆರು ಧವಳಗಳಲ್ಲಿ ೩ನೆಯದು ಹೊರತಾಗಿ ಯಾವುದೂ ಪೂರ್ಣವಾಗಿಲ್ಲದಿರುವುದು ಶೋಚನೀಯ. ೪ನೆಯದು ಪೂರ್ಣವಾಗಿರುವಂತೆ ತೋರುವುದಾದರೂ "ಡಾಳಿಸುತಿರಲು" ಎಂಬುದರ ಹಿಂದೆ

---

6. A Descriptive Catalogue of the Kannada Manuscripts Vol. III, No. 364.
7. ಅದೇ. ಪು ೫೮೮.

೪ನೆಯ ಪಾದದ ಭಾಗವಾಗಿ ಏನೋ ಇದ್ದಿರಬೇಕೆಂಬ ಸಂದೇಹವುಂಟಾಗು ತ್ತದೆ ; ಏಕೆಂದರೆ ಈಗ ಇರುವಂತೆ ಆ ಪಾದದಲ್ಲಿ ಪ್ರಾಸಾಕ್ಷರವಾದ 'ದ' ಅನ್ನು ಒಳಗೊಂಡ ಭಾಗವಿಲ್ಲ. ಧವಳಗಳ ರಚನೆಯಲ್ಲಿ ಏನಾದರೂ ಛಂದಸ್ಸಿನ ತತ್ತ್ವ ಅಡಗಿದೆಯೇ ಎಂಬುದನ್ನು ಪರೀಕ್ಷಿಸಿ ಅವುಗಳ ಲಕ್ಷಣವನ್ನು ಈಗ ಕಂಡುಹಿಡಿಯಬೇಕಾಗಿದೆ. ಹಿಂದೆ ಹೇಳಿರುವ ತೆಲುಗಿನ ಉದಾಹರಣೆ ಗಳನ್ನು ಮೊದಲು ತೆಗೆದುಕೊಳ್ಳಬಹುದು. ಇಲ್ಲಿ ಒಂದು ಧವಳದ ಪದ್ಯ ವನ್ನು ಎರಡು ಪಂಕ್ತಿಗಳಲ್ಲಿ ಅಚ್ಚುಹಾಕಿದೆ. ಆದರೆ ಪ್ರಾಸಸ್ಥಾನವನ್ನು ಗಮನಿಸಿದರೆ ಅವು ನಾಲ್ಕು ಇವೆಯೆಂದೂ ಆದ್ದರಿಂದ ೪ ಪಾದಗಳು ಪದ್ಯ ದಲ್ಲಿರಬೇಕೆಂದೂ ತಿಳಿಯುತ್ತದೆ. ಧವಳವು ಒಂದು ಬಗೆಯಾದ ಚತುಷ್ಪದಿ ಸಾಮಾನ್ಯವಾಗಿ ಪ್ರತಿಪಾದದಲ್ಲಿಯೂ ೬ ಮಾತ್ರೆಗಳ ಗಣ ಎರಡೆರಡು ಬರುತ್ತವೆ. ಕೆಲವು ವೇಳೆ ೨ನೆಯ ಪಾದದ ಕೊನೆಯಗಣ ೬ ಮಾತ್ರೆಗಳಿಗಿಂತ ಕಡಿಮೆಯಾಗಿದ್ದರೂ ಆ ಊನ ಗಣಕ್ಕೆ ೬ ಮಾತ್ರೆಗಳಷ್ಟೇ ಬೆಲೆ. ಉದಾ :-

೧ ೨

ಶ್ರೀ ರಾಮುಡು ೨ ಗುಣಧಾಮುಡಿ

೩ ೪ ೩ ೪

ವಾರಿಜಲೋ ೧ ಚನುಡು ಅಥವಾ ವಾರಿಜ ೧ ಲೋಚನುಡು

ಇಲ್ಲಿ ೪ನೆಯ ಗಣವನ್ನು ಎಳೆದು ಹೇಳಿ ೬ ಮಾತ್ರೆಗಳಷ್ಟು ಕಾಲವನ್ನು ಅದಕ್ಕೆ ಕೊಡಬೇಕಾಗುತ್ತದೆ ; ಕೆಲವು ವೇಳೆ ೬ ಮಾತ್ರೆಗಳ ಗಣವನ್ನು ೨+೪ ಎಂದಾಗಲಿ ೪+೨ ಎಂದಾಗಲಿ ೩+೩ ಎಂದಾಗಲಿ ಒಡೆಯಬಹುದು; ಮತ್ತೆ ಕೆಲವು ವೇಳೆ ಪಾದದ ಎರಡು ಗುಣಗಳನ್ನು ಒಟ್ಟಾಗಿ ಬೆಸೆದುಬರುವ ೧೨ ಮಾತ್ರೆಗಳನ್ನು೪+೪+೪ ಎಂದು ಮೂರು ಚತುರ್ಮಾತ್ರಾಗಣವಾಗಿ ಮಾಡಿಕೊಳ್ಳಲೂಬಹುದು.

೪ ೪ ೪ ೬ ೬

ಶೂರತ ರಾವಣು ಗೂಲ್ಚೀ ಅಥವಾ ಶೂರತರಾ ವಣಗೂಲ್ಚೀ

ನಾರೀಮಣಿ ದೇವಾಲಯಬುನ್

ಹೀಗೆ ಷಣ್ಮಾತ್ರಾಗಣವನ್ನು ಬಳಸಿಕೊಳ್ಳುವಾಗ ಮೇಲೆ ಸೂಚಿಸಿದ ಸ್ವಾತಂತ್ರ್ಯಕ್ಕೆ ಅವಕಾಶವಿದ್ದರೂ ಒಟ್ಟಿನಲ್ಲಿ ರೂಪಕತಾಳಕ್ಕೆ ಅನುಸಾರಿಯಾಗಿ ಪದ್ಯದ ಲಯಕ್ರಮವಿರಬೇಕಾದದ್ದು ಮುಖ್ಯವಾದ ವಿಷಯ. 'ಅಪ್ಪಕವೀಯ' ದಲ್ಲಿ ಕೊಟ್ಟಿರುವ ಲಕ್ಷ್ಯಪದ್ಯದಲ್ಲಿ ಎರಡು ಧವಳಗಳು ಅಡಗಿವೆ ; ಅವು ಹೇಗೆ :

1) ಅಕ್ಷರ ಹರಿ ವಿಕಟಾಂಬುರು ।
ಹಾಕ್ಷಾಯಕ್ಷಪಸಖ
ರಕ್ಷಕ ಸುರವಿದುರ ದ್ವಿಪ ।
ರಕ್ಷಾ ರಾಕ್ಷಸವಿದಳನ ॥

2) ಪಕ್ಷಗ ಪತಿರಥ ಪೌಂಡ್ರವಿ ।
ಪಕ್ಷಾ ಭಕ್ಷಿತದವಶಿಖಿ ॥
ವೃಕ್ಷಗ ಸಹಚರ ಋಕ್ಷ ಸ ।
ದೃಕ್ಷಾ ಋಕ್ಷಪದುಹಿತೃಪ ॥

ಇಲ್ಲಿಯೂ ಪ್ರತಿ ಪಾದದಲ್ಲಿಯೂ ಸಾಮಾನ್ಯವಾಗಿ ಎರಡೆರಡು ಷಟ್ಕಲಗಳಿರುವುದು ಸ್ಪಷ್ಟವಾಗಿದೆ. ಮೊದಲನೆಯ ಪದದ ಎರಡನೆಯ ಪಾದದ ಅಂತ್ಯ 'ಕ್ಷಪಸಖ' ಎಂಬ ಊನಗಣದಿಂದ ಕೂಡಿರುವಂತೆ ಕಂಡರೂ ಅದಕ್ಕೂ ೬ ಮಾತ್ರೆಗಳ ಬೆಲೆಯನ್ನು ಹಾಡುವಾಗ ಕಾಣಿಸಬೇಕು. ತಾಳದ ಅಘಾತ ಸಾಮಾನ್ಯವಾಗಿ ಗಣದ ಅಧ್ಯಕ್ಷರದ ಮೇಲೆ ಬೀಳುತ್ತದೆ. ಒಟ್ಟಿನಲ್ಲಿ ತೆಲುಗು ಧವಳದ ಲಕ್ಷಣವನ್ನು ಹೀಗೆ ಹೇಳಬಹುದು : ನಾಲ್ಕು ಪಾದಗಳು, ಆದಿಪ್ರಾಸ, ಪ್ರತಿಪಾದದಲ್ಲಿಯೂ ಷಣ್ಮಾತ್ರೆಯ ಎರಡೆರಡು ಗಣಗಳು—ಇವು ಇರಬೇಕು.

ಈ ಲಕ್ಷಣ ಕನ್ನಡದ ಧವಳಗಳಿಗೂ ಅನ್ವಯಿಸುವುದೇ ಇಲ್ಲವೇ ಎಂಬು ದನ್ನು ಇನ್ನುನೋಡಬಹುದು. ಇಲ್ಲಿಯೂ ೪ಪಾದಗಳೂ ಆದಿ ಪ್ರಾಸವೂ ಇವೆ; ಪಾದವೊಂದಕ್ಕೆ ಎರಡೆರಡರಂತೆ ೬ ಮಾತ್ರೆಗಳ ಗಣದ ವಿನ್ಯಾಸವಿದೆ ; ಊನ ಗಣ ಬಂದಾಗ ಅದನ್ನು ಷಣ್ಮಾತ್ರಾ ಕಾಲದಷ್ಟು ಎಳೆಯಬೇಕಾದ ಅವಶ್ಯ

ಕತೆಯೂ ಇದೆ. ೭ನೆಯ ಉದಾಹರಣೆಯ ಗಣವಿನ್ಯಾಸ ಹೀಗಿದೆ: ತನ್ನ ಕುಲದ ಹಿರಿಯನು—

೧ ೨
ತನ್ನ ಕುಲದ । ಹಿರಿಯರನು ।
೩ ೪
ಮನ್ನಿಸಿ ಕರೆ । ಯಿಸಿ ಮನೆಗೆ ॥
೧ ೨
ಬಿನ್ನವಿಸಿದ । ನವರಿಗೆ
೩ ೪
ತನ್ನಂತ । ಸ್ಥಪನು

ಈ ಪದ್ಯದ ಉತ್ತರಾರ್ಧದ ೩ ಮತ್ತು ೪ನೆಯ ಗಣಗಳನ್ನು ಹಾಡುವಾಗ ಹಿಗ್ಗಿಸಿಕೊಳ್ಳಬೇಕು. ಆದ್ದರಿಂದ ತೆಲುಗಿನ ಧವಳಕ್ಕೂ ಕನ್ನಡದ ಧವಳಕ್ಕೂ ಸಮಾನವಾದ ಲಕ್ಷಣವಿದೆಯೆಂದೂ ಅವರ ಪ್ರಯೋಗದಲ್ಲಿಯೂ ಸಮಾನತೆ ಯಿದೆಯೆಂದೂ ತೀರ್ಮಾನಿಸಬಹುದು. ಈ ಲಕ್ಷಣವನ್ನು ಇನ್ನೂ ಹೆಚ್ಚು ಪರಿಷ್ಕಾರವಾಗಿ ಹೇಳವುದಕ್ಕೆ ಹಲವಾರು ಲಕ್ಷ್ಯಗಳು ದೊರೆತಾಗ ಸಾಧ್ಯ ವಾದೀತು. ಕನ್ನಡದ ಯಕ್ಷಗಾನಗಳನ್ನೂ ಹೆಣ್ಣು ಮಕ್ಕಳ ಹಾಡುಗಳನ್ನೂ ಬೆದಕಿ ನೋಡಿದರೆ ಧವಳದ ಹಾಡುಗಳು ಇನ್ನೂ ಹೇರಳವಾಗಿ ಸಿಕ್ಕಬಹುದು. ಹಾಗೆ ದೊರೆತಾಗ ಆ ಹಾಡು ಮಾತ್ರಾಗಣ ಘಟಿತವಾದದ್ದೇ, ಅಂಶಗಣ ಘಟಿತವಾದದ್ದೇ ಎಂಬ ವಿಚಾರಕ್ಕೆ ಅವಕಾಶವಾಗುವುದಲ್ಲದೆ ಅದು ಆರಂಭ ದಲ್ಲಿ ಅಂಶಗಣಯುಕ್ತವಾಗಿದ್ದು ಕಾಲಕ್ರಮದಲ್ಲಿ ಮಾತ್ರಾಗಣಕ್ಕೆ ತಿರುಗಿದ್ದರೂ ಇರಬಹುದೆಂಬುದಕ್ಕೂ ಆಧಾರ ದೊರೆಯಬಹುದು.

ಛಂದಸ್ಸಿನಲ್ಲಿ ಷಣ್ಮಾತ್ರಾಗಣಗಳನ್ನು ಬಳಸುವುದು ಹೆಚ್ಚಾಗಿ ರೂಢಿಯ ಲಿಲ್ಲ. ಕೆಲವು ಅಕ್ಷರ ವೃತ್ತಗಳಲ್ಲಿ ರೂಪಕ ತಾಳಕ್ಕೆ ಸರಿಹೊಂದುವಂತೆ ಆರಾರು ಮಾತ್ರೆಗಳಾಗಿ ಒಡೆಯುವ ವೃತ್ತಗಳಿವೆಯೆಂದೂ, ಆದರೆ ಅಂಥವು ಅನೇಕವಾಗಿಲ್ಲವೆಂದೂ ಮದರೇಖಾವೃತ್ತವು ಇದಕ್ಕೆ ಉದಾಹರಣೆಯೆಂದೂ

ಇಂಥ ವೃತ್ತಗಳನ್ನು ಬೇಕಾದ ಹಾಗೆ ಸುಲಭವಾಗಿ ಕಲ್ಪಿಸಿಕೊಳ್ಳಬಹುದೆಂದೂ ಗಿಡುಗು ವೆಂಕಟ ಸೀತಾಪತಿ ಅವರು ಹೇಳುತ್ತಾರೆ.[8] ಅವರು ಕೊಟ್ಟಿರುವ ೫ ಪ್ರಕಾರಗಳಲ್ಲಿ ಇಲ್ಲಿ ಒಂದೆರಡನ್ನು ಬರೆಯಬಹುದು :

1) ಅನುಸಾರಣಿಯನು ವೃತ್ತಂ+ಬಗುನತಿಧೃತಿಯನು ಛಂದಂ
ಬುನರೂಪಕಮನು ತಾಳಂ+ಬುನು ವಡಚುನು ಶ್ರುತಿಕಿಂಪೈ
ಚನುನಾಲುಗು ಚರಣಂಬುಲ್+ಸನಯನನಸಗಮುಲೊಪ್ಪ
ಸನಯಂಬುಲು ಚಮನಂತನ್+ಚರಣಮುಲವಡಿ ನಿಲ್ವನ್

ಇದು ೧೯ನೆಯದಾದ ಅತಿಧೃತಿಯೆಂಬ ಛಂದಸ್ಸಿನಲ್ಲಿ ಒಂದು ವೃತ್ತವಾಗುತ್ತ ದೆಂದೂ ಸ+ನ+ಯ+ನ+ನ+ಸ ಎಂಬ ಗಣಗಳೂ ಒಂದು ಗುರುವೂ ಪ್ರತಿಪಾದದಲ್ಲಿಯೂ ಇರುತ್ತವೆಂದೂ ಈ ವೃತ್ತಕ್ಕೆ 'ಅನುಸಾರಿಣಿ' ಎಂದು ಹೆಸರೆಂದೂ ಮೇಲಿನ ಪದ್ಯದ ಮುಖ್ಯ ಅಭಿಪ್ರಾಯ ಹೀಗೆಯೇ ಇದೆ ಅತಿಧೃತಿ ಛಂದಸ್ಸಿನಲ್ಲಿ.

2) ರೂಪಕಮನು ತಾಳಂಬುನ+ದ್ರುತಲಘುವುಲು ಚನಚುಂದುರ್ ಎಂಬುದು ಯಾವುದೋ ಒಂದು ವೃತ್ತದ ಪಾದವಾಗಿಯೇ ಇರಬೇಕು. ಇವೆಲ್ಲ ಸಾಧ್ಯತೆಗಳನ್ನು ತೋರಿಸಲಿಕ್ಕಾಗಿ ಮಾತ್ರ ಈ ಉದಾಹರಣೆಗಳು ಕಲ್ಪಿತವಾಗಿವೆ. ಯಾವ ಕವಿ ಪ್ರಯೋಗವನ್ನೂ ಅವರು ತಿಳಿಸಿಲ್ಲ. ಸಂಸ್ಕೃತದ ಮಾತ್ರಾ ಛಂದಸ್ಸಿನಲ್ಲೂ ಷಣ್ಮಾತ್ರಾಲಯವು ಸಿಕ್ಕುವ ಪದ್ಯಜಾತಿ ಇರುವಂತೆ

8. ಅನಂತನಿಛಂದಮು, ಉಪೋದ್ಘಾತಮು ಪು. ೭೫. ಇವರು ಹೇಳುವ ಮದರೇಖಾವೃತ್ತವು ಎಲ್ಲಿದೆಯೆಂಬುದು ಗೊತ್ತಾಗುವುದಿಲ್ಲ. ಸಂಸ್ಕೃತದ ಅಕ್ಷರ ವೃತ್ತಗಳಲ್ಲಿ ಭಗಣ+ಸಗಣ+ಗುರುವನ್ನು ಒಳಕೊಂಡ ಮದ ಲೇಖಾ ಎಂಬೊಂದು ವೃತ್ತವಿದೆ. ಇದನ್ನೇ ಹೇಮಚಂದ್ರನು ವಿಧುವಕ್ತ್ರಾ ಎಂದು ಕರೆದಿದ್ದಾನೆ. ಅಲ್ಲದೆ ಮಗಣ+ಸಗಣ+ಗುರುವನ್ನು ಹೊಂದಿದ ಒಂದು ವೃತ್ತವನ್ನು ಹೇಮಚಂದ್ರನೂ ವೀರಹಾಂಕನೂ ಕೇದಾರಭಟ್ಟನೂ ಮದಲೇಖಾ ಎಂಬ ಹೆಸರಿನಿಂದ ಕರೆದಿದ್ದಾರೆ. (ಜಯದಾಮನ್. ಪು. ೧೨೦).

ತೋರುವುದಿಲ್ಲ. ಜಯದೇವನ ಗೀತಗೋವಿಂದದಲ್ಲಿ ೪, ೫ ಮತ್ತು ೭ ಮಾತ್ರೆಗಳ ಲಯಕ್ಕೆ ಒಳಪಡುವ ಹಾಡುಗಳಿವೆಯೇ ಹೊರತು ೬ ಮಾತ್ರೆಗಳ ಲಯದ ಹಾಡುಗಳಿಲ್ಲ. ಪ್ರಾಕೃತ ಛಂದಸ್ಸಿನಲ್ಲಿ ಮಾತ್ರ ೬ ಮಾತ್ರೆಗಳ ೧೩ ಗಣಗಳಿರುವುವೇ ಅಲ್ಲದೆ ದೇವಾಹಾ, ದ್ವಿಪದೀ ಮುಂತಾದ ವೃತ್ತಗಳಲ್ಲಿ ಅದು ಬಳಕೆಯಲ್ಲಿರುವುದೂ ಕಂಡುಬರುತ್ತದೆ. ಅಂತುಪಟ್ಕಲಲಯದ ಓಡಾಟ ಛಂದಶ್ಶಾಸ್ತ್ರದಲ್ಲಿ ಅಷ್ಟೇನೂ ಅತಿಶಯವಾಗಿಲ್ಲವೆಂದು ಕಂಡ ವಿಷಯ.

ಇಷ್ಟು ಅಪೂರ್ವವಾಗಿರುವ ಲಯದ ರಹಸ್ಯವನ್ನೂ ಚೆಲುವನ್ನೂ ಆಧುನಿಕ ಕನ್ನಡ ಕವಿಗಳು ಮನಗಂಡು ಅತಿ ಸುಂದರವಾದ ಪದ್ಯಗಳನ್ನು ನಿರ್ಮಿಸಿದ್ದಾರೆ. 'ಶ್ರೀ' ಅವರು ತಮ್ಮ 'ಅಶ್ವತ್ಥಾಮನ್' ನಾಟಕದಲ್ಲಿ ತಂದಿರುವ ಆರು ಮಾತ್ರೆಗಳ ಲಯದ ಸೊಗಸು ಹೀಗೆ :

> ಚೆಲ್ವಿನ ನೆಲೆ, ಕಣ್ಗಳ ಬಲೆ, ಸುಖದೊಲತೆಯ ಬನವಾಸೀ ।
> ಬಳೆದಲೆದಾ ಕಾನ್‌ಮಲೆಗಳನ್ ಆ ಆ ಮಱಿವೆನೆ ಬನವಾಸೀ।
> ಭಾರತದೀ ಸುಱಿಗಾಳಿಗೇಲ್ಕುತೆ ನಾನ್ ತಟಗಾದನ್
> ಪೆಱಿತೆಂಬುತೆ ಪೆಱಿತೇಯುತೆ, ಮನೆಗಾಣದೆ ಒಡವಾದೆನೆ
> ನಿನ್ನನೆ ನೆನೆನೆನೆದೋ ತಾಯ್, ಪಂಬಲಿಸುವ ನೋವೊಂದೇ ।
> ಇನ್ನೇನಗೇನಾಸೆಗಳೋ ಪಾರ್ವುದು ನಾನ್ ಸಾವೊಂದೇ ।

ಇಲ್ಲಿ ಪ್ರತಿ ಪಂಕ್ತಿಯಲ್ಲೂ ೬ ಮಾತ್ರೆಗಳ ನಾಲ್ಕು ಗಣಗಳಿದ್ದು ರೂಪಕ ತಾಳಕ್ಕೆ ಹೊಂದಿಕೊಳ್ಳುತ್ತವೆ ; ಅಂತ್ಯಪ್ರಾಸವಿದೆ. ಕನ್ನಡದ ಹಳೆಯ ಕಾವ್ಯ ಗಳಲ್ಲಿ ಈ ಲಯವನ್ನು ಪ್ರತಿಬಿಂಬಿಸುವ ಪದ್ಯಜಾತಿ ಇಲ್ಲದಿರುವುದರಿಂದ 'ಶ್ರೀ' ಅವರ ಈ ರಚನೆಗೆ ಮೂಲ ಬಹುಶಃ ಹೆಂಗಸರ ಹಾಡುಗಳಲ್ಲಿರಬಹು ದಾದ ಧವಳದ ರೀತಿಯ ಹಾಡುಗಳೋ,ತಮಿಳಿನಲ್ಲಿರಬಹುದಾದ ಕೃತಿಗಳೋ ಆಗಿರಬೇಕೆಂದು ಊಹಿಸಬಹುದು. ಶ್ರೀ ಕೆ.ವಿ. ಪುಟ್ಟಪ್ಪನವರು ೬ ಮಾತ್ರೆಗಳ ಲಯವನ್ನು ಸೊಗಸಾಗಿ ಬಳಸಿದ್ದಾರೆ. ಉದಾಹರಣೆಗೆ :

> ಓರೋರ್ವರ್ ನಾವಿರ್ವರು
> ಸಿಂಗಾರದಿ ಕೂಡಿ
> ನಲಿದಾಡುವ ಬಾ ನಲ್ಲಳೆ
> ರಸದೋಕುಳಿಯಾಡಿ

(ಪ್ರೇಮಕಾಶ್ಮೀರ, ಪು.50)

ಎಂಬ ಪದ್ಯವನ್ನು ನೋಡಬಹುದು. ಸುಂದರವಾದ ಭಾವಗಳಿಗೆ ಸುಂದರತರವಾದ ಆಕಾರವನ್ನು ಕೊಡುವಾಗ ೭ ಮಾತ್ರೆಗಳ ಲಯ ಹಲವು ವೇಳೆ ಹಿತವಾಗಿ ಕಾಣುತ್ತದೆ.

ಬಾನ್ ಸರಸಿಯೊಳುಡುಗೊಂಚಲ
ಬಿಳಿ ನೈದಿಲ ಮಾಲೆ
ಶಶಿಯಂಚೆಯು ಮಲರಡವಿಯೊ
ಳೀಜಾಡುವ ಲೀಲೆ
ಕಲ್ಲೊಟ್ಟಿಲ ತೊರೆ ಹಾಡುವ
ಮೃದು ಮಂಜುಳ ಗಾನ
ನೋಡಾಲಿಸು ಕೋಡಿ ಬೀಳಲು
ಹೃದಯದ ಸುಮ್ಮಾನ

ಎಂಬ ಶ್ರೀ ಪು.ತಿ. ನರಸಿಂಹಾಚಾರ್ಯರ ಕಾವ್ಯಖಂಡವನ್ನಾಗಲಿ (ಹಣತೆ. ಪು. ೧೧) ಅವರದೇ ಆದ—

ದಾನವ ಹೃತ ಮೇದಿನಿಯಂ
ದಂಷ್ಟ್ರಾಗ್ರದೊಳಿರಿಸಿ,
ಭೂದಾರಂ ಪಾತಾಳವ –
ನುಳಿದೆದ್ದನೊ ಎನಿಸಿ
ದೂರ ದಿಗಂತದೊಳೆಸ್ಪಿದೆ
ರವಿಮಂಡಿತ ಶೃಂಗರ
ನೀಲಾಚಲಮುದ್ದೀಪಿತ
ಪೂರ್ವೋದಧಿಸಂಗಂ

ಎಂದು ಆರಂಭವಾಗುವ 'ಸವ್ರೋದಯಂ' ಎಂಬ ಕವಿತೆಯನ್ನಾಗಲಿ (ಮಾಂದಳಿರು. ಪು. ೩೪) ಓದುತ್ತಿರುವಾಗ ಆ ಲಯದ ಸೊಗಸು ಬಹು ಸುಖಕರವಾಗಿರುತ್ತದೆ.

'ಶ್ರೀ' ಅವರ ಪದ್ಯದ ಎರಡೆರಡು ಸಾಲುಗಳನ್ನು ಒಂದು ಸಲಕ್ಕೆ

ತೆಗೆದುಕೊಂಡು ಒಂದೊಂದನ್ನು ಎರಡು ಪಟ್ಕಲಗಳ ಎರಡೆರಡು ಪಾದಗಳಾಗಿ ವಿಂಗಡಿಸಿ ಅಂತ್ಯ ಪ್ರಾಸಕ್ಕೆ ಬದಲಾಗಿ ಆದಿಪ್ರಾಸವನ್ನು ಇಟ್ಟರೆ ಅದು 'ಧವಳ'ದ ಹಾಡಾಗಿಬಿಡುತ್ತದೆ. ಹೀಗೆಯೇ ಶ್ರೀಪುಟ್ಟಪ್ಪನವರ ಮತ್ತು ಶ್ರೀನರಸಿಂಹಾಚಾರ್ಯರ ಮೇಲ್ಕಂಡ ಪದ್ಯಗಳಲ್ಲಿ ಎರಡು ಮತ್ತು ನಾಲ್ಕನೆಯ ಪಾದಗಳಂತ್ಯಗಳಲ್ಲಿ ಇರುವ ಊನ ಗಣಗಳನ್ನು ಷಣ್ಮಾತ್ರೆಗಳ ಬೆಲೆಯುಳ್ಳ ಪೂರ್ಣಗಣಗಳನ್ನಾಗಿ ಮಾಡಿಯೋ, ಇಲ್ಲವೇ ಹಿಗ್ಗಲಿಸಿಯೋ ಅಂತ್ಯ ಪ್ರಾಸಕ್ಕೆ ಪ್ರತಿಯಾಗಿ ಆದಿ ಪ್ರಾಸವನ್ನು ಸೇರಿಸಿದರೆ 'ಧವಳ'ದ ಹಾಡು ಬರುತ್ತದೆ. ಹೊಸಗನ್ನಡದ ಈ ಮಟ್ಟುಗಳನ್ನು ಧವಳದ ಪ್ರಭೇದವೆಂದಾಗಲಿ ಅಂತ್ಯ ಪ್ರಾಸ ಸಹಿತ ಧವಳವೆಂದಾಗಲಿ ಕರೆಯಬಹುದು. ರನ್ನನ ಕಾಲದಿಂದಲೂ ರೂಢಿಯಲ್ಲಿದ್ದ ಧವಳವು ಕಾಲಸಾಗರದಲ್ಲಿ ಕಣ್ಮರೆಯಾಗಿದ್ದು ನಮ್ಮ ಕಾಲದ ಕವಿದೃಷ್ಟಿಗೆ ಹೇಗೋ ಗೋಚರವಾಗಿ ಕೊಂಚ ರೂಪಾಂತರಗೊಂಡಿದ್ದರೂ ಮೂಲ ಸ್ವಭಾವವನ್ನು ನೀಗಿಕೊಳ್ಳದೆ ಪುನರುಜ್ಜೀವನಗೊಂಡು ಶ್ರವಣಸುಖದಾಯಿಯಾಗಿ ರಾಜಿಸುತ್ತಿದೆ.

## ಶಿಲಾಲತೆ

---

ಈಗಾಗಲೇ 'ಮೈಸೂರು ಮಲ್ಲಿಗೆ'ಯ ಕಂಪಿನಿಂದ ನಾಡಗಾಳಿಗೆ ವಾಸನೆ ಕಟ್ಟಿದ್ದಾರೆ ಶ್ರೀಮಾನ್ ನರಸಿಂಹಸ್ವಾಮಿಯವರು. ಸಂಸಾರದ ಒಲವು-ನಲಿವುಗಳ, ನೋವು-ನಗೆಗಳ ಸುಂದರ ಚಿತ್ರಗಳನ್ನು ಎಲ್ಲರ ಅನುಭವಕ್ಕೆ ತಂದುಕೊಟ್ಟು ಜನಮನದ ಸಿರಿಯ ಭಂಡಾರವನ್ನು ತುಂಬಿಸಿದ್ದಾರೆ. ಅವರು. ಹೆಣ್ಣನ್ನು ಹಸೆಗೆ ಕರೆಯುವಾಗ, ಒಸಗೆ ಬೆಳೆವಾಗ, ಕೊಟ್ಟ ಮನೆಗೆ ಕಳುಹಿಸಿ ಕೊಡುವಾಗ, ಮಗುವಿನ ಕೇಕೆ ತೊಟ್ಟಿಲನ್ನು ತುಂಬಿ ಸೂಸುವಾಗ ಇವರ ಕವಿತೆಗಳನ್ನು ನಮ್ಮ ಜನ ಮೆಚ್ಚಿ ಹಾಡುತ್ತಾರೆ, ಹಾಡಿಸಿಕೊಳ್ಳುತ್ತಾರೆ. ಕೇಳಿ ನಲಿಯುತ್ತಾರೆ, ಅಂಥದೇ ಹಾಡುಗಳನ್ನು ಕಟ್ಟಲು ಹವಣಿಸುತ್ತಾರೆ. ಇಷ್ಟು ಜನ ಪ್ರೀತಿಯನ್ನು ತಾನು ಬದುಕಿರುವಾಗಲೇ ಪಡೆಯುವುದು ಕವಿಯ ಪುಣ್ಯ ವಿಶೇಷ. ಜನದ ಮೆಚ್ಚಿಕೆಯೇ ಯಾರೂ ಬರೆಯಲಾಗದಂಥ ಮುನ್ನುಡಿಯನ್ನು ಇವರ ಕಾವ್ಯಕ್ಕೆ ಆಗಲೇ ಬರೆದುಬಿಟ್ಟಿದೆ. ಇದರೆದುರಿಗೆ ಈ ಮುನ್ನುಡಿ ಉಪಚಾರ ಮಾತ್ರವಾಗಬಹುದು. ಆದರೂ ಇವರ ಕವಿತೆಗಳನ್ನು ಓದಿ ಕೇಳಿ ಸವಿದಿರುವ ಸುಖಕ್ಕೂ ಸ್ನೇಹಭಾವಕ್ಕೂ ಇದು ಅಲ್ಪವಾದ ಕಾಣಿಕೆಯಂತಿದೆ.

ಇವರ 'ಮೈಸೂರು ಮಲ್ಲಿಗೆ' ಕಸ್ತೂರಿಯ ನೆಲದಲ್ಲಿ ಕಾಮನ ಬಿಲ್ಲನ್ನು ಬಿತ್ತಿ ಬೆಳೆಯಿಸಿರುವ ಪೂದೋಟ. ಏನು ಬಣ್ಣ, ಏನು ಕಂಪು, ಎಂಥ ಸೊಗಸು ಈ ಕ್ಷೇತ್ರದಲ್ಲಿ ಇವರಷ್ಟು ಸಿದ್ಧಿಯನ್ನು ಸಂಪಾದಿಸಿರುವವರು ತೀರ ವಿರಳ, ಹೊಸಗನ್ನಡ ಕವಿತೆಯ ಸುಗ್ಗಿಯಲ್ಲಿ ಮೇಲು ನೋಟಕ್ಕೆ ಸಂಸಾರದ ಒಲವಿನ ನಗೆಯ ಹೊಲ ವಿಸ್ತಾರ ಹೀನವೆಂದು ತೋರಬಹುದು. ಆದರೆ ಅಲ್ಲಿನ ವೈವಿಧ್ಯ ಅಪಾರ. ಕವಿದೃಷ್ಟಿ ಸೂಕ್ಷ್ಮವಾದ ಹಾಗೆಲ್ಲಾ ಇದರ ಮೇಲೆ ಹಿಗ್ಗುತ್ತ ಹೋಗುತ್ತದೆ. ಈ ನೆಲವನ್ನೇ ಮತ್ತಷ್ಟು ಹಸನಾಗಿ ಉತ್ತು ಇನ್ನೂ ಅಪೂರ್ವವಾದ ಕುಸುಮಶ್ರೀಯನ್ನು ಇವರು ಕಾಣಿಸಬಲ್ಲ ರೆಂಬ ನಿರೀಕ್ಷೆ ಕೆಲವರಲ್ಲಿತ್ತು. ಈ ಕ್ಷೇತ್ರ ಮುಗಿಯಿತು, ಇಲ್ಲಿ ಅವರ ಪ್ರತಿಭೆ ಎಷ್ಟು ಮಾಡಬಹುದೋ ಅಷ್ಟನ್ನು ಮಾಡಿಯಾಯಿತು, ಬೇರೆ ಬಯಲಿಗೆ ಇದು ಹೋಗಲೇಬೇಕು, ಇಲ್ಲದಿದ್ದರೆ ಇವರ ಕವಿತೆಯ ಊಟೆ ಬತ್ತಿದಂತೆಯೇ-ಎಂದು ಮತ್ತೆ ಕೆಲವರಿಗೆ ತೋರಿತ್ತು. 'ಐರಾವತ', 'ದೀಪದಮಲ್ಲಿ', 'ಉಂಗುರ' ಮುಂತಾದ ಇವರ ಈಚಿನ ಕಾವ್ಯಗುಚ್ಛಗಳು ಈ ಎರಡನೆಯ ನಿರೀಕ್ಷೆಗೆ ಹೆಚ್ಚು ಸಮರ್ಥನೆ ಕೊಡುವಂತಿದೆ. ಇಲ್ಲಿಯೂ ಒಲವಿನ ಗೀತಗಳು ಇವೆ ; ಆದರೆ ಅವು 'ಮೈಸೂರು ಮಲ್ಲಿಗೆ'ಯ ಗ್ರಂಥವಲಯದ ಕೇಂದ್ರದಿಂದ ದೂರ ಸರಿದು ಅಂಚಿನಲ್ಲೇ ಸಂಚರಿಸುತ್ತಿರುವಂತೆ ಕಾಣುತ್ತವೆ ; ಮೊದಲಿನ ಸ್ವಚ್ಛತೆ, ಸ್ಫುಟತೆ, ತೀವ್ರತೆ ಸಹಜತೆ ಚಾರುತ್ವಗಳು ಅವುಗಳಲ್ಲಿ ಕಡಿಮೆಯಾಗುತ್ತ ಬಂದಿವೆ. ಹೊಸ ಕಾಣ್ಕೆ ಹಿಂಜರಿಯುತ್ತ ಸಾಗಿದೆ. ಇದರಿಂದ ಮೊದಲಿನ ನಿರೀಕ್ಷೆ ಸಫಲವಾದಂತಿಲ್ಲ. ಈ ನಿರಾಶೆಯನ್ನು ಹೋಗಲಾಡಿಸುವಂತಿವೆ, ಇವರ ಪ್ರತಿಭೆ ಇತರ ಕ್ಷೇತ್ರಗಳಲ್ಲಿ ಓಡಾಡಿ ಕಂಡುಂಡ ಸೊಬಗಿನ ಕವಿತೆಗಳು. ವಸ್ತುವೈವಿಧ್ಯವೂ ಅದರಿಂದ ಪ್ರಚೋದಿತವಾಗಿರುವ ಭಾವಬಾಹುಳ್ಯವೂ ಸ್ವಲ್ಪಮಟ್ಟಿಗೆ ನವೀನ ರಚನಾತಂತ್ರವೂ ಈಚಿನ ಕಾವ್ಯಗುಚ್ಛಗಳಲ್ಲಿ ಬೆಳೆಯುತ್ತ ಬಂದು ಈ 'ಶಿಲಾಲತೆ'ಯಲ್ಲಿ ಒಂದು ಹಂತವನ್ನು ಮುಟ್ಟಿದೆ. ಆದರೂ ಕೆಲವರಿಗೆ

---

ಶ್ರೀ ಕೆ. ಎಸ್. ನರಸಿಂಹಸ್ವಾಮಿಯವರ 'ಶಿಲಾಲತೆ'ಗೆ ಬರೆದ ಮುನ್ನುಡಿ.

ಕೊರಗು, 'ಮೈಸೂರು ಮಲ್ಲಿಗೆ'ಯ ಸುಕುಮಾರ ಪ್ರಪಂಚ ಕವಿಗಳ ಕೈನುಣುಚಿ ಕೊಂಡು ಹೋಯಿತಲ್ಲಾ ಎಂದು ಇರಲಿ, ಬೇರೆ ನಾಡುಗಳಿಗೆ, ಚಿನ್ನದ ನಾಡುಗಳಿಗೆ, ನಮ್ಮನ್ನು ಅವರು ಕರೆದುಕೊಂಡು ಹೋಗಿದ್ದಾರೆ. ಅಲ್ಲಿ ಅವರು ಕಾಣಿಸಿರುವ ಹೊಸ ಸೊಗಸುಗಳನ್ನು ಸವಿಯೋಣ.

ಬೇರೆ ಬೇರೆ ಕಾಲದಲ್ಲಿ ಬರೆದ ಮೂವತ್ತೇಳು ಕವಿತೆಗಳನ್ನು ಕವಿ ಈ ಗುಚ್ಛದಲ್ಲಿ ಸೇರಿಸಿದ್ದಾರೆ. ಇವುಗಳ ವಿಷಯ ಹಲವು ತೆರ, ಪಾಕ ಹಲವು ಹದ, ಕಾಣ್ಕೆ ಹಲವು ರೀತಿ. ಎಲ್ಲ ಕವಿತೆಗಳನ್ನೂ ಇಲ್ಲಿ ನೋಡುವು ದಕ್ಕೆ ಅವಕಾಶವಿಲ್ಲ ; ಅದು ಅಪ್ರಕೃತವೂ ಆಗಬಹುದು. ನನಗೆ ಚೆಲು ವೆಂದು ಕಂಡುಬಂದ ಕೆಲವು ಕವಿತೆಗಳ ವಿಷಯವಾಗಿ ನಾಲ್ಕು ಮಾತುಗಳನ್ನು ಇಲ್ಲಿ ಹೇಳಬಯಸುತ್ತೇನೆ. ಉಳಿದ ಕವಿತೆಗಳಲ್ಲಿ ನನಗೆ ಕಾಣದಿರುವ ಚೆಲುವು ಇತರರಿಗೆ ಕಾಣಬಹುದಾದ್ದರಿಂದ ಅವುಗಳನ್ನು ಕುರಿತು ಹೆಚ್ಚು ಹೇಳ ಬೇಕಾದುದಿಲ್ಲ.

ನಗರ ಜೀವನದ ಆಸೆ ಮೆರುಗುಗಳಿಂದ, ಕೊಳಕು ಕೊರತೆಗಳಿಂದ ಪ್ರಚೋದನೆಗೊಂಡಿರುವ ಕೆಲವು ಕವಿತೆಗಳು ಇಲ್ಲಿವೆ. "ನಲವತ್ತರ ಚೆಲುವೆ" ಯಲ್ಲಿ ಮೃದು–ವಿಡಂಬನದ ಮಂದಹಾಸವಿದೆ. ಮನೆಯಲ್ಲಿನ ಮುದಿ ಗಂಡನಿಗೆ ಜೀವನೋತ್ಸಾಹ ಕುಗ್ಗುತ್ತ ಬಂದಿದೆ ; ಮಡದಿಯನ್ನು ಕಂಡಾಗ ಅವನ ಮಾತೆಲ್ಲ ದೂರದಲ್ಲಿ ನಿಂತೆ. ಅವಳಿಗೆ ಬೇಕು ದಿನಾ ಹೊಸ ಹೊಸ ಸೀರೆ, ಸಿನಿಮಾತಾರೆಯ ಸಂಸಾರ, ಲೋಕದ ಟೀಕೆ. ಆದರೆ ಅವಳ ವಯಸ್ಸು ನಲವತ್ತು, ಚಾಪಲ್ಯ ಹೋಗಿಲ್ಲ. ಮುಖಕ್ಕೆ ಚೂರ್ಣ, ತುಟಿಗೆ ಬಣ್ಣ, ಕಣ್ಣಿಗೆ ಕನ್ನಡಕ, ಹಲ್ಲಿಗೆ ಚಿನ್ನ, ಹುಬ್ಬಿನ ಹಾರಾಟ–ಇವೆಲ್ಲ ಅವಳಿಗೆ ಇಷ್ಟ. ಹುಡುಗರನ್ನು ಕಂಡರೆ ಅವಳು ಹುಡುಗಿಯಂತೆ ಆಡುವಳು. ಬಸ್ಸಿಗೆ ಹತ್ತುವಾಗ ಅದೇನು ಸೆರಗು ಬೀಸಾಟ, ಹತ್ತಿ ಕುಳಿತಮೇಲೆ ಅದೇನು ನೋಟ ; ಎಲ್ಲರೂ ತನ್ನನ್ನೇ ನೋಡುವರೆಂದು, ನೋಡಿ ಮೆಚ್ಚುವ ರೆಂದು, ಮೆಚ್ಚಿ ಟೀಕಿಸುವರೆಂದು ಅವಳ ಮನದ ಹಾರೈಕೆ. ಆದರೆ ಯಾರೂ ನೋಡರು, ಕೇಳರು, ಮಾತಾಡರು. ಇವಳ ಚೆಲುವು ಹಂಗಳು ಚೆಲುವೆಂದು

ಜನ ತಿಳಿಯಿತು. ಕೊರಳ ಚಿನ್ನದೆಳೆ ಅಳ್ಳಕ, ಬೆಂಡೋಲೆ ಮೂಗುತಿ ಕೈ ಬಳೆ ಎಲ್ಲಾ ಸಡಿಲ, ಇವಳ ಹರೆಯುವೆಷ್ಟೆಂದು ಇವೇ ಹೇಳುತ್ತವೆ. ತಾನು ಚೆಲುವೆಯೆಂಬ ಹರೆಯುವಂತಳೆಂಬ ಭ್ರಮೆ ಇವಳ ವ್ಯೆಯಾರದ ಅನೌಚಿತ್ಯಕ್ಕೆ ಕಾರಣ. ಇದರಿಂದ ನೋಟಕರಿಗೆ ಮಂದಸ್ಮಿತ. ನಗರದ ಬಾಳಿನ ಹೊರಮಂಚಿಗೆ ಬಲಿಯಾದಳು ಈ ಗರತಿ. ಒಳ್ಳೆಯ ಕಾವ್ಯಕ್ಕೆ ತಕ್ಕ ವಸ್ತುವಾದಳು. ಮಳೆಯಾಗಿದ್ದರೂ ತುಂಬದ ಲಾಲ್‌ಬಾಗ್. ಕೆರೆಯನ್ನೂ ಅದನ್ನು ನೋಡುತ್ತಿರುವ ಜಯನಗರದ ಹರವನ್ನೂ ಕುರಿತ ಕವಿತೆಯೊಂದಿದೆ. ಕೆರೆ ಏಕೆ ತುಂಬಲಿಲ್ಲವೆಂದು ಕವಿಗೆ ಚಿಂತೆ, ಕೊರಗು. ಮರಗಿಡಗಳಿಗೆ ಅದೃಷ್ಟವಿಲ್ಲವೆಂಬ ಸಮಾಧಾನ. ಈ ಕೆರೆಯ ನೋಟ "ಇಂತೆಯೆ ನಮ್ಮ ನಾಡು, ಇಂತೆಯೆ ನಮ್ಮ ನುಡಿ, ತುಂಬಿದ ಮೊಲೆಗೆ ತುಟಿಯನಿಡುತಿದೆ" ಕಂಡ ನೋಡಿ ...ಎಂದು ನಾಡಿನ ಸದ್ಯದ ಪರಿಸ್ಥಿತಿಯನ್ನು ಹೊಳೆಯಿಸುತ್ತದೆ. ಈ ಕವಿತೆಯಲ್ಲಿ ಭಾವದ ಕಾವು ಕಡಮೆ. 'ಶರತ್–ಶಾರದೆ' ಒಂದು ಚೆಲುವಾದ ಕಾವ್ಯ. ಅದರಲ್ಲಿ ಭಾವದ ಹೂವು ಅರಳಿದೆ ; ಛಂದಸ್ಸಿನ ರಮ್ಯ ನರ್ತನವಿದೆ. ತನ್ನ ತಪೋವನದಲ್ಲಿ ವಾಲ್ಮೀಕಿ ಕಂಡ ಶರತ್ಕಾಲದ ಸೌಂದರ್ಯ. ಈ ಕವಿ ಬೆಂಗಳೂರಿನಲ್ಲಿ ಕಂಡ ಶರತ್ಕಾಲ–ಇವೆರಡರ ಹೋಲಿಕೆ ಈ ಕವಿತೆಯ ವಸ್ತು. ತಪೋವನದ ಶರತ್ತು ಹೊರಟೇಹೋಯಿತಲ್ಲ, ಮರಳಿ ಬರಬಾರದೆ ಎಂಬ ಕೊರಗು ಆಕಾಂಕ್ಷೆಗಳೂ ನಗರದ ಬಾಳು ಏನು ಹಾಳು ಎಂಬ ಜಿಗುಪ್ಸೆಯೂ ಇಲ್ಲಿನ ಧ್ವನಿ. ಬಿಳಿಮುಗಿಲು, ಚಂದ್ರ, ನದಿ, ಕಮಲ, ಹಂಸ, ತಂಗಾಳಿ, ತಾರೆ. ನವಿಲು, ಪಕ್ವಶಾಲಿವನ–ಇವೆಲ್ಲ ಎಲ್ಲಿ ಬೆಂಗಳೂರಿನ ಮನೆಗಳ ಮರುಭೂಮಿಯಲ್ಲಿ ? ಇದ್ದಂತೆ ಬಿದ್ದಿರುವ ಬೀದಿ, ನಡುನಡುವೆ ಗೊಬ್ಬರದ ಗಾಡಿ, "ಕೊಳೆಬಿದ್ದಗಲ್ಲಿ, ಬಡಪಾಯಿ ನಾಯಿ, ಮುದಿಗೂಳಿ, ಹಂದಿ ಹಿಂಡು ಕಾಕಡಾ ಹೂವಿನದಂಡೆ, ಹೂಮುಡಿದ ಹೆಣ್ಣ ಕಂಡು ತಲೆಕೆರವ ಕೋತಿ, ಕಂಬ, ಕಿಟಿಕಿ, ಕದ, ಟಾರ್‌ರಸ್ತೆ ಪೆಡಂಭೂತದಂತೆ ಬರುವ ಬಸ್ಸು, ಬದುಕಿದ ಹೆಣದಂತಿರುವ ಕ್ಲಾರ್ಕು" ಇವೆಲ್ಲ ನಗರದ ನಿತ್ಯ ದೃಶ್ಯಗಳು. ಯಾವ ಕಾಲ ಬಂದರೇನು, ಯಾವ ಋತು ಸುಳಿದಾಡಿದರೇನು, ಯಾವ ಪ್ರಕೃತಿಯ ಚೆಲುವು ಚೆಲ್ಲಿದರೇನು ಈ ನಗರ ಒಂದು ಅಜಗರ. ಅದಕ್ಕೆ ಶರತ್ಕಾಲವೂ ಒಂದೇ, ವಿಪತ್ಕಾಲವೂ ಒಂದೇ, ಅದು ರಸವಿಲ್ಲದ ಕಸದ ಬುಟ್ಟಿ. ಎಷ್ಟೋ

ಶರತ್ತುಗಳು ಬಂದಿವೆ, ಹೋಗಿವೆ ; ಅವುಗಳಲ್ಲಿ ಇದೂ ಒಂದು ; ಬಂದರೆ ಬರಲಿ ಹೋದರೆ ಹೋಗಲಿ ; ನನಗೇನು ಆದರಿಂದ ಎಂದು ನಗರ ತನ್ನ ಪಾಡಿಗೆ ತನ್ನ ಜಾಡಿನಲ್ಲಿ ಹೋಗುತ್ತಿದೆ. ಇದು ಕವಿಗೆ ಆಗಿರುವ ಒಂದು ಕಾಲದ ತೀವ್ರಾನುಭವ ; ಈ ಕಾವ್ಯ ಎಲ್ಲರ ಅನುಭವದ ಕಂಚಿನ ಕೊರಳು.

ಇರುವ ಭಾವಿಯನ್ನು ಮುಚ್ಚಿಸಿ ನಲ್ಲಿಗೆ ಶರಣಾಗಿ ನೀರಿಗಾಗಿ ನಗರದ ಜನ ಪಡುವ ಬವಣೆ "ಬರಿಗೊಡಗಳಿಗೆ ಸಮಾಧಾನ" ಕವಿತೆಯ ವಿಷಯ. ಇದರ ಆರಂಭದಲ್ಲಿ ಕೆಲವು ಚಿತ್ರಗಳು ಬರುತ್ತವೆ ; ಊರಾಚೆಗೆ ಸುಟ್ಟ ಕೊಳಿಯನ್ನು ಮೇಯುವ ದನದ ಮುಂದ್ಕ್ಷೇತರಗೆಲೆಯ ರಾಶಿಯ ನಿಷ್ಕಾಮ ದಹನ, ಗುಡಿಯ ಬಾಗಿಲ ಬಿಸಿಲ್ಗುದುರೆಗಳು, ತಿಟ್ಟೇರಿ ಬಂದರೂ ಮಾಡ ವೇರಿ ಬೀಸಲಾರದ ಕುಂಟುಗಾಳಿ, ಧೂಳಿನಲ್ಲಿ ಉಸಿರೆಳೆಯುತ್ತಿರುವ ಲಾರಿ, ವೇಗವಿದ್ದರೂ ನಿಂತಂತೆ ತೋರುವ ವಿಮಾನ ತಲೆಗೆದರಿದ ಗಿಡಬಳ್ಳಿ, ಯಾರಿಗೂ ಬೇಡವಾದ ಹಾವಿಗೆ ಮಾತ್ರ ಹೇಳಿಗೆಯಾದ ಮುದಿಮರ ಈ ಚಿತ್ರಗಳು ಪರಸ್ಪರ ಸಂಬಂಧವಿಲ್ಲದಿರುವಂತೆ ಕಂಡರೂ ಒಟ್ಟಾರೆ ನೋಡಿದಾಗ ಬೇಸಗೆಯ ನಡುಹಗಲೊಂದನ್ನು ಸೂಚಿಸುತ್ತವೆ. ಇಂಥ ಹೊತ್ತಿನಲ್ಲಿ ಅಲೆ ಯುವ ಕೊಡಗಳಿಗೆ ನೀರನ್ನು ತುಂಬದೆ ನಲ್ಲಿ ಹಾಡು ಹೇಳುತ್ತದೆ. ಕವಿತೆಯ ಬಹುಭಾಗ ಬೇಸಗೆಯ ಚಿತ್ರಗಳಿಗೆ ಮೀಸಲು ; ಕೊನೆಯಲ್ಲಿ ಮಾತ್ರ ನೀರಿಲ್ಲದ ನಲ್ಲಿ ಬರುತ್ತದೆ. ಇದರ ರಚನೆಯಲ್ಲಿ ಹೊಸ ತಂತ್ರವಿದೆ ; ಛಂದ ಸ್ವಚ್ಛಂದ; "ನವ್ಯಕಾವ್ಯ", "ನವ್ಯ"ವೇನೋ ಸರಿ. ಆದರೆ "ಕಾವ್ಯ" ಎಲ್ಲಿ ? ಬೇಸಗೆಯ ಮಧ್ಯಾಹ್ನವೆಂದು ತಿಳಿಸುವುದಕ್ಕೆ ಇಷ್ಟು ಬಳಸಿನ ದಾರಿ ಅವಶ್ಯಕವೆ ? ಕವಿತೆಯ ಮುಖ್ಯಾಂಶವನ್ನು ಅದರ ಹಿನ್ನೆಲೆ ನುಂಗಿಬಿಟ್ಟಿಲ್ಲವೆ? ಬರಿಗೊಡಗಳ ಮೆರವಣಿಗೆ ಪತ್ರಿಕೆಯ ಸುದ್ದಿಯಂತಿದೆಯಲ್ಲವೆ ? ಬೇಸಗೆಯೇ ಕಾವ್ಯ ವಾಗಿಲ್ಲವೆ ? ಚಿತ್ರವನ್ನು ಚೌಕಟ್ಟೇ ಆಕ್ರಮಿಸಿದೆ. ಪದ್ಯದ ಸಾಲು ಸಾಲಿಗೆ ಒಂದೊಂದು ಲಯಕ್ರಮವಿರುವಂತೆ ತೋರಿದರೂ ಇಡೀ ಕವಿತೆಯನ್ನು ಅಪ್ಪಿ ಕೊಂಡಿರುವ ನಿರ್ದಿಷ್ಟವಾದ ಲಯದ ಬೆಡಗಿಲ್ಲ. ಈ ಕಾರಣಗಳಿಂದ ಈ ಪದ್ಯ ಹೃದಯಸ್ಪರ್ಶಿಯಾಗಿಲ್ಲ. ಚೆಲುವು ಕಡಮೆ, ತಂತ್ರ ಹೆಚ್ಚು.

ಒರಿಯು "ನವ್ಯ"ತೆಯನ್ನೇ ಕಾವ್ಯವೆಂದು ಕರೆಯಲಾದೀತೆ ? ಕವಿ ಇಲ್ಲಿ ತನ್ನ ಉದ್ದೇಶವನ್ನು ಸಾಧಿಸಿರುವಂತೆ ತೋರುವುದಿಲ್ಲ. "ಕೇಳುವವರಿಲ್ಲದ ಮಗು" ನೋವಿನ ಕಾವ್ಯ ; ನಗರದ ಜನ ದಿನವೂ ನೋಡುವ ದೃಶ್ಯ ಇಲ್ಲಿದೆ. ಅರೆ ಬೆತ್ತಲೆಯ ಕಪ್ಪುಮಕ್ಕಳು ಕಾಸು ಕೇಳುತ್ತ ಬೀದಿ ಬೀದಿಯಲ್ಲಿ ಅಲೆಯುವುದು ತುಂಬ ಸಾಮಾನ್ಯ. ಇವರು ಯಾರು, ಎಲ್ಲಿಯವರು, ಇವರ ಗತಿಯೇನು, ಹೇಗೆ ಇವರು ಜೀವ ಹಿಡಿದುಕೊಂಡಿದ್ದಾರೆ ಎಂದು ಕನಿಕರಿಸಿ ಕೇಳುವುದಕ್ಕೆ ಯಾರಿಗೂ ಬಿಡುವಿಲ್ಲ. ಕೇಳಿ ಏನು ತಾನೆ ಮಾಡಲಾದೀತು ? ಒಬ್ಬರೆ ಇಬ್ಬರೆ ? ಒಂದು ದಿವಸದ ಕತೆಯೇ ಎಷ್ಟು ಕಾಸನ್ನು ಕೊಟ್ಟರೂ ಅವರ ಬಡತನ ಹಿಂಗುತ್ತದೆಯೇ ? ಇವರ ಸಂತಾನ ಪರಂಪರೆ ಬೆಳೆಯುತ್ತ ಹೋಗುತ್ತಿದೆ. ಆದ್ದರಿಂದ ಕನಿಕರವಿರುವವರಿಗೂ ಉಪೇಕ್ಷೆ. ಭಾಗ್ಯ ನಿಲಯಗಳ ದೃಷ್ಟಿಯೆಲ್ಲ ಮುಚ್ಚಿದ ಬಾಗಿಲ ಒಳಗೆ. ಕವಿಗೆ ಮಾತ್ರ ಯಾತನೆ, ಅಳು. ಅವನು ಅತ್ತದ್ದರಿಂದ ಆಗುವುದೇನು ? ಈ ಮಕ್ಕಳ ಬಾಳಿಗೆ ಕೊನೆಯೆಲ್ಲಿ ? ಕುರುಡು ಲಾರಿ ಕೆಲವು ಸಲ ಇವರ ಕಥೆಯನ್ನು ಮುಗಿಸಿಬಿಡುವುದೂ ಉಂಟು ; ಸತ್ತಮೇಲೂ ಹೆಣವನ್ನು ಒಪ್ಪಮಾಡು ವವರು ಯಾರು ? ಹತ್ತು ಸಲ ನೋಡಿರುವ ಹದ್ದು ಇವರಿಗಾಗಿ ಕಾದಿದೆ. ನಗರ ಜೀವನದ ನಿತ್ಯ ನರಕದ ಒಂದಂಶ ಈ ಕವಿತೆಯಲ್ಲಿ ಮಾನವ ಕರುಣೆ ಯನ್ನು ಮೂದಲಿಸುತ್ತ ನಿಂತಿದೆ.

"ಬೆಳಗಿನ ಮಂಜು" ನಗರದ ಮೇಲೆ ಮಾಗಿಯ ಹಿಮದ ಕಾವಳ ಕವಿದಿರುವ ಒಂದು ದೃಶ್ಯ. ರತ್ನಣ್ಣನ "ಮಡಿಕೇರೀಲಿ ಮಂಜು" ಎಂಬ ಕವಿತೆಯ ಸೊಗಸು ಒಂದು ಬಗೆ ; ಇವರದು ಮತ್ತೊಂದು ರೇಡಿಯೋ ಸಂಗೀತ ಮೊದಲಾಯಿತು, "ಕೋಟಿ ಯೋಜನವಿರಲಿ ದಾಟಿ ಬರುವೆನು ಹೆಣ್ಣೆ", "ಯಾರು ಬರುವರು ಹೇಳು ಮಂಜಿನೊಳಗೆ". ಎಂಬ–ವಿಡಂಬನೆ ಯಿಂದ ಮೊದಲಾಗುವ ಈ ಕವಿತೆಯಲ್ಲಿ ಕವಿ ದಾರಿಮುಚ್ಚಿದ ಮಂಜಿನಲ್ಲಿ ಎದುರುಗೊಂಡ ಕೆಲವು ಚಿತ್ರಗಳಿವೆ. ಕೊರಳಿಗೆ ಶಾಲುಸುತ್ತಿ ಸಿಗರೇಟು ಎಳೆಯುತ್ತ ನಿಂತಿರುವ ದುಡ್ಡಿನ ಡಬ್ಬಿ ಒಬ್ಬ, ಏನೋ ಮಂತ್ರಗಳನ್ನು ಮಿಸುಗುತ್ತ ಬರುವ ಜೀವವಿಮೆಯ ಏಜೆಂಟು, ದಾರಿಯಲ್ಲಿ ಮಲಗಿದ ಕತ್ತೆ,

ಕಲ್ಲುತುಂಬಿದ ಲಾರಿ, ಪಯಣ ಹೊರಟಿರುವ ಕುರುಡ, ಮುದುಕನನ್ನು ಎಳೆಯುತ್ತಿರುವ ಜೂಲುನಾಯಿ, ತಳ್ಳುಗಾಡಿ, ದಾರಿಯಂಚಿನಲ್ಲಿ ನಡೆಯುವ ಮೌನಿ ಹ್ಯಾಟಿನ ಕೆಳಗೆ ಪಿಳಿಪಿಳಿ ನೋಡುವ ಪೆಳ್ಳಗಣ್ಣು, ಬಸ್‌ಸ್ಟಾಪಿನ ಕಂಬಕ್ಕೆ ಒರಗಿನಿಂತಿರುವ ಪುಸ್ತಕಹಸ್ತೆ, ಅವಳ ಗಮನವನ್ನು ತನ್ನತ್ತ ಸೆಳೆಯುವ ರಾಗಮಾಲಿಕೆಯ ನವೀನ ರೋಮಿಯೋ, ಅವಳನ್ನೇ ನೋಡಿಯೂ ನೋಡದ ಹಾಗೆ ನಟಿಸುವ ಸುಲಭ ಸಂನ್ಯಾಸಿ–ಇವು ಮಂಜಿನ ಒಳಗಡೆ ಹುದುಗಿರುವ ಚಿತ್ರಗಳು. ಇನ್ನು ಏನೇನು ಅಡಗಿವೆಯೋ ಎಲ್ಲ ಬಲ್ಲವರಾರು? ಪಕ್ಷಪಾತವಿಲ್ಲದೆ ಒಂದೇ ಸಮನಾಗಿ ಎಲ್ಲವನ್ನೂ ಮಂಜು ಆವರಿಸಿದೆ ; ತಗ್ಗು–ಎತ್ತರ, ಚೆಲುವು–ವಕ್ರತೆ ಮುಂತಾದ ದ್ವಂದ್ವಗಳನ್ನೆಲ್ಲ ಸಮನಾಗಿಸಿದೆ, ಈ "ಬಿದ್ದು ಹೊರಳುವ ಮಂಜು, ಹೊರಳಿ ಕೆರಳುವ ಮಂಜು, ಬಿಳಿಯಾನೆ ಮಂಜು". ಈ ನಡುವೆ ಕಾಡೆಮ್ಮೆಯಂತೆ ಕಿರಿಚಿ ದಿಕ್ಕಿನ ಅಂಚಿಗೆ ಹೊಗೆಯನ್ನು ಒಳಿಯುತ್ತಿರುವ ರೈಲು ಇಂಜಿನ್ನು. ಹೀಗೆ ಸಾಗಿದೆ ನಗರದ ಮುಂಜಾವದ ಮಂಜಿನಲೀಲೆ. ಇನ್ನು ಮುಂದೆ ಬಿಸಿಲೇರುವುದು, ಮಂಜು ಬೆದರುವುದು–ಈ ತಾಯಿ ಮಕ್ಕಳಾಟ. ಮಿದುಳ ತುಂಬಿದ ಮಂಜು ಹರಿದು ತಂದೆ ಬೆಳಕು ಕಾಣಬೇಕು. ಆದರತ್ತ ಎಲ್ಲ ಪಯಣ ; ಜೀವಕ್ಕೆ ವಿಶ್ರಾಂತಿ ಬೆಳಕಿನಲ್ಲಿ. ಈ ಕವಿತೆ ಈ ಉನ್ನತಭಾವದಲ್ಲಿ ಮುಗಿಯುತ್ತದೆ. ಮಡಿಕೇರಿಯ ಮಂಜು ಬಿಸಿಲ ಚುಂಬನಕ್ಕೆ ಕರಗಿ ಹೋದಾಗ ಕಾಣುತ್ತದೆ, ಸುಂದರ ಶ್ಯಾಮಲತರುಲತಾಮಾಲೆಯ ಗಿರಿದರಿ ಶೃಂಗಗಳಿಂದ ತರಂಗಿತಳಾದ ತಾಯಿ ಪೃಥ್ವಿ ; ಬೆಂಗಳೂರಿನ ಮಂಜು ಚೆದರಿದಾಗ ? ಬೇಡ, ಸದಾ ಮುಚ್ಚಿಯೇ ಇರಲಿ–ಹೀಗೆ ಕೆಲವರಿಗೆ ತೋರಲೂಬಹುದು. ನಗರ ಜೀವನದ ಇಹದಿಂದ ಮೂಡಿಬಂದಿರುವ ಈ ಕವಿತೆಗಳು ಕವಿ ಸಮರ್ಥನೆಂಬುದನ್ನು ಸಾರುತ್ತಿವೆ.

ನಾಡುನುಡಿಗಳ ಪ್ರೇಮ ಕವಿಯಿಂದ ಕೆಲವು ಕವಿತೆಗಳನ್ನು ಹೇಳಿಸಿದೆ. "ಕನ್ನಡ ಮಾಧ್ಯಮ", "ನಿನಗೆ ಕನ್ನಡದೊಳಗೆ ಹೆಸರಿಲ್ಲವೆ", "ಧ್ವಜವಂದನೆ" ಮುಂತಾದ ಕವನಗಳು ಹೊಸಗನ್ನಡ ಕಾವ್ಯದಲ್ಲಿ ಚಿರಪರಿಚಿತವಾಗಿರುವ ಅಭಿಮಾನ ಭಾವಕ್ಕೆ ಉಂಟಾಗಿರುವ ರೂಪಾಂತರಗಳು. "ಏಕೆ ನಕ್ಕ ಬುದ್ಧ" ಎಂಬ ಪ್ರಶ್ನೆಯಿಂದ ಮೊದಲಾಗಿರುವ "ಬುದ್ಧಸ್ಮಿತ" ಕವಿತೆ ಆ ಪ್ರಶ್ನೆಗೆ

ಪರಿಹಾರವನ್ನು ಹುಡುಕುತ್ತ ಬುದ್ಧನ ಜೀವನದ ಕಥೆಯನ್ನು ಸ್ಮರಿಸಿ ಕೊಳ್ಳುತ್ತ ಶಾಂತಿಯ ಕರುಣೆಯ ಬೆಳ್ನಡೆಯ ಪ್ರತೀಕವೇ ಅಸ್ಮಿತವೆಂದೂ ವಿಷ್ಕದ ಜೀವ ಉಸಿರು ಅದೇ ಎಂದೂ ಇವತ್ತಿನ ಭಸ್ಮಾಸುರ ಪ್ರಶ್ನೆಗೆ ಅದೇ ಉತ್ತರವಾಗಿದೆಯೆಂದೂ ಒಂದು ತೆರನಾದ ತೀರ್ಮಾನಕ್ಕೆ ಬಂದಿರುವಂತೆ ತೋರುತ್ತದೆ. ಇಲ್ಲಿ ಹೊಸಕಾವ್ಯವೂ 'ನವ್ಯಕಾವ್ಯ'ವೂ, ಛಂದವೂ ಸ್ವಚ್ಛಂದವೂ ಸಹಜೀವನ ನಡೆಸುವುದಕ್ಕೆ ಪ್ರಯತ್ನಿಸುತ್ತಿದೆ. ಒಟ್ಟಿನಲ್ಲಿ ಈ ಕವನ ಸುಖಸ್ಫೂರ್ತಿಯನ್ನು ಹೆಚ್ಚಾಗಿ ಉಂಟುಮಾಡುತ್ತಿಲ್ಲ ; ಮಾತು ಗಾರಿಕೆ ಮಿಗಿಲು ; ಭಾವಪೂರ್ಣತೆ ಸಾಲದು. "ಗಾಂಧೀಸ್ತವನ" ಒಳ್ಳೆಯ ಕವಿತೆಯೆಂದು ನನ್ನೆಣಿಕೆ. ಅದರಲ್ಲಿ ಸಂಕೇತಕ್ಕೆ ಪ್ರಧಾನತೆ ಇರುವಂತೆ ಕಾಣುವುದರಿಂದ ಓದಿದಾಗ ಸುಲಭವಾಗಿ ಅರ್ಥಗ್ರಹಣವಾಗುವಂತಿಲ್ಲ. ಮೊದಲಿನ ಒಂಬತ್ತು ಸಾಲುಗಳು ಏನು ಹೇಳುತ್ತವೋ ನನಗೆ ಸ್ಪಷ್ಟವಾಗಿಲ್ಲ. ಮುಂದಕ್ಕೆ ಸಾಕ್ರೆಟೀಸ್, ಕ್ರಿಸ್ತ, ಗಾಂಧಿ–ಇವರ ಚಿತ್ರಗಳು ಬಂದಿವೆ. ಇವಾದ ಮೇಲೆ ಕವಿತೆಯ ಉಳಿದ ಭಾಗ ಗಾಂಧೀಗೆ ಮೀಸಲು. ಲೋಕ ಸೇವೆಗೆ ಮುಡಿಪಾಗಿದ್ದ ಆ ಮಹಿಮನನ್ನು ಲೋಕವೇ ಬಲಿತೆಗೆದುಕೊಂಡಿತು. "ಗಾಂಧಿಯೊಬ್ಬ ಮನುಷ್ಯನೇ" ಎಂಬ ಕಾಕುವಿನಿಂದ ಕವಿತೆ ಹುಟ್ಟು-ಸಾವುಗ ಳಾಚೆಗೆ ಏರಿಹೋಗುತ್ತಿದೆ. 'ಬಿಡುಗಡೆ' ಎಂಬ ಕವಿತೆಯಲ್ಲೂ ಹತ್ತು ವರ್ಷಗಳ ಭಾರತದ ಸಾಧನೆ ನಿರೂಪಿತವಾಗಿ ನೌಖಾಲಿಯಲ್ಲಿ, ಕಾಲ್ನಡೆಯಲ್ಲಿ ಜನದ ಕಣ್ಣೀರೊರೆಸಲು ನಡೆದು ಪುಣ್ಯದೆಡೆಗೆ ಸಂದ ಗಾಂಧೀಜಿಯ ಪವಿತ್ರ ಚಿತ್ರವಿದೆ ; ಹೊಸ ಹುಟ್ಟಿನ ಭಾರತದ ಮುನ್ನಡೆಯಲ್ಲಿ ಆಶಾವಾದಿತ್ವವಿದೆ. ಮಾನವ ನಾಗರಿಕತೆಯ ವಿಕಾಸದಲ್ಲಿ ಸತ್ಯಧರ್ಮಗಳ ದಿವ್ಯ ಸಂದೇಶವನ್ನು ಕ್ರಿಸ್ತನು ಸಾರಿದಂತೆಯೇ ಈಗ ಪ್ರೇಮ, ಸೌಹಾರ್ದಗಳನ್ನು ಲೋಕದಲ್ಲಿ ಪ್ರತಿಷ್ಠಿಸುವ ಕಾರ್ಯ ಭಾರತವನ್ನು ಅವಲಂಬಿಸಿದೆಯೆಂಬ ಭಾವ "ಸತ್ಯಮೇವ ಜಯತೆ" ಕವನದಲ್ಲಿ ದನಿದೋರಿದೆ.

ಇನ್ನುಳಿದ ಕವನಗಳಲ್ಲಿ "ಹಿಂದಿನ ಸಾಲಿನ ಹುಡುಗರು" ವ್ಯಂಗ್ಯ ವಿಡಂಬನೆಗಳಿಂದ ಸೊಗಸಾಗಿದೆ; "ಎರಡೂ ಒಂದೆ!;" ಸ್ವಾತಂತ್ರ್ಯದಿಂದೀಚಿನ ರಾಜಕೀಯ ಮುಂದಾಳುಗಳ ತುದಿನಾಲಗೆಯ ವಿರಕ್ತಿಯನ್ನು ಗೇಲಿಮಾಡು

ತ್ತಿದೆ. "ಹೊಸ ಚಂದಿರ", "ಅನ್ಯಂ ಚಂದ್ರಂ ಕರಿಷ್ಯಾಮಿ" ಎಂಬ ವಿಜ್ಞಾನಿಯ ಪ್ರಯತ್ನವನ್ನು ಮೆಚ್ಚುವುದಾಗಿದ್ದರೂ ಸಂದೇಹ ಭಯಗಳನ್ನು ಬಿಟ್ಟಿಲ್ಲ ; ಅಣುವಿನಲ್ಲಿ ಅಡಗಿರುವ ಶಕ್ತಿಕಾಳಿ ಪ್ರಳಯಕಾರಿಣಿಯಾಗದೆ ಲೋಕಕ್ಕೆ ಲಕ್ಷ್ಮಿಯಾಗಲಿ ಎಂಬ ಹಾರೈಕೆ ಇದೆ. ಯಾವುದನ್ನೂ ಮೆಚ್ಚದ ವಿಮರ್ಶಕನ ವಿಡಂಬನೆ "ಇಕ್ಕಳ" ಹೀಗೆಯೇ ಇನ್ನಿತರ ಕವಿತೆಗಳನ್ನೂ ನೋಡಿಕೊಳ್ಳಬಹುದು.

ಶ್ರೀಮಾನ್ ನರಸಿಂಹಸ್ವಾಮಿಯವರು ಶಬ್ದಚಿತ್ರ ನಿರ್ಮಾಣದಲ್ಲಿ ತುಂಬ ಚತುರರು ; ಸುಮಾರು ಎಲ್ಲ ಕವಿತೆಗಳಲ್ಲೂ ಕನಿಷ್ಟಪಕ್ಷ ಒಂದೋ ಎರಡೋ ಇಂಥವು ದೊರೆಯುತ್ತದೆ. "ದಡದ ಸಾಲಗೆ ನೀಡಿ ನೆಕ್ಕುವ ಹೊಳೆ ; ಬಯಕೆ ಕಟ್ಟಿದ ಚೆಲುವಿನೂರ ಹೆಬ್ಬಾಗಿಲಿಗೆ, ಮಳೆ ಬಿಲ್ಲ ಧ್ವಜವಾಗಿ ಮೂಡಿದುದು ಒಲುಮೆ ; ಕತ್ತಲಲಿ ಕದ್ದು ಬರುತಿದೆ ರಾಗ ಸಲಗ ; ಈ ಮೌನ ಹೂವಿರದ ಪೆರ್ಳು ; ಶರದ್ಗಗನದ ನೀಲಕಂಠವಲಿ ಇನ್ನೂ ತೂಗುತಿದೆ ಪಾದರಿ ಮುಗಿಲಮಾಲೆ ; ಬಾನಾಡಿಯುಲಿವ ಮಲೆಕೋಡಿನಿಂದ ಕೆಳಗುರುಳಿ ನೂಲುನೀರು ಕಂಬನಿಗಳಾಗಿ ಕಡೆಗಿಲ್ಲವಾಗಿ ಮಳೆಬಿಲ್ಲ ನೂರು ಚೂರು ; ಬಾನವೀಣೆಯುಲಿ ಮೌನ ಭಾಷೆಯುಲಿ ಸಂಜೆಮೋಡಗಳ ಹಾಡು ; ಬಿಸಿಲೆಣ್ಣೆಯಿಟ್ಟ ಹೊಸ ಮನೆಯುನೆತ್ತಿ ಹೊಗೆಯಾಡುತಿಹುದ–ಕಂಡೆ : ಜೌಹಿಡಿದ ಬೆಟ್ಟಗಳ ನೀರ್ ಬೀಳ ಜಾಡಿನಲಿ ಹುಬ್ಬುವುದು ಹುಲಿಗಣ್ಣ ಲಕ್ಷದೀಪ ; ಕಣ್ಣೋ ಸಣ್ಣಗೆ ಕವಡೆಯ ಬಿರುಕು ; ನೋಡಲ್ಲಿ ಮಲ್ಲಿಗೆಯ ಬಿಳಿ ಮೈಯ ಹಕ್ಕಿ ; ಕೋಟಿ ಕಿಡಿಗಳ ಕುಲುಮೆ ನನ್ನ ಒಲುಮೆ ; ಹಗಲ ಕೆನ್ನೆಗೆ ಭಾರ ಇರುಳ ಹೆರಳು : ನಾನು ಕವಿಕಣೋ, ಮಹಾಕವಿಕಣೋ, ಪಠ್ಯ ಪುಸ್ತಕಗಳಲ್ಲಿ ಕೀರ್ತಿಶೇಷ ; ಅಕ್ಕಿರಾಶಿಗೆ ಬಿದ್ದ ಸವೆದ ಪಾವಲಿ ಸೂರ್ಯ; ಸಾಸಿವೆಗಿಂತ ಸಣ್ಣ ಕಾವ್ಯಬೀಜ ಹೆಮ್ಮರನ ಕನಸ ಕಂಡಿತು ; ಹಳೆಯ ಸಾಲ ತೀರಿತೆಂದು ಇಕೋ ನಕ್ಕಿಸು ; ಮೂರನೆಯ ನೆರಳು ಹೆಬ್ಬಾವಿ ನೂರೆ ಗೋಲನು ಹಿಡಿದು, ಹೆಬ್ಬುಲಿಯ ಹೆಜ್ಜೆಯನು ಹಿಡಿದು ನಡೆಯುತಿದೆ ; ಕಲ್ಲು ಕಾಣದು ತನ್ನ ಎದೆಯ ಬಂಗಾರವನು"—ಇಂಥಾ ಸವಿನುಡಿ ಚಿತ್ತಾರ

ಗಳು ಪ್ರತಿಭೆಯ ಕಾಣ್ಕೆಯ ಸ್ಪಂದನಗಳು. ಇವು ನವೀನ, ಸಹಜ, ಅನಿರೀಕ್ಷಿತ, ಸುಂದರ ; ಆದ್ದರಿಂದ ಅಚ್ಚರಿಯ ಮೆಚ್ಚಿಕೆಗೆ ಪಾತ್ರ.

ತಮ್ಮ ಕವಿಯ ಸ್ವರೂಪವನ್ನು ಕುರಿತು ಶ್ರೀಮಾನ್ ನರಸಿಂಹಸ್ವಾಮಿಯವರು ಒಂದೆರಡೆಡೆ ಕೆಲವು ಮಾತನ್ನು ಹೇಳಿದ್ದಾರೆ.

1) ಋತುಗತಿಯಲ್ಲ ಶೈಲಿಮತಿಯಲ್ಲಿ ಶಬ್ದರತಿಯಲ್ಲ ನನ್ನ ಕವಿತೆ ;
ಪದಪದಕವಿಲ್ಲ ತಲೆಭಾರವಿಲ್ಲ ನಿಮ್ಮುಸಿರು ನನ್ನ ಕವಿತೆ ;
ಅಹಂಕಾರವಿಲ್ಲ, ಅಲಂಕಾರವಿಲ್ಲ ನಿಜಾಕಾರ ನನ್ನ ಕವಿತೆ ;
ನನನ್ನ ಸೆಗಣ್ಣ ಬಂದರಿಗೆ ಬಂದ ಶರನೌಕೆ ಈ ಕವಿತೆ.

2) ಯಾವುದನುಭವದ ಸಹಜಕ್ರಾಂತಿಯೊ
ಆದಾಗಲಿ ನನ್ನ ಕಲೆ.

3) ಇಹದ ಪರಿಮಳದರದ ಹಾದಿ ಒಡಿದು
ಬದುಕು ದುರ್ಬಲವಾಯಿತು
ಕವಿತೆ ನೀರಸವಾಯಿತು.

4) ಇಹದ ತಳಹದಿಯಿಂದ ದಿಟದ ದರ್ಶನವರಳಿ
ಹಂಬಲಿಸಿ ಹಾಡಾಗಬೇಕು.

ಈ ಅಭಿಪ್ರಾಯಗಳನ್ನು ಕೊಂಚ ಹಿಸುಕಿ ನೋಡಬೇಕು. ಇವುಗಳಲ್ಲಿ ಒಂದು ಕವಿತೆಯ ರೀತಿಗೆ ಸೇರಿದ್ದು ; ಇನ್ನೊಂದು ವಸ್ತುವಿಗೆ ಸೇರಿದ್ದು. ರೀತಿ ಸಹಜವಾದದ್ದು ; ಅದರಲ್ಲಿ ಶಬ್ದಪ್ರೇಮ, ಅಲಂಕಾರ, ಶೈಲಿಗಾಗಿಯೇ ಬರೆಯಬೇಕೆಂಬ ದೃಷ್ಟಿ, ಭಾವದ ಭಾರಕ್ಕಿಂತ ಮಿಗಿಲಾದ ಮಾತಿನ ಭಾರ, ಅಹಂಕಾರ, ನಿರ್ದಿಷ್ಟನಿಯಮಾನುಸರಣೆ—ಇವು ಯಾವುದೂ ಆ ಸಹಜತೆಯನ್ನು ಕೃತಕತೆಗೆ ತಿರುಗಿಸುತ್ತಿಲ್ಲ ; ಹೇಗೆ ತಾನಾಗಿಯೇ ಕವಿತೆ ಹೊಮ್ಮಬೇಕೋ ಆ ರೀತಿ ಇಲ್ಲಿದೆ. ಇದು ವಾಲ್ಮೀಕಿಯ ಮಾತುಗಾರಿಕೆಯ ಜೀವಾಳವೆಂದೂ ಅದು ಇಲ್ಲಿದೆಯೆಂದೂ ಒಂದು ಸೂಚನೆ ಇದೆ. ಈ ದೃಷ್ಟಿಯಿಂದ ಈ ರೀತಿಯ ಸಹಜತೆ ಇಲ್ಲಿ ತುಂಬ ಇದೆಯೆಂದು ವ್ಯಕ್ತವಾಗುತ್ತದೆ. ಇನ್ನು

ವಸ್ತುವಿನ ವಿಚಾರ ; ಅದು ಇಹಕ್ಕೆ ಸಂಬಂಧಿಸಿದ್ದಾಗಿರಬೇಕು. ಲೋಕ ಜೀವನದ ನೂರಾರು ನೋವು ನಲಿವುಗಳು ತಮ್ಮನ್ನು ಎತ್ತಿಕೊಳ್ಳಬೇಕೆಂದು ಕವಿಯನ್ನು ಕರೆಯುತ್ತಿವೆ. ಈ ಜೀವನದರ್ಶನದಿಂದ ಕವಿಗಾಗುವ ಚಿತ್ತ ಸಂವೇದನೆ ನೇರಾಗಿ ಅವನ ಕಾವ್ಯದಲ್ಲಿ ಬರಬೇಕು. ಕಣ್ಣಮುಂದೆ ಹರಡಿ ಕೊಂಡಿರುವ ಈ ಇಹದ ಉಪಾಸನೆಯಿಂದ ಕವಿಪರಕ್ಕೆ ಪ್ರಯಾಣ ಮಾಡ ಬಹುದು. ಆದಿಭೌತಿಕದಿಂದ, ಅದರ ಮೂಲಕವಾಗಿ, ಆಧ್ಯಾತ್ಮ ಸಾಧ್ಯ ವಾಗುತ್ತದೆ. ಅದನು ಬಿಟ್ಟು ಒಂದೇ ನೆಗೆತಕ್ಕೆ ಆಧ್ಯಾತ್ಮವನ್ನು ಮುಟ್ಟ ಬೇಕೆಂಬ ಯತ್ನದಲ್ಲಿ ಅಪ್ರಾಮಾಣಿಕತೆಗೆ ಅವಕಾಶವಾಗುತ್ತದೆ. ಅಧ್ಯಾತ್ಮ ದಲ್ಲಿ ಸಹಜ ಪ್ರವೃತ್ತಿಯಿದ್ದು ದೀರ್ಘಕಾಲದ ಸಾಧನೆಯಿಂದ ಉದ್ಭೋದ ವಾಗುವ ಅನುಭವಗಳು ಕಾವ್ಯಕ್ಕೆ ವಸ್ತುವಾಗುವುದು ಸಹಜ. ಪ್ರವೃತ್ತಿ ಸಾಧನೆಗಳಿಲ್ಲದೆ, ಓದಿನಿಂದ ಬಂದ, ತೆಳ್ಳಗಿರುವ, ಆರೋಪಿತವಾಗಿರುವ ಅನುಭವವನ್ನು ಬುದ್ಧಿಯಿಂದ ತಿಕ್ಕಿ ಏನೋ ಗಹನವೆಂದು ತೋರುವಂತೆ ಮಾಡುವುದು ವಂಚನೆಯ ವ್ಯಾಪಾರ. ಕಾಣುವುದನ್ನು ತೊರೆದು ಕಾಣದ್ದನ್ನು ಕಂಡೆನೆಂದು ಭ್ರಮೆಗೊಂಡು ಇತರರಿಗೆ ದಿಗ್ಭ್ರಮೆ ಹಿಡಿಸುವುದು ಯಾವ ನ್ಯಾಯ ? ಇಂಥ ಅಗ್ಗದ ಅಧ್ಯಾತ್ಮವನ್ನು ಕಿವಿಹಿಡಿದು ತಂದು ಕಾವ್ಯದಲ್ಲಿ ತುಂಬುವುದಕ್ಕಿಂತ ಇಹದ ಭವದ ದೀರ್ಘ ಗಭೀರ ಪರಿಶೀಲನೆಯಿಂದ ಬಂದ ಅನುಭವವನ್ನು ಹೇಳುವುದು ಮೇಲು. ಎಲ್ಲ ಅನುಭವವೂ, ಇಹವಾಗಲಿ ಅಧ್ಯಾತ್ಮವಾಗಲಿ ಕಾವ್ಯವಸ್ತುವಾಗಲಾರದೆಂಬುದು ಸರ್ವವಿಧಿತ. ಅಸಾ ಮಾನ್ಯತೆ, ಸತ್ಯತೆ, ಚೆಲುವು ಇವು ಇರುವುವು ಮಾತ್ರ ಕಾವ್ಯಯೋಗ್ಯ. "ಯಾವುದಿಹವೋ 'ಬಂಧನವೊ' 'ಭ್ರಾಂತಿ'ಯೋ ಅದಾಗಲಿ ನನ್ನ ನೆಲೆ" ಎಂಬ ಕವಿಯ ಪಂಥ ಆತನ ಈ ಕವಿತೆಗಳಲ್ಲಿ ಸಾಕಾರವಾಗಿರುವುದು ವೈಯಕ್ತಿಕವಾಗಿ ನನಗೆ ಸಂತೋಷಕರ.

ನನ್ನನ್ನು ನಮ್ರ ದೃಷ್ಟಿಯಲ್ಲಿ, ಭಾವಗೀತೆ ಎಷ್ಟು ಲೋಕೋತ್ತರ ವಾಗಿದ್ದರೂ, ಕವಿ ಶಕ್ತಿಯ ಪೂರ್ಣಾವಿಷ್ಕರಣಕ್ಕೆ ಅಲ್ಲಿ ಅವಕಾಶ ಸಾಲದು–ಮಾನವ ಜೀವನ ನಾಟಕದ ಹತ್ತಾರು ದೃಶ್ಯಗಳು ಒಟ್ಟಿಗೆ ಸೇರಿ ಹತ್ತಾರು ವ್ಯಕ್ತಿಗಳ ಹೃದಯಮಥನದಿಂದ ಕ್ರಿಯಾ

ಮಯವಾಗಿ ಭಿನ್ನ ಆದರ್ಶಗಳ ತುಮುಲದಿಂದ ರಮಣೀಯವಾಗಿ ಉನ್ನತಿಯ ನೆಲೆಗೆ ಕವಿಮನವನ್ನು ಕೊಂಡೊಯ್ಯುವ ರಚನೆಗಳಲ್ಲಿ ಕವಿಶಕ್ತಿ ಧೀರವೂ ಗಂಭೀರವೂ ಆದ ಸಿಂಹಗಮನದಿಂದ ಭವಾನುಭೂತಿಯನ್ನುಂಟುಮಾಡ ಬಲ್ಲುದು. ಆ ದಿಕ್ಕಿನಲ್ಲಿ ಈ ಕವಿಗಳ ಶಕ್ತಿ ಹರೆಯಲಿ ; ದೊಡ್ಡದನ್ನು ಹಿಡಿಯಲಿ, ಸಾಧಿಸಲಿ. "ಯೋ ವೈ ಭೂಮಾ ತತ್ಸುಖಂ". ಶ್ರೀ ನರಸಿಂಹ ಸ್ವಾಮಿಯವರ ಇತರ ಕೃತಿಗಳನ್ನು ನಮ್ಮ ಜನ ಆದರದಿಂದ ಬರಮಾಡಿ ಕೊಂಡಿರುವಂತೆಯೇ ಈ ಕೃತಿಯನ್ನೂ ಸ್ವಾಗತಿಸಲಿ ಎಂಬ ಹಾರೈಕೆಯಿಂದ ಮಿತಿಮೀರಿ ಬೆಳೆದಿರುವ ಈ ಮುನ್ನುಡಿಗೆ ಇನ್ನು ವಿರಾಮವಿರಲಿ.

# ಕಣ್ಮರೆಯಾದ ಕನ್ನಡ, ಮಹಾರಾಷ್ಟ್ರದ ಮೂಲ

ಇವೆರಡೂ ಆಕಾರದಲ್ಲಿ ಸಣ್ಣವಾಗಿದ್ದರೂ ದೊಡ್ಡ ವಿಷಯವನ್ನು ಕುರಿತ ಗ್ರಂಥಗಳು ; ಸಂಶೋಧಕರಿಗೆ ಬೇರೊಂದು ಹೊಸ ಹೊಲವನ್ನು ತೆರೆದು ತೋರಿಸುವಂಥವು. ಎರಡನೆಯ ಪುಸ್ತಕ ಮೊದಲನೆಯದಕ್ಕೆ ಪರಿಶಿಷ್ಟದಂತಿದೆ. ಇವುಗಳ ಉದ್ದೇಶ—ಪ್ರಾಚೀನ ಕಾಲದಲ್ಲಿ ಎಂದರೆ ನೃಪತುಂಗನಿಗಿಂತ ಹಿಂದೆ ಕನ್ನಡನಾಡಿನ ವಿಸ್ತಾರವೆಷ್ಟಿದ್ದಿತು ? ಭಾಷೆಯ ಪ್ರಭಾವ ಏನಿದ್ದಿತು ? ಎಂಬುದನ್ನು ದೊರೆಯುವ ಆಧಾರಗಳಿಂದ ಅರೆದು ಒರೆದು ತರ್ಕಿಸಿ ಗೊತ್ತುಮಾಡುವುದು; 'ಕನ್ನಡ'ರ ಮೂಲಸ್ಥಾನ ಯಾವುದು ? ಅಂತೆಯೇ ಮರಾಠರ ಮೂಲಸ್ಥಾನ ಯಾವುದು ? ಎಂಬ ಸಮಸ್ಯೆಗಳನ್ನು ಬಿಡಿಸುವುದು. ವಿಷಯ ತೀರ ಗಂಟಾದದ್ದು. ಹಲವು ಕಾಲ ದಿಂದ ಎಣ್ಣೆ ನೀರುಗಳನ್ನು ಕಾಣದೆ ತಿರಿಕಟ್ಟಿಕೊಂಡಿರುವ ಜೋಗಿಯ ಗಡ್ಡ ದಂತಿದೆ ಅದು. ಜೊತೆಗೆ, ಆಗಾಗ ಗೂಡುಕಟ್ಟಿಕೊಳ್ಳುತ್ತ, ಗಡ್ಡದ ಬಹುಭಾಗ ತಮಗೆ ಸೇರಿದ್ದೆಂದು ಚಿಲಿಪಿಲಿಗುಟ್ಟುತ್ತಿದ್ದ 'ಹಾರಾಡುವ ಹಕ್ಕಿಗಳು' ಬೇರೆ.

---

ಶಂ. ಬಾ. ಜೋಶಿ ಮನೋಹರ ಗ್ರಂಥ ಪ್ರಕಾಶನ ಸಮಿತಿ, ಧಾರವಾಡ.

ಈಗಲೂ ಈ ಕಾದಾಟ ತಪ್ಪಿಲ್ಲ. ಇದರಿಂದ ದಕ್ಷಿಣಾಪಥದ, ಅದರಲ್ಲಿಯೂ ವಿಂಧ್ಯಪರ್ವತದಿಂದ ಕಾವೇರಿಯವರೆಗಿರುವ ನಾಡುಗಳ ಚಕ್ಕುಬಂದಿ ಕಾಲ ಕಾಲಕ್ಕೆ ಮಾರ್ಪಡುತ್ತ ಹೋಗಿತ್ತು. ಇದಕ್ಕೆಲ್ಲ ಕಾರಣಗಳನ್ನು ಕಂಡುಹಿಡಿದು ನಾಲ್ಕಾರು ಕಡೆಗಳಿಂದ ಆಧಾರಗಳನ್ನು ಆರಿಸಿ ತಂದು ನುಣ್ಣಿಸಿ ನೋಡಿ, ಒಮ್ಮುಖವಾಗುವಂತೆ ಅವುಗಳನ್ನು ಜೋಡಿಸಿ ಒಂದು ನೆಲೆಗೆ ಬಂದು ನಿಲ್ಲುವುದು ಅತಿ ಕಷ್ಟವಾದ ಕೆಲಸ. ಶ್ರೀಮಾನ್ ಜೋಶಿಯವರು ಎಷ್ಟು ಕಷ್ಟಪಟ್ಟಿದ್ದಾರೆಂಬುದನ್ನು ಆಡಿ ತೋರಿಸುವುದಕ್ಕಿಂತ ಅವರ ಗ್ರಂಥಗಳ ಯಾವ ಹಾಳೆಯನ್ನಾದರೂ ಓದಿ ನೋಡಬೇಕೆಂದು ಕೇಳುವುದು ಒಳ್ಳೆಯದು. ಅವರ ಪರಿಶ್ರಮ, ಆಯ್ಕೆ ಜೋಡಣೆ, ಕೌಶಲ್ಯ—ಇವನ್ನು ಮೆಚ್ಚಿ ಹೊಗಳ ದಿರುವುದು ಸಾಧ್ಯವಿಲ್ಲ. "ಸಂಶೋಧಕನೆಂದು ನಾನಿದನ್ನು ಬರೆಯಲು ಕೈಕೊಂಡವನಲ್ಲ" ಎಂದು ಅವರು ನಮ್ರತೆಯಿಂದ ಹೇಳಿಕೊಂಡಿದ್ದರೂ ಸಂಶೋಧಕನ ಪರಿಶ್ರಮ ಉದ್ದಕ್ಕೂ ಅವರಲ್ಲಿ ಕಾಣುತ್ತಿದೆ.

"ಮೂಲ ಕನ್ನಡವು ನರ್ಮದಾತೀರವೆಂದೇ ಗೊತ್ತಾಗುತ್ತದೆ" ಎಂಬುದು ಅವರ ನಿರ್ಣಯ. ಅದರ ವಿಮರ್ಶೆಗೆ ಹೊರಡುವ ಮೊದಲು ಒಂದು ಮಾತನ್ನು ಹೇಳಬೇಕೆಂದೆನಿಸುತ್ತದೆ. ಭಾಷೆಯ ದೃಷ್ಟಿಯಿಂದ ರಾಜಕೀಯ ಪ್ರಾಂತಗಳನ್ನು ರಚಿಸಬೇಕೆಂದು ಹವಣಿಸುತ್ತಿರುವ ಈ ಕಾಲದಲ್ಲಿ ಇಂಥ ಪುಸ್ತಕಗಳು ಹುಟ್ಟುವುದು ಸ್ವಾಭಾವಿಕ. ಕಾವೇರಿ, ನರ್ಮದೆಗಳ ನಡುವಣ ನಾಡು ಬಹುಕಾಲದಿಂದ ಕನ್ನಡ-ತೆಲುಗು-ಮರಾಠಿಗಳ ಕದನ ಕ್ಷೇತ್ರವಾಗಿದೆ. ಈಗಲೂ ಹಾಗಿದೆ. ಈ ಮುಮ್ಮೂಲೆಯ ತಿಕ್ಕಾಟದಲ್ಲಿ ಗಡಿನಾಡಿನವರ ಪಾಡು ಹೇಳತೀರದು. 'ಇತ್ತ ಪುಲಿ, ಅತ್ತ ದರಿ' ; ನಿಂತಲ್ಲಿ ನೆಲೆಯಿಲ್ಲ, ಸುಖವಿಲ್ಲ—ಹೀಗಾಗಿದೆ. ಒಂದು ಕಡೆಯಿಂದ ಮರಾಠರು ನುಗ್ಗುತ್ತಿದ್ದರೆ ಇನ್ನೊಂದು ಕಡೆಯಿಂದ ತೆಲುಗಿನ ದಾಳಿ. ಕನ್ನಡಿಗರೇನೂ ಸುಮ್ಮನೆ ಕುಳಿತಿಲ್ಲ. ಹಿಂದೆ ಅವರ ನಾಡುಗಳನ್ನು ಆಕ್ರಮಿಸಿಕೊಂಡು ಒಂದೇ ಕೊಡೆ ಯಿಂದ ಅವರು ಆಳುತ್ತಿದ್ದರು ; ಈಗಲೂ ತೆಲುಗು ನಾಡಿನ ಕೆಲವು ಭಾಗ ಗಳು ಕನ್ನಡ ನಾಡಿಗೆ ಸೇರಿಹೋಗಿವೆ. ಇಂಥ ಕಾಲದಲ್ಲಿ ಸುಮ್ಮನೆ ತಮ್ಮ ತಮ್ಮ ಹಳೆಯ ಹೆಚ್ಚುಳಿಕೆಯನ್ನು ತೋರಿಸಿಕೊಳ್ಳುವ ಗ್ರಂಥಗಳನ್ನು

ಬರೆಯುವುದಕ್ಕಿಂತ ಅಚ್ಚ ಸತ್ಯಾನ್ವೇಷಣ ದೃಷ್ಟಿಯಿಂದ ಅವನ್ನು ಬರೆದರೆ ಲೇಸು. 'ಕಣ್ಮರೆಯಾದ ಕನ್ನಡ'ದ ಉತ್ಕೃಷ್ಟ ವಿಚಾರಸರಣಿಯಲ್ಲಿ ಗ್ರಂಥ ಕರ್ತರು ಅಭಿಮಾನಕ್ಕೆ ಮೇಲ್ಮೆಯನ್ನು ಕೊಟ್ಟಿರುವುದು ದೊಡ್ಡ ಕುಂದು. ಆದರೆ 'ಮಹಾರಾಷ್ಟ್ರದ ಮೂಲ'ದಲ್ಲಿ ಈ ಕುಂದು ತೀರ ಕಡಮೆಯಾಗಿರುವುದು ಸಂತೋಷದ ವಿಷಯ.

ಮೂಲ ಕನ್ನಡದ ಸ್ಥಾನ ನಿರ್ದೇಶ ಮಾಡುವುದಕ್ಕೆ ಶ್ರೀಮಾನ್ ಜೋಶಿಯವರು ಉಪಯೋಗಿಸಿಕೊಂಡಿರುವ ಆಧಾರಗಳು ನಾನಾ ಕಡೆಗಳಿಂದ ಬಂದಿವೆ. ಕೆಲವು ಭಾಷಾಶಾಸ್ತ್ರಕ್ಕೆ ಸಂಬಂಧಿಸಿದುವು ; ಕೆಲವು ಹಳೆಯ ಗ್ರಂಥಗಳಲ್ಲಿ ದೊರೆಯುವ ಉಲ್ಲೇಖಗಳು ; ಕೆಲವು ಚರಿತ್ರೆಗೆ ಸೇರಿದುವು ; ಇನ್ನು ಕೆಲವು ಮಾನವಕುಲಶಾಸ್ತ್ರಕ್ಕೆ ಸೇರಿದುವು. ಇವೆಲ್ಲ ಒಂದರೊಡನೊಂದು ಹಾಸುಹೊಕ್ಕಾಗಿ ಹೆಣೆದುಕೊಂಡು ಅವರ ಗುರಿಯ ಕಡೆಗೆ ಪ್ರಯಾಣ ಬೆಳೆಸಿವೆ. ಇವುಗಳಲ್ಲಿ ಮುಖ್ಯವಾದುವನ್ನು ಬಿಡದೆ ಅವರ ವಾದವನ್ನು ಹೀಗೆ ಸಂಗ್ರಹಿಸಬಹುದು.

ಮಹಾಭಾರತ ಬೃಹತ್ಸಂಹಿತಾದಿಗಳಲ್ಲಿ ಕರ್ಣಾಟ ದೇಶವನ್ನು ವನವಾಸಿ ಕುಂತಲ ಮಹಿಷಮಂಡಲಾದಿಗಳಿಂದ ಬೇರ್ಪಡಿಸಿ ಹೇಳಿದೆ. ಈಗ ಇವೆಲ್ಲ ಕನ್ನಡ ನಾಡಿನಲ್ಲಿ ಐಕ್ಯವಾಗಿದ್ದರೂ ಮಹಾಭಾರತದ ಕಾಲದಲ್ಲಿ ಕರ್ಣಾಟವೆಂಬ ಬೇರೆಯಾದ ಪ್ರದೇಶವಿದ್ದಿರಬೇಕು. ಕಾವೇರಿಯಿಂದ ಗೋದಾವರಿಯವರೆಗಿರುವ ನಾಡು ಕನ್ನಡದ ಜನಪದವೆಂದು ನೃಪತುಂಗನು ಹೇಳಿದ್ದಾನೆ. ಅನೇಕ ಒಳನಾಡುಗಳು ಈ ಎರಡು ಹೊಳೆಗಳ ನಡುವೆ ಇದ್ದಂತೆ ತಿಳಿದುಬಂದಿದ್ದರೂ ಕನ್ನಡವೆಂಬ ನಾಡು ಮಾತ್ರ ಇದ್ದಂತೆ ಕಂಡುಬಂದಿಲ್ಲ. ಕಾವೇರಿಯಿಂದ ತೆಂಕಲು ತಮಿಳುನಾಡು ; ಅಲ್ಲಿ ಕರ್ನಾಟವಿದ್ದಿರಲಾರದು. ಆದ್ದರಿಂದ ಗೋದಾವರಿಯಿಂದ ಉತ್ತರಕ್ಕೆ ಇದ್ದಿರಬೇಕು. ಅಂಡಯ್ಯನು ಹೇಳುವ 'ಕನ್ನಡವೆನಿಪ್ಪಾನಾಡು' ಉತ್ತರ ದಕ್ಷಿಣ ಕನ್ನಡ ಜಿಲ್ಲೆಗಳಿಗೆ ಈ ಪ್ರದೇಶವನ್ನು ಒಂದೊಂದು ಕಾಲದಲ್ಲಿ ಒಂದೊಂದು ಹೆಸರಿನಿಂದ ಕರೆಯುತ್ತಿದ್ದರು. ಆ ದ್ದ ರಿಂ ದ ಈ ಹೆಸರು ಹೆಚ್ಚು ಕಡಮೆ

ತಿಂಡೆಯ್ಯನ ಕಾಲದಲ್ಲಿ ಎಂದರೆ ೧೩ನೆಯ ಶತಮಾನದಲ್ಲಿ ಬಂದಿರಬೇಕು. ಹಾಗೆಯೇ ಬಿಜಾಪುರ ಜಿಲ್ಲೆಯಲ್ಲಿ 'ಕನ್ನಡ ನಾಲ್ಸಾಯಿರ' ನಾಡೊಂದಿದ್ದಿತೆಂದು ೧೨೧೦ ರಲ್ಲಿ ಹುಟ್ಟಿದ ಒಂದು ಶಾಸನದಿಂದ ತಿಳಿದುಬಂದಿದೆ. ೧೨೧೦ ಕ್ಕೆ ಹಿಂದೆ ಎಂದರೆ ಬಿಜ್ಜಳನ ಕಾಲದಲ್ಲಿ (೧೧೫೭–೧೧೬೭) ಈ ಪ್ರಾಂತಕ್ಕೆ ಈ ಹೆಸರಿರದೆ 'ತರ್ದೇವಾಡಿ' ಎಂಬ ಹೆಸರಿತ್ತು. ಇವೆರಡಕ್ಕೂ ಈ ಹೆಸರುಗಳು ಬರಲು ಕಾರಣ ಏನು ? ಇವೆರಡೂ ಆಗಂತಕ ಎಂಬುದು ಸ್ಪಷ್ಟ. ಆದ್ದರಿಂದ ಕ್ರಿ.ಶ. ೫–೬ನೆಯ ಶತಮಾನಗಳಿಂದಲೂ ಬೇರೆ ಇನ್ನಾವುದೋ ಪ್ರದೇಶದಿಂದ ಕನ್ನಡಿಗರು ಬರುವುದಕ್ಕೆ ಆರಂಭವಾಗಿ ೧೩ನೆಯ ಶತಮಾನದಲ್ಲಿ ಇವರ ಸಂಖ್ಯೆ ಹೆಚ್ಚಾಗಿ ಈ ಹೊಸ ಹೆಸರುಗಳು ಬಂದಿರಬಹುದು. ಹೀಗೆ ಈ ನಾಡುಗಳಿಗೆ ಬಂದು ನೆಲಸಿದ ಕನ್ನಡಿಗರು ಎಲ್ಲಿಂದ ಬಂದಿರಬಹುದು ? ಹಿಂದೆ ಹೇಳಿದಂತೆ 'ಕರ್ಣಾಟ'ವು ಗೋದಾವರಿಯಿಂದ ಉತ್ತರಕ್ಕೆ ಇದ್ದಿರಬೇಕು. ಅಲ್ಲಿಂದಲೇ ಇವರು ಬಂದು ನೆಲಸಿರುವುದು ಸ್ವಾಭಾವಿಕವಾಗಿದೆ.

ಆದ್ದರಿಂದ ಗೋದಾವರಿಯಿಂದ ಉತ್ತರಕ್ಕೆ ಕನ್ನಡದ ಕುರುಹುಗಳಿರಬೇಕು. ಇವನ್ನು ವಿಂಗಡಿಸಿ ತೋರಿಸುವುದಕ್ಕಿಂತ ಮುಂಚೆ ಇನ್ನೊಂದು ಸಮಸ್ಯೆಯನ್ನು ಬಿಡಿಸಬೇಕು. ಆರ್ಯರ ಕಾಲದಲ್ಲಿ ದಕ್ಷಿಣಾಪಥದಲ್ಲಿ ಎಂದರೆ ವಿಂಧ್ಯಗಿರಿಯಿಂದ ಕೆಳಕ್ಕೆ ಇದ್ದವರು ಯಾರು ಯಾರು ? ಆರ್ಯರೇನೋ ಮೊದಮೊದಲು ಎಲ್ಲರನ್ನೂ 'ಆಂಧ್ರ' ರೆಂದೇ ಕರೆದರು. ಆದರೆ ಕಾಲ ಕಳೆದಂತೆಲ್ಲ ಬಳಕೆಬೆರಕೆಗಳು ಹೆಚ್ಚಾಗುತ್ತಾ ಬಂದ ಹಾಗೆ ಅದೇ ಆಂಧ್ರದಲ್ಲಿ ಒಳಭೇದಗಳ ಪರಿಚಯ ಅವರಿಗೆ ಉಂಟಾಯಿತು. ಅಂದಿನಿಂದ 'ಆಂಧ್ರ' ಹಿಂದೆ ಬಿದ್ದು 'ಕರ್ಣಾಟ–ದ್ರವಿಡ'ವು ತಲೆಯೆತ್ತಿಕೊಂಡಿತ್ತು. 'ಆಂಧ್ರ'ಕ್ಕೆ 'ತೆಲುಗು' ಎಂಬ ಹೆಸರು ಬರುವುದಕ್ಕೆ ಮುಂಚೆ ಅದು ಬಾಲ್ಯಾವಸ್ಥೆಯಲ್ಲೇ ಇತ್ತು. ತೆಲುಗಿಗೆ ತವರುಮನೆಯಾದ ವೆಂಗಿಮಂಡಲ ೧೨ನೆಯ ಶತಮಾನದವರೆಗೂ ಕನ್ನಡ ಕವಿಗಳ ಜನ್ಮಭೂಮಿ. ನೃಪತುಂಗನ ಕಾಲದಲ್ಲಿ ಈ ವೆಂಗಿ ಕನ್ನಡದಲ್ಲಿಯೇ ಸೇರಿಹೋಗಿತ್ತು. ಅದರ ಸಾಹಿತ್ಯ ೧೧ ನೆಯ ಶತಮಾನದವರೆಗೂ ತಲೆದೋರಲಿಲ್ಲ. ಅನಂತರ ತಲೆದೋರಿದ್ದೂ 'ಕನ್ನಡ' ರ ಕೃಷಿ

ಯಿಂದ. ಒಂಭತ್ತನೆಯ ಶತಮಾನದವರೆಗೂ ತೆಲುಗು ರಾಜರಿಗೂ ಸಾಮಂತ ರಿಗೂ ಕನ್ನಡ ಬಿರುದುಗಳೇ ಇದ್ದುವು. ಈ ಕಾರಣಗಳಿಂದ ಪ್ರಾಚೀನ ಕಾಲ ದಲ್ಲಿ ತೆಲುಗು ವಿಂಧ್ಯದಿಂದ ನೀಲಗಿರಿಯವರೆಗೆ ತಲೆಯೆತ್ತಿ ಮೆರೆಯುತ್ತಿದ್ದಿಲ್ಲ. ತೆಲುಗಿಗೆ ತೆಲುಗು ಧಾತುವಿನಿಂದಲೇ ಸಿದ್ಧವಾದ ದೇಶವಾಚಕ ಶಬ್ದವಿಲ್ಲ. ತೆಲುಗರು ರಾಷ್ಟ್ರ ಕಟ್ಟಿಕೊಂಡು ಬಾಳಿದವರೇ ಅಲ್ಲ. ಮರಾಠಿಯ ಪಾಡು ಹೀಗೆಯೇ. ಏಳು-ಎಂಟನೆಯ ಶತಮಾನಗಳ ಮೊದಲು ತೆಲುಗು,ಮರಾಠಿಗಳ ಇನ್ನೂ ಹಸುಗೂಸುಗಳು. ದ್ರಾವಿಡರು ಎಂದರೆ ತಮಿಳರು ಮಾತ್ರ. ಕಾವೇರಿ ಯಿಂದ ಉತ್ತರಕ್ಕೆ ಬಂದವರೇ ಅಲ್ಲ. ಬಾದಾಮಿಯವರೆಗೂ ಒಂದುಸಲ ದಂಡೆತ್ತಿ ಬಂದಿದ್ದರೂ ಅವರೇನೂ ಇಲ್ಲಿ ನೆಲಸಲಿಲ್ಲ. ಇನ್ನು ಪ್ರಾಕೃತದ ಮಾತು. ಅದರ ಅವತಾರ ೪–೫ ಶತಮಾನಗಳ ಹೊತ್ತಿಗೆ ಮುಗಿದು ಹೋಗಿತ್ತು. ಅಲ್ಲದೆ ಅದು ದಕ್ಷಿಣಾಪಥದ ಜನರ ಮನೆಮಾತು ಕೂಡ ಆಗಿರಲಿಲ್ಲ. ಇನ್ನುಳಿದದ್ದು ಕನ್ನಡವೊಂದೇ. ಈ ಭಾಷೆಯೇ ಈ ಜನಾಂಗವೇ ಪ್ರಾಚೀನ ಕಾಲದಲ್ಲಿ ವಿಂಧ್ಯ, ಕಾವೇರಿಗಳವರೆಗೆ ಹಬ್ಬಿಕೊಂಡಿರಬೇಕು. ಆರ್ಯರ ಹೊಡೆತಕ್ಕೆ ಮೊದಲು ಸಿಕ್ಕವರು ಇವರು. ಅಂದಿನಿಂದ ಕನ್ನಡರಿಗೆ ನರ್ಮದಾ ತಟಾಕದಿಂದ ತೆಂಕಲಿಗೆ ಸ್ಥಾನಚ್ಯುತಿಯಾಗುತ್ತ ಬಂತು. ಗೋದಾವರಿ–ನರ್ಮದೆಗಳ ನಡುವೆ ಆರ್ಯರು ಬೇರೂರಿದರು. ಕನ್ನಡವು ಗೋದಾವರಿಯಿಂದ ಕೆಳಕ್ಕಿಳಿಯಿತು. ಆದ್ದರಿಂದ ಕನ್ನಡದ ಮೂಲಸ್ಥಾನವು ಪ್ರಾಚೀನಕಾಲದಲ್ಲಿ ನರ್ಮದಾನದಿಯ ತೀರಪ್ರಾಂತವಿರಬೇಕು. ಇದನ್ನು ಸ್ಪಷ್ಟಪಡಿಸತಕ್ಕ ಕುರುಹುಗಳು ಗೋದಾವರಿಯ ಉತ್ತರಕ್ಕೆ ಬೇಕಾದಷ್ಟಿವೆ:

(೧) ಕುರುಬರೂ ಮಲೆಯರೂ ಮಧ್ಯಪ್ರಾಂತದಲ್ಲಿ (ಸಿ.ಪಿ) ಇನ್ನೂ ಇದ್ದಾರೆ. ಇವರ ಭಾಷೆಯಲ್ಲಿ ಹಳಗನ್ನಡ ಸರ್ವನಾಮಗಳಿವೆ. ಕರ್ನಾಟಕ ದಿಂದ ಬಂದವರು ಇವರು : ನರ್ಮದಾ ನದಿಯನ್ನು ದಾಟಿ ಬಂದರಂತೆ ಈ ಸ್ಥಳಕ್ಕೆ. ನಡುವೆ ಗೋದಾವರಿ ಸಿಕ್ಕಲಿಲ್ಲ. ಆದ್ದರಿಂದ ಗೋದಾವರಿಯ ಉತ್ತರಕ್ಕೆ ಕರ್ನಾಟ, ನೀಲಗಿರಿಯ ನುಡಿಗೂ ಇವರ ನುಡಿಗೂ ಸಂಬಂಧ ಇದೆ.

(೨) ಗೊಲ್ಲರು, ಹೊಲೆಯರು, ಕುರುಂಬರು–ವರಾಹಡ ನಾಗಪೂರ ಚಾಂಡನಿವಾಸಿಗಳು. ಇವರ ನುಡಿ ಬಿಜಾಪುರದ ಕನ್ನಡವನ್ನು ಹೋಲುತ್ತಿದೆ. ಇವರ ಭಾಷೆಗೂ ನೀಲಗಿರಿಯ ಬಡಗರ ಮಾತಿಗೂ ಸಾಮ್ಯ ಇರುವುದರಿಂದ ಬಡಗರು ಈ ಪ್ರದೇಶಗಳಿಂದ ಒಂದಾನೊಂದು ಕಾಲದಲ್ಲಿ ಬಂದು ನೀಲಗಿರಿಯಲ್ಲಿ ನೆಲಸಿರಬೇಕು.

(೩) ಹಳಬರು ಅಥವಾ ಹಳಿಪೈಕರು – ವರಾಹಡ ಮಧ್ಯಪ್ರಾಂತಗಳಲ್ಲಿ ಸುಮಾರು ಒಂದು ಲಕ್ಷ ಜನರಿದ್ದಾರೆ. ಈಗ ಇವರು ಹಳಬಿ ಭಾಷೆಯೆಂಬೊಂದು ಮಿಶ್ರಭಾಷೆಯನ್ನು ಆಡುತ್ತಿದ್ದಾರೆ. ಬನವಾಸಿ ತುಳುನಾಡುಗಳಲ್ಲಿರುವ ಈ ಪಂಗಡದವರು ಕಲ್ಬುರ್ಗಿಯಿಂದ ಬಂದವರೆಂದು ಹೇಳಿಕೊಳ್ಳುವುದರಿಂದ ಹಿಂದಿನ ಕಾಲಕ್ಕೆ ಇವರ ಮಾತು ಕನ್ನಡವೇ ಆಗಿತ್ತು. ಆದರೆ ವಾಸ್ತವವಾಗಿ ಇವರು ಮಧ್ಯಪ್ರಾಂತಕ್ಕೆ ಸೇರಿದವರು. ಹುಲಿಯಯ್ಯನ ಆರಾಧನೆ ಇವರಲ್ಲಿದೆ. ಪ್ರಾಚೀನ ಕರ್ಣಾಟಕ ಆ ಪ್ರದೇಶ.

(೪) ಕನ್ನಡರು—ಇವರು ಖಾನ್ದೇಶ ನಾಸಿಕಗಳಲ್ಲಿರುವರು. ಅಲ್ಲಿ ಆಳಿದ ರಾಜರು ಗೋವಳರು ಅಥವಾ ಗವಳಿಗರು ಕನ್ನಡದವರೇ. ಗುಜರಾತ ಮಾಳವಗಳಲ್ಲಿಯೂ ಗಂಗಾ-ಯಮುನಾತೀರಗಳಲ್ಲಿಯೂ ಇವರಿದ್ದರು. ಅಲ್ಲದೆ ಈ ಪ್ರಾಂತಗಳಲ್ಲಿ ಅನೇಕ ವೀರಗಲ್ಲುಗಳಿವೆ. ನಾಸಿಕ ಜಿಲ್ಲೆಯ ಶಿವರ ಗ್ರಾಮದಲ್ಲಿಯೂ, ಚೌಸಾಲೆಯಲ್ಲಿಯೂ ಅವು ಹೇರಳವಾಗಿವೆ. ಮರಾಠರಲ್ಲಿ ಇವನ್ನು ನೆಡುವ ಪದ್ಧತಿ ಇಲ್ಲ. ಕನ್ನಡರ ವಿಶಿಷ್ಟಪದ್ಧತಿ ಇದು. ಅಲ್ಲದೆ ಕುಣಬಿ, ಕೋಳಿ, ವಂಜಾರಿಗಳು–ಇವರು ಮರಾಠರಲ್ಲ—ಇವನ್ನು ಈಗಲೂ ಪೂಜೆ ಮಾಡುತ್ತಾರೆ. ಆದ್ದರಿಂದ ಈ ಪ್ರದೇಶಗಳಲ್ಲಿ ಪ್ರಾಚೀನ ಕಾಲದಲ್ಲಿ ಕನ್ನಡರಿರಲೇಬೇಕು.

(೫) ಭಿಲ್ಲವರು–ಕನ್ನಡದ ಬಿಲ್ಲು ಎಂಬ ಶಬ್ದದಿಂದ ಈ ಹೆಸರು ಬಂದಿದೆ. ಖಾನ್ದೇಶದಲ್ಲಿ ಡಾಂಗನಾಡು ಮೇವಾಸಿ ಎಂಬೆರಡು ಭಿಲ್ಲ ಸಂಸ್ಥಾನಗಳಿಗೆ ಕುಣಬಿಗಳು ಕನ್ನಡ ಕುರುಂಬನ ಮರಾಠಿ ಅವತಾರ. ಧನಗರರು,

ತುಂಬುಲಿಗರು, ಗೊರವರು ಮುಂತಾದ ಕನ್ನಡದವರು ಇಲ್ಲಿ ಈಗಲೂ ಇದ್ದಾರೆ.

(೬) ಮರಾಠಿ ನಾಡಿಗೂ ನುಡಿಗೂ ಮೂಲ 'ಮಹಾರಾಷ್ಟ್ರ' ಅಲ್ಲ. ಇದು ಮೊದಲು ಹುಟ್ಟಿದ್ದು ಕರ್ನಾಟದಲ್ಲಿ, ಈ ನುಡಿ 'ಮಹಾರಾಷ್ಟ್ರ ಪ್ರಾಕೃತಕ್ಕಿಂತಲೂ ಹಿಂದಿನ ಭಾಷೆ ಕರ್ನಾಟದಲ್ಲಿ ಇದು ಮೊದಲು ಇದ್ದಿಲ್ಲ. ಇವೆರಡಕ್ಕೂ ಜನ್ಯಜನಕ ಸಂಬಂಧವೇ ಇಲ್ಲ. ಅಲ್ಲದೆ ಮಹಾರಾಷ್ಟ್ರೀ ಪ್ರಾಕೃತವು ಹಲವು ಬೇರೆ ಬೇರೆ ಪ್ರಾಕೃತಗಳ ಸಮ್ಮಿಶ್ರಣ. ಈ ಪ್ರಾಕೃತಕ್ಕೂ ಮರಾಠಿ ಭಾಷೆಗೂ ಕೆಲವು ಶಬ್ದ ಸಾಮ್ಯಗಳಿವೆ ಅಷ್ಟೆ. ತಾಯಿಮಕ್ಕಳ ಸಂಬಂಧವಿಲ್ಲ. ಸ್ಟೆನ್ ಕೋನೋ ಅವರು "ಮರಾಠಿ ಭಾಷೆ ದ್ರವಿಡ ಭಾಷೆಯ ಮೂಲಾಧಾರದಿಂದ ವಿಕಾಸಹೊಂದಿತು" ಎಂದು ಹೇಳುತ್ತಾರೆ. ಇಲ್ಲಿ 'ದ್ರವಿಡ ಭಾಷೆ' ಎಂದರೆ ಕನ್ನಡವಲ್ಲದೆ ಬೇರೆ ಅಲ್ಲ ; ಇದರಿಂದ ಹಿಂದಕ್ಕೆ ಒಂದಾನೊಂದು ಕಾಲದಲ್ಲಿ ಈಗ ಮರಾಠಿ ಪ್ರಚುರವಾಗಿರುವ ನಾಡುಗಳಲ್ಲಿ ಕನ್ನಡವೇ ಇದ್ದಿರಬೇಕು. ಮರಾಠಿ ಪ್ರಬಲವಾಗುತ್ತ ಬಂದಹಾಗೆಲ್ಲ ಕನ್ನಡ ಅತ್ತೆಯನ್ನು ಹೊಡೆದೋಡಿಸಿತು. ನರ್ಮದೆಯಿಂದ ಗೋದಾವರಿಗೆ ಅಲ್ಲಿಂದಿತ್ತ ಕೃಷ್ಣಾನದಿಯವರೆಗೆ ಕನ್ನಡಕ್ಕೆ ನೆಲೆ ತಪ್ಪುತ್ತ ಬಂತು. ಮರಾಹಟ ವರಾಹಟ–ಇವಕ್ಕೆ ಬಹು ಜನ ಸಮ್ಮತವಾದ ವ್ಯುತ್ಪತ್ತಿ ಹೊರಬಿದ್ದಿಲ್ಲ. ಮರ+ಕಲ ಹಟ್ಟಿ ಎಂದರೆ ದೊಡ್ಡ ನಾಡು ಎಂದು. ಅದಕ್ಕೆ ಕನ್ನಡದಿಂದ ವ್ಯುತ್ಪತ್ತಿ ಹೇಳಬಹುದು. ಇದೇ ಕ್ರಮೇಣ ಸಂಸ್ಕೃತದಲ್ಲಿ ಮಹಾರಾಷ್ಟ್ರ ಆಯಿತು. ಆದ್ದರಿಂದ ಈ ದೇಶದ ಹೆಸರು ಕನ್ನಡ. ಅಲ್ಲದೆ ಕನ್ನಡ ಎಂಬ ಒಂದು ತಾಲ್ಲೂಕು ಕೂಡ ಈಗ ಖಾನ್ದೇಶದಲ್ಲಿದೆ. ಕಂಡರ ದೇಶ (ಕನ್ನಡದ ದೇಶ) ಎಂಬುದರ ವಿಕೃತರೂಪವೇ ಖಾನ್ದೇಶ. ಕಂಡರು ವಿಂಧ್ಯಮಲಯಗಳ ಕಾಡುಗಳನ್ನು ಬಿಟ್ಟು ನಾಡಿಗೆ ಬಂದ ಕೂಡಲೆ ಅವರು ಕನ್ನಾಡರಾದರು. ಕನ್ನಾಡು ಕನ್ನಡು ಕನ್ನಡ ಆದ್ದರಿಂದ ಇವರು ಮೊದಲಿದ್ದ ನಾಡು ವಿಂಧ್ಯದ ನೆರೆಹೊರೆಯಲ್ಲಿತ್ತು.

(೭) ಪುಂಡಾರಿ ಕಂಡಾರಿ ಮಲ್ಲಾರಿಗಳೆಂಬ ವರಾಹಟ ಮರಾಠರ

ಕುಲದೇವತೆಗಳು ಕನ್ನಡರಿಗೆ ಸೇರಿದುವು. ಪುಂಡರು, ಕಂಡರು, ಮಲೆಯರು ಎಂಬ ವಿಂಧ್ಯವಾಸಿಗಳ ದೇವತೆಗಳಿವು. ಪುಂಡರನಾಡು ಪುನ್ನಾಡು ಪುನ್ನಾಟ. ಪ್ರಾಚೀನ ಪುನ್ನಾಟದೇಶವು ಈ ಜನಾಂಗದ ಕೊನೆಯ ಅವಶೇಷ. ಕಂಡರಿಗೆ ಹಗೆಯಾದವನು ಕಂಡಾರಿ ಖಂಡೇರಾಯ, ಖಂಡೋಬ. ವಿಂಧ್ಯದ ದಕ್ಷಿಣಕ್ಕೆ ಇವರು ಮೆರೆದ ಕಾಲ ಉಂಟು. ಇವರೇ ಕನ್ನಡರಿಗೆ ಮೂಲ. ಮಲೆಯರಿಗೆ ವೈರಿ ಮಲ್ಲಾರಿ. ಇವನಿಗೆ ಏಳು ಕೋಟಿ ಭಕ್ತಗಣ. ಈ ದೇವತೆಯ ಗುಡಿಗಳಲ್ಲಿ "ಏಳು ಕೋಟಿ" ಎಂಬುದನ್ನು ಈಗಲೂ ಮರಾಠರು ಉದ್ಘೋಷಿಸುತ್ತಾರೆ. ಇವೆಲ್ಲವನ್ನೂ ನೋಡಿದರೆ, ಈ ದೇವತೆಗಳ ಮೂಲ ಆರಾಧಕರು ಕನ್ನಡರು ಎಂದು ಕಾಣುತ್ತದೆ.

(೮) ಆಳಿದ ಅರಸು ಮನೆತನಗಳು – ಕ್ರಿ. ಪೂ. ೪ನೆಯ ಶತಮಾನದಲ್ಲಿ ಕನ್ನಡ ನಾಡು ಚಂದ್ರಗುಪ್ತನ ಅಧೀನದಲ್ಲಿತ್ತು. ಅಶೋಕನ ಕಾಲದಲ್ಲಿಯೂ ಹಾಗೆಯೇ. ಅವನು ಬನವಾಸಿ ಮಹಿಷಮಂಡಲಗಳಿಗೆ ಬೌದ್ಧ ಧರ್ಮೋಪದೇಶಕರನ್ನು ಕಳಿಸಿದನು. ಅವನ ಶಾಸನಗಳಲ್ಲಿ ರಾಷ್ಟ್ರಿಕ, ಪಿಟಣಿಕರ ರಾಜ್ಯಗಳ ಉಲ್ಲೇಖವಿದೆ. ರಾಷ್ಟ್ರಿಕರು(ನಾಡವರು) ಪಿಟಣಿಕರು (ಪೈಠಣಿಕರು) ಕನ್ನಡರೇ ಇದ್ದಿರಬೇಕೆಂಬುದು ನಿಶ್ಚಿತ. ಕ್ರಿ.ಪೂ. ೨೧೦ ರಿಂದ ಕ್ರಿ.ಶ. ೨೨೫ರ ವರೆಗೆ ಸಾತವಾಹನರು ಆಳಿದರು. ಇವರು ದಕ್ಷಿಣಾಪಥಕ್ಕೆ ಅರಸರಾಗಿದ್ದುದರಿಂದ 'ಆಂಧ್ರ' ಎಂಬ ಹೆಸರು ಬಂದಿತೇ ಹೊರತು ಇವರ ನುಡಿ ತೆಲುಗು ಎಂಬುದರಿಂದಲ್ಲ. ಇವರ ಶಾಸನಗಳೆಲ್ಲ ಪ್ರಾಕೃತದಲ್ಲಿದ್ದರೂ ಇವರಾಳಿದ ನಾಡಿನ ಸಾಮಾನ್ಯ ಭಾಷೆ ಕನ್ನಡವೇ. ಸಾತವಾಹನರು ಕನ್ನಡರೆಂದು ಹೇಳಲು ಅಡ್ಡಿ ಇಲ್ಲ. 'ಪುಲಿಮಾಯಿ', 'ಹಾಲ' ಎಂಬ ಕನ್ನಡ ಹೆಸರುಗಳೇ ಸಾಕು. ಇವರಾದ ಮೇಲೆ ಈ ನಾಡಿಗೆ ವಾಕಾಟಕರು ಒಡೆಯರು. ಈ ಮನೆತನದ ರಾಜರ ಹೆಸರುಗಳು ಸೇನ ಎಂದು ಮುಗಿಯುತ್ತವೆ. ಬಂಗಾಳದಲ್ಲಿ ಒಂದು ಸೇನ–ಮನೆತನ ಆಳಿತು. ಇವರು ಕರ್ಣಾಟ ಕ್ಷತ್ರಿಯರು. ಮಿಥಿಲೆಯ ನಾನ್ಯದೇವನೂ ಕರ್ಣಾಟನು. ಇವರೆಲ್ಲ ಕರ್ಣಾಟ ರಾಜರು. ಉತ್ತರ ದೇಶದಲ್ಲಿ ಅಷ್ಟುದೂರ ವ್ಯಾಪಿಸಿದ್ದಿರಬೇಕಾದರೆ 'ಕರ್ಣಾಟ'ದ ಮೂಲ ಸ್ಥಾನ ಅನತಿ ದೂರದಲ್ಲಿಯೇ ಇರಬೇಕು. ಇವರ ಏಳಿಗೆಯ ಮೂಲ ತಿಳಿಯಬೇಕಾದರೆ

ವಿಂಧ್ಯದ ಬುಡಕ್ಕೆ ಹೋಗಬೇಕು. ಇದರಿಂದಲೂ ಕರ್ಣಾಟಕದ ಸ್ಥಾನ ನರ್ಮದಾತೀರ. ದೇವಗಿರಿಯ ಯಾದವರು ಮರಾಠರಲ್ಲ, ಕನ್ನಡರೇ.

ಹೀಗೆ ತರ್ಕ, ಪರಂಪರೆ, ಜಾತಿ, ಜನಾಂಗ ಭಾಷೆಗಳಲ್ಲಿ ಯಾವ ದೃಷ್ಟಿಯಿಂದ ವಿಚಾರಿಸಿ ವಿಮರ್ಶಿಸಿದರೂ ಗೋದಾವರಿಯ ಮೇಗಡೆ ಕನ್ನಡ ಇದ್ದೇ ಇತ್ತು ಎಂಬುದೇ ಧ್ವನಿತವಾಗುತ್ತಿದೆ.

ಈ ತೀರ್ಪಿನಲ್ಲಿಯೂ ಅದಕ್ಕೆ ಲೇಖಕರುವ ಕೊಟ್ಟಿರು ಈ ಆಧಾರಗಳಲ್ಲಿಯೂ ನಮಗೆ ಪ್ರಬಲವಾದ ಸಂಶಯಗಳಿವೆ. ಒಂದು ವೇಳೆ'ಕರ್ಣಾಟ' ಎಂಬ ಪ್ರತ್ಯೇಕ ಪ್ರಾಂತವು ಗೋದಾವರಿಯ ಉತ್ತರಕ್ಕೆ ಇದ್ದಿತಾದರೆ, ಅದು ನೃಪತುಂಗನಿಗಿಂತ "ಐದು–ಆರು ಶತಮಾನಗಳ ಮೊದಲೇ ಹಾಳಾಗಿರಲಿಕ್ಕೆ ಸಾಕು" ಎಂದು ಶ್ರೀಮಾನ್ ಜೋಶಿಯವರು ಹೇಳಿರುವುದರಿಂದ ಆ ಕಾಲದಲ್ಲಿ ಕಾವೇರಿ-ನರ್ಮದೆಗಳ ನಡುವೆ ಇದ್ದ ಭಾಷೆಗಳಾವುವು ಎಂಬುದನ್ನು ತಿಳಿದುಕೊಳ್ಳುವುದು ಅವಶ್ಯವಾಗಿದೆ. ನಮ್ಮ ಕಾಲದಲ್ಲಿ ಇಲ್ಲಿ ಪ್ರಚಲಿತವಾಗಿರುವ ಮುಖ್ಯ ಭಾಷೆಗಳು–ಕನ್ನಡ-ತೆಲುಗು-ಮರಾಠಿಗಳು. ಹಿಂದೆ ಇವುಗಳ ಪರಿಸ್ಥಿತಿ ಏನಿದ್ದಿತೆಂಬುದನ್ನು ವಿಚಾರ ಮಾಡೋಣ.

ಶ್ರೀಮಾನ್ ಜೋಶಿಯವರು ಹೊರಟಿರುವ ಕ್ರಮವನ್ನು ನೋಡಿದರೆ ಹೇಗಾದರೂ ಮಾಡಿ ತೆಲುಗು ಮರಾಠಿಗಳನ್ನು ಈ ಪ್ರದೇಶದಿಂದ ಪರಿಹರಿಸಿ ಅನಂತರ ಅಲ್ಲಿ ಕನ್ನಡವೇ ರಾಜ್ಯವಾಳುತ್ತಿತ್ತೆಂದು ತೋರಿಸುವುದೇ ಅವರ ಉದ್ದೇಶವೆಂದು ಕಾಣುತ್ತದೆ. ಇವುಗಳನ್ನು ಹಸುಗೂಸುಗಳೆಂದು ಮೂಲೆಗೊತ್ತಿ, ಕನ್ನಡದ ಅಗ್ಗಳಿಕೆಯನ್ನು ತೋರಿಸಲು ಅವರು ಪ್ರಯತ್ನಪಟ್ಟಿದ್ದಾರೆ.

ತೆಲುಗು ಸಾಹಿತ್ಯ ೧೧ನೆಯ ಶತಮಾನದಲ್ಲಿ ಕಂಡುಬಂದ ಮಾತ್ರಕ್ಕೆ ಅದುವರೆಗೂ ಅದರಲ್ಲಿ ಸಾಹಿತ್ಯವೇ ಇರಲಿಲ್ಲವೆಂದು ಹೇಳಿರುವುದು ಹೇಗೆ ? ನನ್ನಯ್ಯಭಟ್ಟನು ಸುಡಿಸಿ ಹಾಕಿದನೆಂದು ಪ್ರತೀತಿ ಇರುವ ಅಥರ್ವಣಾ

ಚಾರ್ಯನ ಜೈನ ಭಾರತವೊಂದಿತ್ತೆಂದು ತಿಳಿದುಬರುತ್ತದೆ.[1] ಅವನಿಗಿಂತಲೂ ಹಿಂದೆಯೇ ದೇಶೀಯ ವೃತ್ತಗಳಲ್ಲಿ ರಚಿತವಾದ ಜನಪದ ಸಾಹಿತ್ಯಕ್ಕೆ ಸೇರಿದ ದೇಶೀಮಾರ್ಗದ ಹಾಡುಗಳೂ ಇದ್ದುವು.[2] ನೃಪತುಂಗನ ಸಮಕಾಲೀನನೇ ಆದ ಮೂಡಣ ಚಾಲುಕ್ಯರಾಜ ೧೧೧ ಗುಣಗ ವಿಜಯಾದಿತ್ಯನ (ಕ್ರಿ.ಶ. ೮೪೪–೮೮) ಅದ್ದಂಕಿಯ ಶಿಲಾಶಾಸನ ಒಂದಿದೆ. ಇದರ ಕಾಲ ಕ್ರಿ.ಶ. ೮೪೪_೪೫. ಇದರಲ್ಲಿ ವಿಜಯಾದಿತ್ಯನ ಮಂತ್ರಿಯಾದ ಪಾಂಡುರಂಗನೆಂಬುವನು ಆದಿತ್ಯ ಭಟಾರನಿಗೆ ಒಂದು ಭೂದಾನವನ್ನು ಮಾಡಿದಂತೆ ಹೇಳಿದೆ. 'ತರುವೋಜ' ಎಂಬ ತೆಲುಗು ವೃತ್ತದಲ್ಲಿ ರಚಿತವಾದ ಪದ್ಯ ಶಾಸನವಿದು. ತೆಲುಗು ಕವಿತೆ ೯ನೆಯ ಶತಮಾನದಲ್ಲಿ ನನ್ನಯ್ಯನಿಗಿಂತ ಹಿಂದೆಯೇ ಇದ್ದಿತೆಂಬುದಕ್ಕೆ ಬೇರೆ ನಿದರ್ಶನ ಬೇಕಾಗಿಲ್ಲ. ಬೇಕಾಗಿದ್ದರೆ ೧೦ನೆಯ ಶತಮಾನದಲ್ಲಿ ಹುಟ್ಟಿದ ಯುದ್ಧಮಲ್ಲನ ಎರಡು ಶಿಲಾಲಿಪಿಗಳನ್ನು ಸೇರಿಸಬಹುದು[3] ಈ ಶಾಸನಗಳು ಇನ್ನೂ ಒಂದು ದೃಷ್ಟಿಯಿಂದ ಮುಖ್ಯವಾದುವು. ನನ್ನಯ್ಯನ ಕಾಲದಿಂದಲೂ ತೆಲುಗು ವರ್ಣಮಾಲೆಯಿಂದ ಅಳಿಸಿಹೋಗಿರುವ ಬಿಕಾರವು ಅದ್ದಂಕಿಯ ಶಾಸನದ ೬ನೆಯ ಪಂಕ್ತಿಯಲ್ಲಿದೆ. ಯುದ್ಧಮಲ್ಲನ ಶಾಸನಗಳಲ್ಲಿಯೂ ಇದು ಕಂಡುಬರುತ್ತದೆ. ಆದ್ದರಿಂದ ಬಿಕಾರ ವಿಶಿಷ್ಟವಾದ ಒಂದು ಅವಸಾನವು ತೆಲುಗು ಭಾಷೆಗೆ ೧೦ನೆಯ ಶತಮಾನದಲ್ಲಿಯೂ ಅದಕ್ಕಿಂತ ಹಿಂದೆಯೂ ಇದ್ದಿತೆಂದು ಹೇಳಬಹುದು ಇದನ್ನು ಹಳೆಯ ತೆಲುಗೆಂದು ಕರೆಯುಬಹುದು. ವೈದಿಕ ಮತ ಸಾಹಿತ್ಯಗಳ ಪ್ರಾಬಲ್ಯದಿಂದ ನಷ್ಟವಾಗಿ ಹೋಗಿರುವ ಬೌದ್ಧ ಜೈನ ಗ್ರಂಥಗಳು ಬಹುಶಃ ಈ ಹಳೆಯ ತೆಲುಗು ಭಾಷೆಯಲ್ಲಿಯೇ ಇದ್ದಿರಬೇಕೆಂದು ಊಹಿಸಬಹುದು. ಕನ್ನಡದ ಅದೃಷ್ಟದಿಂದ ಜೈನ ಸಾಹಿತ್ಯ ಉಳಿದುಕೊಂಡು ಬಂತು. ಆದರೆ ತೆಲುಗಿನ ದುರದೃಷ್ಟದಿಂದ ರೇಚಣ್ಣನ "ಕವಿಜನಾಶ್ರಯ" ಒಂದು ಹೊರತಾಗಿ ಆ ಸಾಹಿತ್ಯ ತೆಲುಗರಿಗೆ ಇಲ್ಲವಾಯಿತು. ಹೀಗೆಯೇ ಬೌದ್ಧ ಸಾಹಿತ್ಯವೂ ಕನ್ನಡದಲ್ಲಿ ಹಾಳಾಗಿರು

---

1 ಹೆಚ್. ಟಿ. ಎಲ್. ೨೧

2 ಅದೇ, ೪೦

3 ಎಂ. ಇ. ಆರ್. (೧೯೧೦), ೮೩

ವಂತೆಯೇ ತೆಲುಗಿನಲ್ಲಿಯೂ ಮಾಯವಾಗಿರಬೇಕು. ಕನ್ನಡ ನಾಡಿನಲ್ಲಿರುವುದ ಕ್ಕಿಂತಲೂ ತೆಲುಗು ದೇಶದಲ್ಲಿ ಬೌದ್ಧ ಧರ್ಮದ ಸ್ಮಾರಕಗಳು ಹೆಚ್ಚಾಗಿವೆ.[4] ನಾಗಾರ್ಜುನಕೊಂಡ, ಅಮರಾವತಿ ಮುಂತಾದ ಸುಮಾರು ಇಪ್ಪತ್ತು ಎಡೆಗಳಲ್ಲಿ ಸಿಕ್ಕಿರುವ ಬೌದ್ಧರ ಸ್ತೂಪವಿಹಾರಗಳೇ ಇದಕ್ಕೆ ನಿದರ್ಶನ.[5] ಇವನ್ನೆಲ್ಲ ನೋಡಿದರೆ ತೆಲುಗು ನಾಡೂ ನುಡಿಯೂ ಹೆಚ್ಚು ಕಡಮೆ ಕನಿಷ್ಠ ಪಕ್ಷ ಕನ್ನಡದಷ್ಟೇ ಪ್ರಾಚೀನವಾಗಿರಬೇಕೆಂದು ಕಂಡುಬರದಿರಲಾರದು.

"ತೆಲುಗಿಗೆ ತೆಲುಗು ಧಾತುವಿನಿಂದಲೇ ಸಿದ್ಧವಾದ ಸ್ವದೇಶದರ್ಶಕ ಶಬ್ದವೇ ಇಲ್ಲ" ಎಂದು ಹೇಳುವುದು ಸ್ವಲ್ಪ ಕಷ್ಟ. ತೆಲುಗು ಬಲ್ಲವರು ತೇನೆ+ಆಗು=ತೆನುಗು, ತೆಲುಗು ಎಂದರೆ ಜೇನುತುಪ್ಪದಂತೆ ಮಧುರ ವಾದದ್ದು ಎಂದು ವ್ಯುತ್ಪತ್ತಿಯನ್ನು ಹೇಳುತ್ತಾರೆ. ಇನ್ನು ಕೆಲವರು "ತೆಲಿ" ಎಂದರೆ ತಿಳಿಯಾಗು ಎಂಬ ಧಾತುವಿನಿಂದ ಸ್ಫುಟವಾದ ಭಾಷೆ ಎಂಬರ್ಥದಲ್ಲಿ ಈ ಶಬ್ದ ಬಂದಿದೆ ಎಂದು ಹೇಳುತ್ತಾರೆ. ಆದರೆ ಕಾಲ್ಡ್‌ವೆಲ್ ಅವರು

---

4 ಕನ್ನಡ ದೇಶದಲ್ಲಿ ಅಶೋಕನ ಶಾಸನಗಳಿರುವುದೂ ಇಲ್ಲಿಗೆ ಅವನು ಧರ್ಮೋಪ ದೇಶಕರನ್ನು ಕಳುಹಿಸಿದ್ದೂ ತಿಳಿದವಿಷಯಗಳೇ ಆಗಿವೆ. ಹೈದರಾಬಾದಿನಲ್ಲಿರುವ ನಾಲ್ದುರ್ಗದ ಬಳಿ ತಗರ ನಗರವೊಂದಿತ್ತೆಂದೂ ಅಲ್ಲಿ ಒಂದು ಬೌದ್ಧರ ಜೈತ್ಯಾಲಯವಿತ್ತೆಂದೂ ಅದು ಈಗ ವೈಷ್ಣವ ದೇವಸ್ಥಾನವಾಗಿ ಪರಿಣಮಿಸಿದೆ ಯೆಂದೂ ತಿಳಿದುಬಂದಿದೆ.

- ಈ ನಗರದ ಹೆಸರನ್ನು ಟಾಲಮಿಯೇ ಹೇಳಿದ್ದಾನೆ. ಈಗ ಅದು ತೇರ್ ಆಗಿದೆ ಕ್ರಿ.ಶ. 1095ರಲ್ಲಿ ಚಾಲುಕ್ಯರ ಆರನೆಯ ವಿಕ್ರಮಾದಿತ್ಯನು ಬೌದ್ಧರ ವಿಹಾರ ಗಳಿಗೂ ಆರ್ಯ ತಾರಾದೇವಿಗೂ ದಾನವನ್ನು ಕೊಟ್ಟಂತೆ ಡಂಬಳದ ಒಂದು ಶಾಸನದಿಂದ ತಿಳಿದುಬರುತ್ತದೆ. ತುರುವೇಕೆರೆಯ ಹತ್ತಿರ ಸಿಕ್ಕ ತಾಮ್ರಪಟ ದಿಂದ ಕ್ರಿ.ಶ. 1533ರಲ್ಲಿ 'ಬೌದ್ಧವಾಸ ಮಹಾಪುರಿ' ಎಂದು ಹೆಸರುಗೊಂಡ ಕಲವತೀ ಎಂಬ ನಗರ ಇದ್ದಂತೆ ತಿಳಿದು ಬರುತ್ತದೆ. ಇನ್ನೂ ಪರಿಶೋಧನೆ ಮಾಡಿದರೆ ಬೌದ್ಧಧರ್ಮದ ಕುರುಹುಗಳು ಹೆಚ್ಚಾಗಿ ಸಿಕ್ಕಬಹುದು. ಈ ಕೆಲಸ ಕನ್ನಡ ದೇಶದಲ್ಲಿ ಇನ್ನೂ ನಡೆದಿಲ್ಲವೆಂದು ತಿಳಿಸಲು ವಿಷಾದವಾಗುತ್ತದೆ.

5 ಬಿ. ಎ. ಆರ್. ೧೧

ಇವೆಲ್ಲ ಈಚೆಗೆ ಕಲ್ಪಿತವಾದುವೆಂದು ಒಪ್ಪದೆ 'ತ್ರಿಲಿಂಗ' ಎಂಬ ಶಬ್ದ ದಿಂದಲೇ 'ತೆಲುಗು' ಬಂದಿರಬೇಕೆಂಬುದನ್ನು ಒತ್ತಿ ಹೇಳಿದ್ದಾರೆ.[6] ಈಚೆಗೆ ಈ ವಿಷಯವನ್ನೆಲ್ಲ ವಿಮರ್ಶೆ ಮಾಡಿರುವ ಸಿಲ್ವೈ ಲೇವಿ ಅವರು "ತ್ರಿಲಿಂಗ, ತ್ರೈಲಿಂಗ, ಮಾರ್ಕಾಂಡೇಯ (ವಾಯುಪುರಾಣಗಳಲ್ಲಿ) ತಿಲಿಂಗ, (ಶಾಸನಗಳಲ್ಲಿ) ತಿಲಿಂಗ, ತೆಲುಂಗ, ತಿರಿಲಿಂಗ, ತ್ರಿಕಲಿಂಗ ಎಂಬ ರೂಪಭೇದಗಳು ಈ ಪದಕ್ಕಿವೆ. ತಾರಾನಾಥನು ತ್ರಿಲಿಂಗವು ತ್ರಿಕಲಿಂಗದ ಒಂದು ಭಾಗ ಎಂದು ಹೇಳುತ್ತಾನೆ. 'ತೆಲುಗು' ಕ್ರಿ.ಶ. ೧೦೦೦ ಕ್ಕಿಂತ ಹಿಂದೆ ದೊರೆಯುವುದಿಲ್ಲ. ಟಾಲೆಮಿಗೆ (ಕಾಲ. ಕ್ರಿ.ಶ. ೨ನೆಯ ಶತಮಾನ) ಮಾತ್ರ ತ್ರಿಲಿಂಗೊನೆ ಎಂಬ ನಗರವಿತ್ತೆಂದು ಹೇಗೋ ಗೊತ್ತಾಯಿತು. ಬರ್ಮೀಯರಲ್ಲಿ ಈಗಲೂ ಮಾನ್-ಕುಲಕ್ಕೆ ಸೇರಿದವರನ್ನು ತಲೈಂಗ್ ಎಂದು ಕರೆಯುತ್ತಾರೆ. ಇವರು ತೆಲುಗರೇ ಆಗಿರಬೇಕು. ಅಂತು ಈ ಶಬ್ದ ಬಹಳ ಪ್ರಾಚೀನವಾದದ್ದು. ಬಹುಕಾಲದವರೆಗೆ ಸಾಹಿತ್ಯದಲ್ಲಿ ಇದಕ್ಕೆ ಪುರಸ್ಕಾರ ಸಿಕ್ಕಲಿಲ್ಲ. ಐತರೇಯ ಬ್ರಾಹ್ಮಣದ ಕಾಲದಿಂದ ಉಂಟಾದ 'ಆಂಧ್ರ'ಕ್ಕೆ ಸಾಹಿತ್ಯದಲ್ಲಿ ಮನ್ನಣೆ ದೊರೆತು ಅನಿರ್ದಿಷ್ಟವಾದ ರೂಪವುಳ್ಳ ಈ ಶಬ್ದ ಹಿಂದೆ ಬಿದ್ದು ಹೋಯಿತು" ಎಂದು ಅಭಿಪ್ರಾಯ ಬರುವಂತೆ ಬರೆದಿದ್ದಾರೆ.[7] ಒಟ್ಟಿನಲ್ಲಿ 'ತ್ರಿಕಲಿಂಗ' ಎಂಬುದರಿಂದ 'ತೆಲುಗು' ಬಂದಿದೆಯೆಂದು ಎಲ್ಲರೂ ಸಾಧಾರಣವಾಗಿ ಒಪ್ಪಿರುತ್ತಾರೆ.[8] ಕಾಲ್ಡ್‌ವೆಲ್ ಅವರು ತ್ರಿಕಲಿಂಗ ಎಂಬಲ್ಲಿಯ 'ಲಿಂಗ' ಎಂಬ ಭಾಗಕ್ಕೆ ಅರ್ಥವೇನೆಂಬುದನ್ನು ಸದ್ಯಕ್ಕೆ ಗಮನಿಸಬೇಕಾಗಿಲ್ಲ ಎಂದು

---

6 ಸಿ. ಜಿ. ಡಿ. ಎಲ್. ೨೭

7 P. D. I 78

8 "The generally accepted derivation of Telugu or Telinga is from Trillinga, but this remains doubtful as the termsis a Trillinga is a corruption of Trikalinga to which the Modog alingam of Pliny corresponds"–O.I.I, 191

ಹೇಳಿದ್ದಾರೆ.[9] ಆದ್ದರಿಂದ ಅದನ್ನು ತ್ರಿಕಲಿಂಗ ಎಂದು ವಿಭಜನೆಮಾಡ ಬಹುದು. ಇದಕ್ಕೆಆಧಾರವಿಲ್ಲದಿಲ್ಲ. ಪ್ಲಿನಿ 'ಮೊಡೊಗಲಿಂಗಂ' ಎನ್ನುತ್ತಾರೆ. ಕಾಲ್ಡ್‌ವೆಲ್ ಅವರು ಮೂರುಕಲಿಂಗ ಎಂಬರ್ಥವಿರಬೇಕೆಂದು ಹೇಳಿದ್ದಾರೆ. ಟಿಬೆಟ್ಟಿನ ತಾರಾನಾಥನು ಬಹಳ ಈಚಿನವನು;ಇಬ್ಬರೂ ದೂರ ದೇಶದವರು; ಇವರಿಗೆ ಈ ಪ್ರಾಂತದ ಪರಿಚಯ ಇತ್ತೋ ಇಲ್ಲವೋ ಎಂದು ಸಂಶಯ ಪಡುವುದಾದರೆ ನೆರೆನಾಡಿನವನೇ ಆದ ಆದಿಪಂಪನೂ 'ತ್ರಿಕಲಿಂಗ'ವನ್ನು ಹೆಸರಿಸಿರುವುದನ್ನು ಇಲ್ಲಿ ಹೇಳಬಹುದು.[10] ಈ ಕಾರಣಗಳಿಂದ ಮೂರು

---

9 C. G. D. L. 27.

10 ಒಂದನೆಯ ಯುದ್ಧಮಲ್ಲನ ಮಗನಾದ ಒಂದನೆಯ ಅರಿಕೇಸರಿಯ ಪರಾಕ್ರಮ ವನ್ನು ವರ್ಣಿಸುವಾಗ ಪಂಪನು

ನಿರುಪಮದೇವನ ರಾಜ್ಯದೊ
ಳರಿಕೇಸರಿ ವೆಂಗಿ ವಿಷಯ ಮಂ ಮಂತ್ರಿಗಳಿಂ
ಬೆರಸೊತ್ತಿಕೊಂಡು ಗರ್ವದೆ
ಒರೆಯಿಸಿದಂ ಪೆಸರನಖಿಲ ದಿಗ್ಭಿತ್ತಿಗಳೊಳ್ (1-20)

ಎಂದು ಪಂಪ ಭಾರತದಲ್ಲಿ ಹೇಳಿದ್ದಾನೆ. ಈ ಪದ್ಯದಲ್ಲಿ ಎರಡನೆಯ ಪಾದ ತಪ್ಪಾಗಿದೆ. "ವೆಂಗಿ ವಿಷಯುಮಂ ತ್ರಿಕಲಿಂಗಂ ಬೆರಸು" ಎಂದಿರಬೇಕೆಂದು ತೋರುತ್ತದೆ. (ಘ) ಪ್ರತಿಯ 'ವಿಷಯ ಮಂತ್ರಿಗಳಿಂದಂ' ಎಂಬ ಪಾಠದ ಕೊನೆಯ ಅಕ್ಷರ 'ಗ' ಎಂದಿರಬೇಕೆಂದು ಬೇರೆ ಹೇಳಬೇಕಾಗಿಲ್ಲ. ತಿದ್ದದಿದ್ದರೆ ಪದ್ಯಕ್ಕೆ ಅರ್ಥ ಸರಿಯಾಗುವುದಿಲ್ಲ. 'ಮಂತ್ರಿಗಳಿಂಬೆರಸ' ವ್ಯಾಕರಣ ಶುದ್ಧ ವಲ್ಲ.

ಈ ನಿರುಪಮ ದೇವನು ರಾಷ್ಟ್ರಕೂಟ ರಾಜರಲ್ಲಿ ಅತಿ ಕೀರ್ತಿಶಾಲಿಯಾದ ಧ್ರುವಧಾರಾವರ್ಷನು. 'ನಿರುಪಮ' ಎಂದು ಕರೆದುಕೊಂಡವರಲ್ಲಿ ಇವನೇ ಮೊದಲು. ಆಳಿಕೆಯ ಕಾಲ ಸುಮಾರು ೭೭೫–೭೯೪. ಇವನ ಅಣ್ಣನಾದ ಎರಡನೆಯ ಗೋವಿಂದನು ರಾಜ್ಯಾಡಳಿತವನ್ನು ಇವನಿಗೆ ಒಪ್ಪಿಸಿದನು. ನಿರುಪಮನು ರಾಜ್ಯಾಪಹರಣ ಮಾಡಿದನು. ಗೋವಿಂದನು ಕಾಂಚಿ ಮಾಲವ

ಲಿಂಗಗಳಿರಬೇಕೆಂಬುದು ಸ್ಪಷ್ಟ. ಈಗ ಇವು ಯಾವುವು ಎಂಬುದನ್ನು ವಿಚಾರಿಸೋಣ. ಕಳಿಂಗ ದೇಶವು ಭರತಖಂಡದ ಮೂಡಣ ಕರಾವಳಿಯ ಮಹಾನದಿಯ ದಕ್ಷಿಣ ಪ್ರಾಂತ. ಕೆಳಗಡೆಗೆ ಗೋದಾವರಿಯವರೆಗೂ ಇದು ಹಬ್ಬಿತ್ತು.[11] ಟಾಲಮಿಯು ಕೃಷ್ಣ ಗೋದಾವರಿಗಳ ನಡುವೆ ಕಲ್ಲಿಗ ನಗರ ವಿತ್ತೆಂದು ಹೇಳಿದ್ದಾನೆ. ಇದು ಕಲಿಂಗ ನಗರವೇ ಎಂಬುದರಲ್ಲಿ ಸಂಶಯವಿಲ್ಲ. ಆದ್ದರಿಂದ ಕೃಷ್ಣಾನದಿಯಿಂದ ಮಹಾನದಿಯವರೆಗೂ ಪ್ರಾಚೀನ ಕಲಿಂಗ ದೇಶದ ವಿಸ್ತಾರ. ಇಷ್ಟು ದೊಡ್ಡದಾದ ದೇಶ ಮೂರು ತುಂಡುಗಳಾಗಿ ವಿಭಾಗವಾಗಿತ್ತೆಂದು ತೋರುತ್ತದೆ. ಟಾಲಮಿ ವಿಂಧ್ಯಪರ್ವತಕ್ಕೆ ಪೂರ್ವದಲ್ಲಿ ಬೊಲಿಂಗೇ ಎಂಬ ಜನಾಂಗವಿತ್ತೆಂದು ಹೇಳಿದ್ದಾನೆ. ಇದೇ ವಡಂಗಲಿಂಗ ವಡಗು ಕಲಿಂಗ ಎಂದರೆ ಉತ್ತರ ಕಲಿಂಗ. ಈಗಲೂ ತಮಿಳರು ತೆಲುಗರನ್ನು 'ವಡಗ' ಎಂದೇ ಕರೆಯುತ್ತಾರೆ. ಹೀಗೆ ಕಲಿಂಗದ ಉತ್ತರ ಭಾಗವಿದ್ದ ಮೇಲೆ ದಕ್ಷಿಣ ಭಾಗವೂ ಒಂದಿದ್ದಿರಬೇಕಲ್ಲವೆ ? ಎರಡನೆಯ ರಾಜೇಂದ್ರಚೋಳನು ಕ್ರಿ.ಶ. ೧೧೯೫—೬ಕ್ಕಿಂತ ಹಿಂದೆ ದಕ್ಷಿಣ ಕಲಿಂಗದ ಮೇಲೆ ದಾಳಿಯಿಟ್ಟಿದ್ದ ನಂತೆ. [12]ತೆಲುಗು ಶಬ್ದಕ್ಕೆ ಮೂಲವೇನೆಂಬುದನ್ನು ಹೇಳುತ್ತ ಡಾ॥ಬಾರ್ನೆಟ್ ಅವರು ತೆನ್ (ತೆಂಕ ಎಂಬುದರ ಮೂಲರೂಪ) ಎಂಬುದರಿಂದ ಅದು

———

ವೆಂಗಿ ಗಂಗವಾಡಿಗಳ ದೊರೆಗಳನ್ನು ಕೂಡಿಸಿಕೊಂಡು ಇವನ ಮೇಲೆ ಯುದ್ಧಕ್ಕೆ ಬಂದನು. ಆದರೆ ಗೆದ್ದವನು ನಿರುಪಮನೇ. ಆಮೇಲೆ ಸೇಡು ತೀರಿಸಿಕೊಳ್ಳುವುದಕ್ಕಾಗಿ ಧ್ರುವನು ಕಾಂಚಿ ವೆಂಗಿ ಗಂಗವಾಡಿಗಳ ರಾಜರನ್ನು ಜಯಿಸಿದನು (51-54). ಒಂದನೆಯ ಅರಿಕೇಸರಿ ಇವನಿಗೆ ಸಹಾಯಕ. ಆದ್ದರಿಂದ ನಿರುಪಮನು ವೆಂಗಿಯನ್ನು ಗೆದ್ದನೆಂದು ಚರಿತ್ರೆ ಹೇಳುತ್ತಿದೆ ಎಂಬುದು ಸ್ಪಷ್ಟ. ವೆಂಗಿಯ ಜೊತೆಗೆ 'ತ್ರಿಕಲಿಂಗ'ವೂ ಸೇರಿದೆ.

11 ಸಿ. ಹೆಚ್. ಐ. ೬೧೧

12 ಎಂ. ಇ. ಆರ್. (೧೯೦೮), ೯೪. ಇಷ್ಟೇ ಅಲ್ಲ, ಉತ್ತರ ಕಲಿಂಗದಲ್ಲಿಯೂ 'ಸಪ್ತ ಕಲಿಂಗ'ಗಳಿದ್ದುವು.

ಬಂದಿರುವ ಸಂಭವ ಹೆಚ್ಚು ಎಂದು ಅಭಿಪ್ರಾಯಕೊಟ್ಟಿದ್ದಾರೆ.[13] ಆ ದಕ್ಷಿಣ ಕಲಿಂಗವೇ 'ತೆನ್‌ಕಲಿಂಗ'. ಇದು ಕೃಷ್ಣಾನದಿಯ ತೀರವೆಂದು ಹೇಳುವುದು ಪುನರುಕ್ತಿ. ಹೀಗೆ ತಾರಾನಾಥನೂ ಪ್ಲಿನಿಯೂ ಪಂಪನೂ ಹೇಳಿರುವ "ತ್ರಿ ಕಲಿಂಗ"ದಲ್ಲಿ ಸ್ವಾರಸ್ಯವಿದೆ. ಈ "ತೆನ್‌ಕಲಿಂಗ" ವೇ ತೆಲುಗು ಶಬ್ದಕ್ಕೆ ಮೂಲವಾಗಿರಬೇಕು.

ಇನ್ನು 'ಕಲಿಂಗ' ಶಬ್ದಕ್ಕೆ ಅರ್ಥವೇನು ? ಅದು ಏನನ್ನೋ ತನ್ನ ಬಸಿರಿನಲ್ಲಿ ಬಚ್ಚಿಟ್ಟುಕೊಂಡಿರುವಂತಿದೆ. ಐವತ್ತು ವರ್ಷಗಳ ಹಿಂದೆಯೇ ಕಾಲ್ಡ್‌ವೆಲ್ ಅವರು ಕಲಿಂಗಕ್ಕೂ ಲಿಂಗಕ್ಕೂ ಏನೊ ಸಂಬಂಧವಿರಬೇಕು. ಆದರೆ ಅದೇನೆಂಬುದು ಇದುವರೆಗೂ ಗೊತ್ತಾಗಿಲ್ಲ ಎಂಬ ಮಿಂಚಿನ ಶಂಕೆಯನ್ನು ಸೂಚಿಸಿದ್ದರು.[14] ಈಗ ಭಾಷಾಶಾಸ್ತ್ರಜ್ಞರ ಪರಿಶ್ರಮದಿಂದ ಈ ರಹಸ್ಯ ಹೊರಬಿದ್ದಿದೆ. ಪ್ರಾಚೀನ ಭರತ ವರ್ಷದಲ್ಲಿ ಆರ್ಯರೂ ದ್ರಾವಿಡರೂ ಇಲ್ಲಿಗೆ ಒಕ್ಕಲಾಗಿ ಬರುವುದಕ್ಕೆ ಮುಂಚೆಯೇ ಮುಂಡ ಎಂಬ ಒಂದು ಜನಾಂಗವಿತ್ತು. ಕೋಲ್, ಸಂತಾಲಿ ಮುಂತಾದ ಭಾಷೆಗಳು ಇವರಿಗೆ ಸೇರಿದುವು. ಇವರು ಗೋದಾವರಿಯ ಉತ್ತರದವರೆಗೂ ಹರಡಿಕೊಂಡಿದ್ದರು. ಈಗಲೂ ಅಲ್ಲಿ ಶಬರರ ನಾಡಿದೆ. ಮುಂಡಭಾಷೆಗೂ ನಿಕೋಬಾರಿ ಮುಂತಾದ ಭಾಷೆಗಳಿಗೂ ಹತ್ತಿರ ಸಂಬಂಧವಿದೆ. ಇವೆಲ್ಲಕ್ಕೂ "ಆಸ್ಟ್ರೋ"–ಏಷ್ಯಾಟಿಕ್ ಎಂದು ಹೆಸರು. ಕಳಿಂಗ ಶಬ್ದವು ಆರ್ಯ ಭಾಷೆಗಳಿಗೆ ಸೇರಿದ ಶಬ್ದದಂತಿಲ್ಲ. ಸಂಸ್ಕೃತ ಭಾಷೆಯಲ್ಲಿರುವ ಲಾಂಗಲ, ಲಾಂಗುಲ, ಲಿಂಗ ಎಂಬ ಶಬ್ದ ಸಮುದಾಯಕ್ಕೆ ಸರಿಯಾದ ವ್ಯುತ್ಪತ್ತಿ

---

13 "It seems more likey to be from ten, 'South' and to mean Southern (probably from the standpoint of Kalinga)" C.H. I. 598

14 "Kalinga and linga may probably in some way be connected but the nature and history of that connection have not as yet been made out"–C,G.D.L. 29

ಇಂಡೋ–ಆರ್ಯನ್ ಭಾಷೆಗಳಲ್ಲಿಲ್ಲ.[15] ಇಂಡೋ–ಯೂರೋಪಿಯನ್ನಿನಲ್ಲಿಯೂ ಇಲ್ಲ. ಇವೆಲ್ಲಕ್ಕೂ ಮೂಲ ಒಂದೇ. ಅದು ಆರ್ಯೇತರ ಜನಾಂಗಕ್ಕೆ ಸೇರಿದ್ದು. ಆಸ್ಟ್ರೋ–ಏಷ್ಯಾಟಿಕ್ ಭಾಷೆಗಳಲ್ಲಿ ಇದು ಸಾಮಾನ್ಯವಾಗಿದೆ. ಇದರ ಮೂಲ ರೂಪ ಲಕೆ (ಅರ್ಥ ; ನೇಗಿಲು) ಆಗಿದೆ. ಇದಕ್ಕೆ 'ಕ' ಎಂಬ ಉಪಸರ್ಗ ಆ ಪಂಗಡಕ್ಕೆ ಸೇರಿದ ಕೆಲವು ಭಾಷೆಗಳಲ್ಲಿವೆ. ಖಾಸಿ ಭಾಷೆಯಲ್ಲಿ ಕಲಿಂಕೊರ್ ಎಂಬುದು ನೇಗಿಲು ಎಂಬ ಅರ್ಥದಲ್ಲಿದೆ. ಕಲಿಂಗ ಎಂಬ ಶಬ್ದದಲ್ಲಿ ಈ ಉಪಸರ್ಗ ಇನ್ನೂ ಉಳಿದುಕೊಂಡಿದೆ. ಆದ್ದರಿಂದ ಈ ಶಬ್ದಕ್ಕೆ ನೇಗಿಲು, ನೇಗಿಲಿನಿಂದ ಜೀವಿಸುವವನು, ಕೃಷೀವಲ ಎಂದು ಅರ್ಥವಿಕಾಸ ಆಗುವುದು ಸಹಜ. ಆರ್ಯರ ದೃಷ್ಟಿಗೆ ಮೊದಲು ಕಲಿಂಗರು ಬಿದ್ದಾಗ ಮಹಾನದಿ ಗೋದಾವರಿ ಕೃಷ್ಣೆಗಳ ತೀರ ಪ್ರಾಂತಗಳಲ್ಲಿ ಬೇಸಾಯದಿಂದ ಅವರು ಜೀವಿಸುತ್ತಿದ್ದವರಾಗಿರಬೇಕು. ಇವರ ಹೆಸರನ್ನೇ ದೇಶಕ್ಕೂ ಆರ್ಯರು ಅನ್ವಯಿಸಿದರು. ಕ–ಲಿಂ (ಲಂ)ಗ ಎಂಬಲ್ಲಿಯ ಉಪಸರ್ಗವು ಮೂಲಧಾತುವಿಗೆ ಸೇರಿದ್ದಲ್ಲ. ಆದ್ದರಿಂದ ಲಂಗ, ಲಿಂಗ ಎಂಬ ಮಾರ್ಪಾಟುಗಳಾಗಿ ಅದಕ್ಕೆ ತೆನ್ ಸೇರಿಕೊಂಡು ತೆನ್‌ಲಂಗ ತೆಲ್ಲಂಗ ತೆಲಗ ತೆಲುಗು ಎಂದಾಗಿದೆ.[16] ಇದೇ ಕ್ರಮೇಣ 'ತೆಲಿಕೆ' ಆಗಿ ಒಂದು ಜಾತಿಗೂ ಹೆಸರಾಯಿತು.[17] ಈಗಲೂ ಮರಾಠರಲ್ಲಿ 'ತೆಲಂಗೆ' ಎಂದು ಕರೆದುಕೊಳ್ಳುವವರು ಇದ್ದಾರೆ. ಆದ್ದರಿಂದ 'ತೆನ್‌ಕಲಿಂಗ'ವೇ ತೆಲುಗಿಗೆ ಮೂಲ. ಮುಂಡ–ದ್ರಾವಿಡ ಭಾಷೆಗಳಿಂದ ಬಂದ ಹೆಸರು. ಬಹು ಹಳೆಯವೆಂದು ಕಂಡು ಬರುತ್ತದೆ.

ಆರ್ಯರಿಗೆ ದಕ್ಷಿಣಾಪಥದ ಪರಿಚಯ ಉಂಟಾಗಲು ಮೊದಲಾದಾಗ ಕಪ್ಪುಬಣ್ಣದ ಮುಂಡ ದ್ರಾವಿಡರನ್ನೆಲ್ಲ 'ಅಂಧರ್' ಎಂದು ಕರೆದಿರ

---

15 ಈ ವಿಷಯವಾಗಿ ಪ್ರಿಸುಲುಸ್ಕಿ ಅವರ ಲೇಖನವನ್ನೋದಬೇಕು.
ಪಿ.ಡಿ.ಐ. ೮–೧೫

16 ತ್ರಿ-ಕಲಿಂಗ ಎಂಬುದೇ ಪ್ರಾಕೃತದಲ್ಲಿ ತಿಅಲಿಂಗ ತಿಯಲಿಂಗ ತೆಲಂಗ ತೆಲುಗು ಆಗಿದ್ದರೂ ಆಗಿರಬಹುದು.

17 ಇ. ಐ.

ಬಹುದು. ಕಲಿಂಗ ದೇಶದವರಿಗೂ ಅದು ಅನ್ವಯಿಸಿತ್ತು. ಕಲಿಂಗಕ್ಕೆ ಹೋದರೆ ವೈಶ್ವಾನರ ಹವಿಸ್ಸನ್ನು ಕೊಡಬೇಕೆಂದು ಮೊದಮೊದಲು ಹೇಳುತ್ತಿದ್ದ ಆರ್ಯರೇ ಆ ಜನಗಳಲ್ಲಿ ಬೆರಕೆ ಹೆಚ್ಚಾದಂತೆಲ್ಲ ಕಲಿಂಗರೂ ನಮ್ಮವರೇ, ಧರ್ಮವನ್ನು ತಿಳಿದವರು ಎಂದು ಹೇಳಲಾರಂಭಿಸಿದರು. ಆ ಬಳಿಕ ಅವರಿಗೆ ಅಂಧರ್ ಆಂಧ್ರ ಶಬ್ದವು ತಪ್ಪಿಹೋಯಿತು. ಉಳಿದ ಕಳಿಂಗ–ತೆಲುಂಗರಿಗೆ ಅದು ಇನ್ನೂ ಅಂಟಿಕೊಂಡು ಬಂದಿದೆ. ಆರ್ಯ ಸಂಸ್ಕೃತಿ ದಕ್ಷಿಣಾಪಥದಲ್ಲಿ ಹರಡುವುದಕ್ಕೆ ಉತ್ತರ ಕಲಿಂಗವು ಹೆದ್ದಾರಿಯಾಯಿತು. ಆರ್ಯಧರ್ಮವು ಅದನ್ನು ಬಲು ಬೇಗನೆ ಆಕ್ರಮಿಸಿಕೊಂಡಿತು. ಸುಮಾರು ಬೌದ್ಧಮತವು ಹುಟ್ಟುವ ಕಾಲಕ್ಕಾಗಲೇ ಉತ್ತರ ಕಲಿಂಗವು ಆರ್ಯರಿಗೆ ದಕ್ಕಿಹೋಗಿತ್ತು. ಅಶೋಕನ ಕಾಲದಲ್ಲಿ ಬೌದ್ಧಧರ್ಮವು ದಕ್ಷಿಣಾಪಥಕ್ಕೆ ಹಬ್ಬುವಾಗ ಮೂಡಣ ಕರಾವಳಿಯ ಕಲಿಂಗವನ್ನೇ ಅನುಸರಿಸಿಕೊಂಡು ಬಂದು ವೆಂಗಿಯಲ್ಲಿ ಗುಡಿ ಕಟ್ಟಿಕೊಂಡು ನಿಂತಿತು. ಇಷ್ಟೇ ಅಲ್ಲ, ಆರ್ಯ ಸಂಸ್ಕೃತಿಯನ್ನು ವಿಶಾಲ ಭಾರತದಲ್ಲೂ ಹರಿಯಿಸಲು ಕಲಿಂಗರೇ ಮುಖ್ಯಪಾತ್ರ ವಹಿಸಿದರು.[18] ಈಗಲೂ ಇಂಡಿಯಾ ದೇಶದಿಂದ ಹೋದವರನ್ನೆಲ್ಲ ಮಲಯ ಭೂಲಂತ ದವರು ಕ್ಲಿಂಗ್—ಕಲಿಂಗ ಎಂದು ಕರೆಯುತ್ತಾರಂತೆ. ಬರ್ಮಾದಲ್ಲಿ ಈಗಲೂ ತಲೈಂಗೆ=ತೆಲಗು ಎಂಬ ಶಬ್ದ ಇದೆ. ಗನ್‌ಲನ್‌ಕ್ರೊಂ ಎಂಬ ರಾಜನು ತಲೈಂಗೆ ಎಂದು ಹೇಳಿಕೊಳ್ಳುತ್ತಾನೆ. ಇಷ್ಟು ಪ್ರಾಚೀನವಾದ ತೆಲುಗನ್ನೂ[19] ತೆಲುಗು ಜನಾಂಗವನ್ನೂ ಶ್ರೀಮಾನ್ ಜೋಶಿಯವರು ಹೇಳುವಂತೆ ನೃಪ ತುಂಗನ ಕಾಲಕ್ಕೆ ಹಿಂದೆ 'ತಲೆಯೆತ್ತಿ ಮೆರೆಯುತ್ತಿದ್ದಿಲ್ಲ', 'ಮನೆಮುರುಕ ಕನ್ನಡಿಗರೇ ತೆಲುಗರಾದರು', 'ಹಸುಗೂಸುಗಳು' ಎಂದು ಕರೆಯುವುದು ಯಾವ ನ್ಯಾಯ ?

ಇಷ್ಟೇ ಸಾಲದೆ ತೆಲುಗರಿಗೆ ರಾಜ್ಯವೂ ಇರಲಿಲ್ಲವೆಂದು ತೋರಿಸಲು ಅವರು ಪ್ರಯತ್ನಪಟ್ಟಿದ್ದಾರೆ. 'ಕಾವೇರಿಯಿಂದಮಾ ಗೋದಾವರಿವರ

---

18 ಬಿ. ಆರ್. ಎ.

19 ಅದೇ. ೧೩೭

ಮೀರ್ವ ನಾಡದಾ ಕನ್ನಡದೊಳ್ ಭಾವಿಸಿದ ಜನಪದಂ' ಎಂಬ ನೃಪತುಂಗನ ಮಾತುಗಳನ್ನು ಅಕ್ಷರಶಃ ನಂಬಿಕೊಂಡದ್ದೇ ಇದಕ್ಕೆ ಕಾರಣ. ಯಾವ ದೊರೆಯೇ ಆಗಲಿ, ಯಾವ ಕಾಲದಲ್ಲೇ ಆಗಲಿ ತನ್ನ ರಾಜ್ಯದ ಎಲ್ಲೆಯನ್ನು ಖಡಾಖಂಡಿತವಾಗಿ ಕತ್ತರಿಸಿದಂತೆ ಹೇಳಲಾಗುವುದಿಲ್ಲ. ಸ್ವಲ್ಪ ಹೆಚ್ಚು ಕಡಮೆ ಅದನ್ನು ಹೇಳಿಕೊಳ್ಳಬೇಕಾಗಿದೆ. ನೃಪತುಂಗನು ಹಾಗೆ ಹೇಳಿಕೊಂಡಿರುವನು; ತೆಲುಗರಿಗೆ ಅನೂಚಾನವಾಗಿ ನಡೆದುಕೊಂಡು ಬಂದಿದ್ದ ವೆಂಗಿ ಕಳಿಂಗ ಮಂಡಲಗಳು ರಾಜಕೀಯ ದೃಷ್ಟಿಯಿಂದ ಕನ್ನಡ ರಾಜ್ಯಕ್ಕೆ ಎಂದರೆ ರಾಷ್ಟ್ರ ಕೂಟ ರಾಜ್ಯಕ್ಕೆ ಸೇರಿರಬಹುದು. ಚರಿತ್ರೆ ನೃಪತುಂಗನು ಕ್ರಿ.ಶ. 866 ರಲ್ಲಿ ವೆಂಗಿಮಂಡಲವನ್ನು ಜಯಿಸಿದನು ಎಂದು ಹೇಳುತ್ತಿದೆ[20]. ಆದರೆ ಭಾಷಾ ದೃಷ್ಟಿಯಿಂದ ಮಾತ್ರ ತೆಲುಗು ಪ್ರಾಂತವು ಬೇರೆಯೇ ಆಗಿತ್ತು. ಈಗ ತೆಲುಗು ಪ್ರಚಾರವಾಗಿರುವ ಬಹುಭಾಗದಲ್ಲಿ ಹಿಂದೆಯೂ ತೆಲುಗಿತ್ತು[21], ಇದಕ್ಕೆ ನಿದರ್ಶನ ಬೂಚನಪಲ್ಲಿ, ಗೋಲ್ಕೊಂಡ, ಹನುಮಕೊಂಡ, ಆದವಾನಿ ಮುಂತಾದ ತೆಲುಗಿನ ಹಳೆಯ ಹೆಸರುಗಳೇ ಸಾಕು. ಎಂದರೆ ಈಗಿನ ನಿಜಾಂ ರಾಜ್ಯದ ಪೂರ್ವಭಾಗವು ಈಗಿರುವಂತೆಯೇ ಹಿಂದೆಯೂ ತೆಲುಗಾ ಗಿತ್ತು. ಹೀಗೆಯೇ ಕಾವೇರಿ ಕೃಷ್ಣೆಗಳ ನಡುವಿರುವ ದಕ್ಷಿಣ ಭಾಗವೆಲ್ಲಾ ಎಂದೂ ಕನ್ನಡವಾಗಿರಲಿಲ್ಲ ; ಉತ್ತರ ಭಾಗವಂತೂ ಬಹುಕಾಲದಿಂದ ತೆಲುಗೇ. ಹಿಂದೆ ಹೇಳಿದ ಊರುಗಳನ್ನು ಸೇರಿಸಿ ಒಂದು ಗೆರೆ ಎಳೆದರೆ, ಅದರ ಪೂರ್ವಕ್ಕೆ ಬರುವ ಭಾಗ ಹಿಂದಿನ ತೆಲುಗು ನಾಡೆಂದು ಸ್ಥೂಲವಾಗಿ ಹೇಳಬಹುದು. ಈ ಗೆರೆಯ ಪಶ್ಚಿಮಕ್ಕೆ ಕನ್ನಡ ಗಡಿನಾಡುಗಳು ಒಂದೊಂದು ಸಲ ಕನ್ನಡ. ಇಲ್ಲಿದ್ದವರೂ ಸಾಧಾರಣವಾಗಿ ದ್ವಿಭಾಷಿಗಳು. ವೆಂಗಿಮಂಡಲಕ್ಕೆ ಸೇರಿದವರೆಂದು ಹೇಳಿಕೊಳ್ಳುವ ಉದ್ದಾಮ ಕನ್ನಡ ಕವಿಗಳು ಬಹುಶಃ ಈ ಗಡಿನಾಡಿನವರೇ. ರಾಷ್ಟ್ರಕೂಟ ರಾಜ್ಯದ ಮೆಯ್ಸಿರಿಗೆ ಮನಸೋತು ಇವರಿಗೆ ಕನ್ನಡದಲ್ಲಿ ಒಲವರವು ಹಿರಿದಾಗಿ, ಪ್ರೋತ್ಸಾಹ ದೊರೆಯಬಹುದೆಂದು ಅಚ್ಚ ಕನ್ನಡನಾಡಿಗೆ ಏಕೆ ಬಂದಿರಬಾರದು ? ಪಂಪನ ಪೋಷಕನಾದ ಅರಿ

20 R. T. 75.

21 B. R. A., 8 ff

ಕೇಸರಿ ಈ ಗಡಿನಾಡಿನವನು ; ಲೇಂಬುಲ ಪಾಟಕದವನು (ಈಗಿನ ವೇಮುಲು ವಾಡ). ಮೊದಲನೆಯ ಅರಿಕೇಸರಿಯ ಕೊಲ್ಲಿಪಾರಾ ದಾನಪಟ್ಟದಲ್ಲಿ ಬರುವ ರಾಮುಡು ವಿಷಯ ಪುಲ್ಚೇಱು ಎಂಬಿವು ತೆಲುಗಿನ ಹೆಸರುಗಳು. ಈ ಶಾಸನದ 46ನೆಯ ಪಂಕ್ತಿಯಲ್ಲಿ 'ಉಳ್' ಎಂಬ ಕನ್ನಡ ಸಪ್ತಮಿೂ ವಿಭಕ್ತಿ ಪ್ರತ್ಯಯವಿದೆ. ಇದು ಗಡಿನಾಡಿನ ಪ್ರಭಾವವಲ್ಲದೆ ಬೇರೇನು ? ಇಂಥ ಪ್ರದೇಶದಲ್ಲಿ ತೆಲುಗಿನಲ್ಲಿಯೂ ಕನ್ನಡದಲ್ಲಿಯೂ ಶಾಸನಗಳು ಸಿಕ್ಕುತ್ತವೆ.

ತೆಲುಗಿನ ವಿಚಾರವನ್ನು ಮುಗಿಸುವ ಮೊದಲು ಒಂದು ವಿಷಯವನ್ನು ಹೇಳಬೇಕಾಗಿದೆ. ಒಂಬತ್ತನೆಯ ಶತಮಾನದಲ್ಲಿ ಕೆಲವು ತೆಲುಗು ರಾಜರಿಗೆ ಕನ್ನಡ ಬಿರುದುಗಳಿದ್ದುವೆಂಬುದನ್ನು ಶ್ರೀಮಾನ್ ಜೋಶಿಯವರು ಮುಂದೂ ಡಿದ್ದಾರೆ. ರಾಜಕೀಯ ಕಾರಣಗಳಿಂದ ಆ ಕಾಲದಲ್ಲಿ ಆ ಬಿರುದುಗಳು ಅವರಿಗೆ ಬಂದಿರಬಹುದು. ಅಲ್ಲದೆ ಆಗ ಈಗಿರುವಷ್ಟು ಪ್ರಾಂತಿಕಾಭಿಮಾನವು ಉಲ್ಬಣವಾಗಿರಲಿಲ್ಲ. ನೃಪತುಂಗನಿಗಿಂತ ಹಿಂದೆ ತೆಲುಗು ರಾಜರಿಗೆ ತೆಲುಗು ಬಿರುದುಗಳೇ ಇರಲಿಲ್ಲವೆ ? ಕ್ರಿ.ಶ. ಸುಮಾರು ೬೦೦ ರಲ್ಲಿದ್ದ ಒಂದನೆಯ ಮಹೇಂದ್ರವರ್ಮನೆಂಬ ಪಲ್ಲವರಾಜನಿಗೆ–ತೆಲುಗುನಾಡಿನ ಕೆಲಭಾಗ ಇವನಿಗೆ ಸೇರಿತ್ತು—ಚಿ (ವಿ) ಭುನ್ನುಣ್ದು, ನಿವಿಲೋನಯ್ಯಂಬು. ವೆಂತಲವಿತ್ತು, ಪಸರಂಬು ಎಂಬ ತೆಲುಗು ಬಿರುದುಗಳಿದ್ದುವು.[22] ಕಡಪ ನೆಲ್ಲೂರು ಜಿಲ್ಲೆಗಳಲ್ಲಿ 9ನೆಯ ಶತಮಾನಕ್ಕೆ ಸೇರಿದ ಹಳೆಯ ತೆಲುಗಿನ ಶಾಸನಗಳಿವೆ.[23] ಹುರ್ಯ ತ್ಸಾಂಗನು ತೆಲುಗು ನುಡಿಯಲ್ಲಿ ಪ್ರಾಂತ ಭೇದಗಳನ್ನು ಸೂಚಿಸುತ್ತಾನೆ.[24] ಪ್ಲಿನಿಯ Modogalingam ಎಂಬಲ್ಲಿಯ 'ಮೂಡು' ತೆಲುಗಿನ ಸಂಖ್ಯಾವಾಚಕ. ಇವುಗಳಿಂದ ತೆಲುಗು ಭಾಷೆ ಎಷ್ಟು ಹಿಂದಿನದೆಂಬುದು ಗೊತ್ತಾಗುತ್ತದೆ. ಆದ್ದರಿಂದ ನೃಪತುಂಗನ ಕಾಲಕ್ಕೆ ಕೃಷ್ಣೆ ಗೋದಾವರಿಗಳ ಪೂರ್ವಾರ್ಧಗಳ ನಡುವಣ ನಾಡು ತೆಲುಗೆಂಬದರಲ್ಲಿ ಸಂಶಯಪಡಬೇಕಾಗಿಲ್ಲ.

---

22 M. E. R. (1909), 75.

23 B. R. A. 8

24 ಅದೇ

'ಕನ್ನಡದೊಳ್ ಭಾವಿಸಿದ ಜನಪದಂ "ಎಂಬುದನ್ನು ಮಿತಿಮೀರಿ ಹಿಗ್ಗಲಿಸ ಲಾಗುವುದಿಲ್ಲ. ಗೋದಾವರಿಯ ಉತ್ತರಕ್ಕೆ "ಕನ್ನಡ" ವಿದ್ದಿದ್ದರೆ ಅದನ್ನು ಗೋದಾವರಿಯ ಪೂರ್ವಾರ್ಧವ ಉತ್ತರ ಪ್ರದೇಶದಲ್ಲಿ ಹುಡುಕ ಹೋಗುವುದು ವ್ಯರ್ಥಶ್ರಮ. ಶ್ರೀಮಾನ್ ಜೋಶಿಯವರ ಮಾತುಗಳಲ್ಲೇ ಹೇಳಬಹುದಾದರೆ, ಅಲ್ಲಿ 'ಕನ್ನಡವಿತ್ತೆಂದು ಸಹ ಇಣಿಕಿ ನೋಡುವಂತಿಲ್ಲ'.

ಇನ್ನು ಈ ತೆಲುಗನ್ನು ಬಿಟ್ಟು ನಾವು ಹಿಂದೆ ಎಳೆದಿರುವ ಗೆರೆಯ ಪಶ್ಚಿಮೋತ್ತರ ಪ್ರದೇಶಗಳಿಗೆ ಹೋಗೋಣ. ಇಲ್ಲಿನ ಸಮಸ್ಯೆ ಮರಾಠಿ–ಕನ್ನಡ. ಈಗ ಮರಾಠಿ ಭಾಷೆ ಇರುವ ಪ್ರದೇಶದಲ್ಲಿ ಹಿಂದೆಯೂ ಆದಿತ್ತೆ ಎಂಬುದನ್ನು ನೋಡೋಣ. ಮರಾಠಿ ಸಾಹಿತ್ಯವು ತಲೆದೋರಿದ್ದು ಸುಮಾರು ೧೩ನೆಯ ಶತಮಾನದಲ್ಲಿ. ಜ್ಞಾನೇಶ್ವರ, ನಾಮದೇವ ಮುಂತಾದವರು ಆ ಕಾಲದವರು. ಈ ಕಾಲಕ್ಕಿಂತ ಹಿಂದೆ ಮರಾಠಿ ಭಾಷೆ ಇದ್ದಿತೆಂಬುದಕ್ಕೆ ಕ್ರಿ.ಶ. ೧೧೧೫–೮ ರಲ್ಲಿ ಹುಟ್ಟಿದ ಒಂದು ಶಾಸನವೂ ೧೨೦೭ರಲ್ಲಿ ಹುಟ್ಟಿದ ಮತ್ತೊಂದು ಶಾಸನವೂ ಇವೆ.[25] ನೃಪತುಂಗನ ಕಾಲದಲ್ಲಿಯೂ ಅದಕ್ಕೆ ಮೊದಲೂ ಈ ಭಾಷೆಯ ಪರಿಸ್ಥಿತಿ ಏನೆಂಬುದನ್ನು ವಿಚಾರಿಸಿ ತಿಳಿಯೋಣ. ಉತ್ತರ ಹಿಂದೂಸ್ಥಾನದ ಆರ್ಯಭಾಷೆಗಳೆಲ್ಲ ಪ್ರಾಕೃತಗಳಿಂದ ವಿಕಾಸ ಗೊಂಡು ಕ್ರಿ.ಶ. ೧೦ನೆಯ ಶತಮಾನದ ಹೊತ್ತಿಗೆ ಈಗಿನ ರೂಪಗಳನ್ನು ತಳೆಯಲು ಮೊದಲು ಮಾಡಿದುವು. ಅಲ್ಲಿಂದಿತ್ತ ಆ ಭಾಷೆಗಳಲ್ಲಿ ಸಾಹಿತ್ಯ ರಚನೆಗೆ ಆರಂಭವಾಯಿತು. ಹೀಗೆಯೇ ಮರಾಠಿ, ಗುಜರಾತಿ ಭಾಷೆಗಳಿಗೂ ಪ್ರಾಕೃತದ ತಳಹದಿ ಇದೆ. ಗುಜರಾತಿ ಭಾಷೆಯಲ್ಲಿ ಶೌರಸೇನೀ ಪ್ರಾಕೃತದ ಪ್ರಭಾವ ಹೆಚ್ಚು. ಮರಾಠಿ ಭಾಷೆಗೆ ಮಹಾರಾಷ್ಟ್ರೀ ಪ್ರಾಕೃತವು ಮೂಲ. 'ಮರಾಠಿ ಮಹಾರಾಷ್ಟ್ರೀ ಪ್ರಾಕೃತದ ಸ್ವಂತ ಮಗಳು' ಎಂದು ಭಂಡಾರ್‌ಕರ್ ಅವರ ಅಭಿಪ್ರಾಯ.[26] ಇದನ್ನೇ ಗಾರೆಜ್, ಕೂನ್, ಯಾಕೊಬಿ, ಪಿಶ್ಚೆಲ್

---

25 L. S. I. VII, 15.

26 C.W.B. IV 469.

ಮುಂತಾದವರು ಅನುಮೋದಿಸಿದ್ದಾರೆ.[27] ಇದಕ್ಕೆ ಸರಿಯಾಗಿ ಪ್ರಾಕೃತ ವ್ಯಾಕರಣಕಾರರ ಸಂಪ್ರದಾಯವೂ ಮಹಾರಾಷ್ಟ್ರ ದೇಶದಿಂದ ಮಹಾರಾಷ್ಟ್ರೀ ಎಂಬ ಹೆಸರು ಎಂದೇ ಹೇಳುತ್ತದೆ. ಮಹಾರಾಷ್ಟ್ರಾಶ್ರಯವಾದ ಭಾಷೆ ಪ್ರಕೃಷ್ಟಪ್ರಾಕೃತ ಎಂದು ದಂಡಿ ಹೇಳುತ್ತಾನೆ. ಆದ್ದರಿಂದ ಈಗಿನ ಮರಾಠಿಗೂ ಅದರ ತಾಯಾದ ಮಹಾರಾಷ್ಟ್ರೀ ಪ್ರಾಕೃತಕ್ಕೂ ಒಂದೇ ಮೂಲ ಎಂದು ಹೇಳಬಹುದು. ಈ ಅಭಿಪ್ರಾಯವನ್ನು ಹೊಯರ್ನೆಲ್, ಗ್ರಿಯರ್‌ಸರ್ನ ಇವರಿಬ್ಬರೂ ಒಪ್ಪರು. ಇವರಿಬ್ಬರ ಆಕ್ಷೇಪಣೆಗಳನ್ನೆಲ್ಲ ವಿಮರ್ಶೆಮಾಡಿ ಅವು ನಿರಾಧಾರವಾದುವೆಂದೂ, ಮಹಾರಾಷ್ಟ್ರೀ ಪ್ರಾಕೃತಕ್ಕೂ ಅದರಿಂದ ಹುಟ್ಟಿದ ಮರಾಠಿಗೂ ಒಂದೇ ಮೂಲ ಎಂದೂ ಸ್ಟೆನ್‌ಕೋನೋ ಅವರು ತೀರ್ಮಾನಿಸಿದ್ದಾರೆ.[28] ಅಲ್ಲದೆ ಮರಾಠಿಯೂ ಮಹಾರಾಷ್ಟ್ರಿಯೂ ಒಂದೇ ಪ್ರದೇಶದವೆಂಬುದನ್ನು ಸಮರ್ಥನೆ ಮಾಡಿದ್ದಾರೆ.[29] ಆದ್ದರಿಂದ ಮರಾಠಿ ಭಾಷೆ ಹಿಂದಿನ ಮಹಾರಾಷ್ಟ್ರೀ ಪ್ರಾಕೃತದೀಪ ಬೆಳೆದು ಬಂದದ್ದು ; ದೇಶವಾಚಕ ಶಬ್ದದಿಂದ ಭಾಷೆಗೂ ಹೆಸರು ಬಂದಿದೆ. ಈ ಸಂದರ್ಭದಲ್ಲಿ ಶ್ರೀಮಾನ್ ಜೋಶಿಯವರು ಇವೆರಡಕ್ಕೂ 'ಜನ್ಯಜನಕ ಸಂಬಂಧವಿಲ್ಲ' ಎಂದು ನಿಶ್ಚಯಿಸಿರುವುದು ತೀರ ಅಸಂಗತ. ಕೆಲವು ಕನ್ನಡ ಶಬ್ದಗಳು ಮರಾಠಿಯಲ್ಲಿ ಕಂಡುಬಂದ ಮಾತ್ರಕ್ಕೇ ಮರಾಠಿ ಕನ್ನಡ ತಾಯ ತೋಳತೊಟ್ಟಿಲಿನಲ್ಲಿಯೇ ಬೆಳೆದುಕೊಂಡು ಬಂತು ಎಂದು ಹೇಳಲಾದೀತೆ ? ಭಿನ್ನ ಸಂಸ್ಕೃತಿಗಳು, ಭಿನ್ನಭಾಷೆಗಳು ಒಂದರ ಮಗ್ಗುಲಲ್ಲೊಂದು ಬಹುಕಾಲ ಬದುಕಿಕೊಂಡು ಬಂದರೆ, ಸಮಾನವಾದ ಶಕ್ತಿಯುಳ್ಳವುಗಳಾಗಿದ್ದರೆ, ಒಂದರಿಂದೊಂದಕ್ಕೆ ಶಬ್ದಗಳು ಎರವಲಾಗಿ ಬರುವುದು ಕಂಡ ವಿಷಯ. ಇಂಥ ಪದಗಳನ್ನೇ ನೆಚ್ಚಿಕೊಂಡು ಅವೆರಡಕ್ಕೆ ಸಂಬಂಧವನ್ನು ಕಲ್ಪಿಸುವುದು ಭಾಷಾ

---

27. I. A. (1903), 180.
28 ಅದೇ, 189
29 ಅದೇ, 192 "The Indian tradition is right in referring Marathi and Maharastri to same locality".

ಶಾಸ್ತ್ರಕ್ಕೆ ವಿರುದ್ಧ. ಅವರೆಡರ ಜೀವವಾದ ವ್ಯಾಕರಣ ಪ್ರಕ್ರಿಯೆಗಳಲ್ಲಿ ನಿಕಟ ಸಂಬಂಧ ಕಂಡು ಬಂದ ಹೊರತು ಇಂಥ ನಂಟುಂತನವನ್ನು ಹೂಡುವುದು ಬರಿ ಮಾತು. ಇನ್ನು ಮಹಾರಾಷ್ಟ್ರೀ ಪ್ರಾಕೃತವು ಹಲವು ಭಾಷೆಗಳ ಬೆರಕೆ, ಕೃತಕ, ಅದಕ್ಕೆ ವ್ಯಕ್ತಿತ್ವವೇನೂ ಇಲ್ಲ ಎಂಬುದು ಹೊರಮಿಂಚಿನ ಮಾತು. "ಕವಿಗಳು ಮಾಡಿದ ಭಾಷೆಯಲ್ಲ ಇದು. ಗೋದಾವರಿಯ ಪ್ರದೇಶದ ಭಾಷೆಯ ಆಧಾರದಿಂದ ಮಹಾರಾಷ್ಟ್ರಿ ಬಂದಿದೆ. ಈಗಿನ ಮರಾಠಿಯಲ್ಲಿರುವ ವೈಶಿಷ್ಟ್ಯಗಳು ಮಹಾರಾಷ್ಟ್ರೀ ಪ್ರಾಕೃತಕ್ಕೆ ಸೇರಿದುವು" ಎಂದು ವುಲ್ನರ್, ಕೋನೊ ಇವರ ಅಭಿಪ್ರಾಯ[30]. ಈ ಕಾರಣಗಳಿಂದ ಈಗಿನ ಮರಾಠಿ ಭಾಷೆ ಸ್ವತಂತ್ರವಾಗುವುದಕ್ಕಿಂತ ಮುಂಚೆ ಎಂದರೆ ಸು. ೧೧೦೦ಕ್ಕಿಂತ ಹಿಂದೆ ಗೋದಾವರಿಯ ಉತ್ತರ ತೀರದಲ್ಲಿ ಮಹಾರಾಷ್ಟ್ರೀ ಪ್ರಾಕೃತವು ಬಳಕೆಯಲ್ಲಿದ್ದಿರಬೇಕೆಂಬುದರಲ್ಲಿ ಸಂದೇಹ ಬರಲಾರದು. ಮಹಾರಾಷ್ಟ್ರೀ ಪ್ರಾಕೃತಕ್ಕೂ ಜೈನ ಮಹಾರಾಷ್ಟ್ರಿಗೂ ವ್ಯತ್ಯಾಸ ಬಹಳ ಇಲ್ಲ; ಎರಡೂ ಒಂದೇ ಎಂದು ಹೇಳಬಹುದು[31] ನೃಪತುಂಗನ ಕಾಲಕ್ಕೆ, ಅದಕ್ಕಿಂತಲೂ ಹಿಂದೆ ಈ ಪ್ರಾಕೃತದ ಸಾಹಿತ್ಯ ಬಹು ಪ್ರಚುರವಾಗಿತ್ತು.

ಹೀಗೆ ಹೇಳುವುದಕ್ಕೆ ಆಧಾರ ಬಹಳ ಇದೆ. ಮಹಾರಾಷ್ಟ್ರೀ ಪ್ರಾಕೃತದಲ್ಲಿ ಹಳೆಯ ಗ್ರಂಥ ಹಾಲರಾಜನ (ಶಾಲಿವಾಹನ, ಸಾತವಾಹನ, ಸಾಲಾಹಣ) 'ಗಾಥಾ ಸತ್ತಸಈ' (ಸಪ್ತಶತಿ). ಇದರ ಕಾಲ ನಿಷ್ಕೃಷ್ಟವಾಗಿ ತಿಳಿದುಬಂದಿಲ್ಲವಾದರೂ ಕ್ರಿ. ಶ. ಒಂದನೆಯ ಶತಮಾನಕ್ಕಿಂತ ಈಚಿನ

---

30 "It is not to be supposed that Maharastri is a mere invention of the poets. It is based on the old spoken language of the country of the Godavari and contains many features that survive as peculiarities of modern Marathi"-I.P., 51.A. (1903), 181

31 L.S. I. VII, 7.

ದೆಂಬುವದರಲ್ಲಿ ಭಿನ್ನಾಭಿಪ್ರಾಯಗಳಿಲ್ಲ. ಇದೊಂದು ಸಂಕಲನಗ್ರಂಥ. ಇದಕ್ಕಿಂತ ಹಿಂದೆ ಅನೇಕ ಪ್ರಾಕೃತ ಕವಿಗಳಿದ್ದರೆಂಬುದು ನಿರ್ವಿವಾದವಾದ ಮಾತು. ಕ್ರಿ. ಶ. ೩–೪ ನೆಯ ವರ್ಷದಲ್ಲಿಯೇ (ಪಂಚೇವ ವಾಸಸಯಾ ದುಸಮಾವಿ ತೀಸ ವರಿಸ ಸಂಜುತ್ತೇ[1] ವೀರೇ ಸಿದ್ಧಿಮುವಗವಿ ಕಾಲೇ) ಜೈನ ಮಹಾರಾಷ್ಟ್ರಿಯಲ್ಲಿ ವಿಮಲಸೂರಿಯ 'ಪಉಮಚರಿಯ' ಎಂಬ ದೊಡ್ಡ ಜೈನ ರಾಮಾಯಣ ಹುಟ್ಟಿತು. ಸಪ್ತಶತಿ ಸಂಕಲಿತವಾದದ್ದು ಗೋದಾವರಿಯ ಉತ್ತರ ತೀರದ ಪ್ರತಿಷ್ಠಾನ (ಪೈಠಣ) ನಗರದಲ್ಲಿ. ಈ ಪ್ರದೇಶವೇ ಜೈನ ಮಹಾರಾಷ್ಟ್ರೀ ಸಾಹಿತ್ಯಕ್ಕೆ ಕೇಂದ್ರಸ್ಥಾನ. ರಾಷ್ಟ್ರಕೂಟರ ಮೂರನೆಯ ಕನ್ನರನ ಕಾಲದಲ್ಲಿದ್ದ ಪುಷ್ಪದಂತನೆಂಬ ಪ್ರಾಕೃತ ಕವಿ ತನಗಿಂತಲೂ ಹಿಂದೆ ಇದ್ದ ಉದ್ಧಾಚಾರ್ಯ, ಚೌಮುಹ, ಸ್ವಯಂಭು, ಕವಿ ಈಸಾಣ, ಜಸ ಇಂದು – ಎಂಬ ಪ್ರಾಕೃತ ಕವಿಗಳನ್ನು ಸ್ಮರಿಸಿದ್ದಾನೆ. ಈಗ ಸಿಕ್ಕಿರುವ ಸುಮಾರು ೫೭ ಜೈನ ಮಹಾರಾಷ್ಟ್ರೀ ಕಾವ್ಯಗಳಲ್ಲಿ 32 ಕೆಲವು ರಾಷ್ಟ್ರಕೂಟರ ಆಶ್ರಯದಲ್ಲಿ ರಚಿತವಾದುವು. ಸಾತವಾಹನರ ಕಾಲವಾದ ಮೇಲೆ ಪ್ರಾಕೃತ ಕವಿಗಳಿಗೆ ಪ್ರತಿಷ್ಠಾನದ ಆಶ್ರಯ ತಪ್ಪಿ ರಾಷ್ಟ್ರಕೂಟರ ಮಾಲ್ಖೇಡು ಪಟ್ಟಣವು ಒಕ್ಕಲಾಯಿತು. ಡಾ॥ ಆಲ್ಟೇಕರ್ ಆವರು ಸಿದ್ಧಮಾಡಿ ತೋರಿಸಿರುವಂತೆ ಚಾಲುಕ್ಯ ರಾಷ್ಟ್ರಕೂಟರು ಕನ್ನಡ ನಾಡಿನವರೆಂಬುದರಲ್ಲಿ ಸಂದೇಹವಿಲ್ಲ. 33 ಆದರೆ ಇವರ ಆಸ್ಥಾನಗಳಲ್ಲಿ ಮಹಾರಾಷ್ಟ್ರೀ ಪ್ರಾಕೃತ ಸಾಹಿತ್ಯಕ್ಕೂ ಪ್ರೋತ್ಸಾಹ ದೊರೆತಿದೆ. ಕ್ರಿಸ್ತಶಕದ ಆದಿಯಿಂದ ಮೊದಲಾಗಿ ಸುಮಾರು ಹತ್ತು ಶತಮಾನಗಳವರೆಗೆ ಮಹಾರಾಷ್ಟ್ರೀ ಸಾಹಿತ್ಯವು ಅವಿಚ್ಛಿನ್ನವಾಗಿ ಬೆಳೆದುಕೊಂಡು ಬಂದಿದೆ. ಇನ್ನು ನೃಪತುಂಗನ ಕಾಲದ ಮಾತೇನು ? ಆದ್ದರಿಂದ "ಕ್ರಿ.ಶ. ೫–೬ ಶತಮಾನಗಳ ಹಿಂದೆ ಪ್ರಾಕೃತದ ಅವತಾರ

---

32 A.U.S. Vol· I, 157-185

33 ಚಾಲುಕ್ಯರು ಆಗಂತುಕರೆಂದು ಚರಿತ್ರಕಾರರ ಅಭಿಪ್ರಾಯ. ಆದರೆ ೩ನೆಯ ಶತಮಾನದ ನಾಗಾರ್ಜುನಕೊಂಡದ ಶಾಸನಗಳಲ್ಲಿ ಚಳಿಕಿ ವಂಶಕ್ಕೆ ಸೇರಿದ ಮಹಾತಲವರಸ್ಕಂದ ಚಲಿಕಿ ತಮ್ಮ ನಗ ಎಂಬೊಬ್ಬನ ಹೆಸರಿವೆ. ಚಳಿಕಿಗಳು ಈ ನಾಡವರೇ ಆಗಿರಬಹುದು.

ಮುಗಿದು ಹೋಯಿತು" ಎಂಬ ಶ್ರೀಮಾನ್ ಜೋಶಿಯವರ ಮಾತುಗಳಲ್ಲಿ ನಂಬಿಕೆ ಹೇಗೆ ಹುಟ್ಟೀತು ? ಈ ಪ್ರಾಕೃತ ಸಾಹಿತ್ಯದ ಪ್ರಭಾವ ಕನ್ನಡದಲ್ಲಿ ಎಷ್ಟಿದೆಯೆಂಬುದನ್ನು ಹೇಳುವುದು ಇಲ್ಲಿ ಅಪ್ರಕೃತ. ಒಂದು ಮಾತಿನಲ್ಲಿ ಹೇಳುವುದಾದರೆ ಕನ್ನಡ ಸಾಹಿತ್ಯದ ಬೆಳವಣಿಗೆಗೆ ಸಂಸ್ಕೃತವೊಂದನ್ನು ಬಿಟ್ಟರೆ, ಈ ಪ್ರಾಕೃತ ಸಾಹಿತ್ಯವೇ ಎರಡನೆಯ ತಾಯಿ.

ಈ ವಿಚಾರದಿಂದ ನೃಪತುಂಗನ ಕಾಲಕ್ಕಿಂತಲೂ ಹಿಂದೆ ಗೋದಾವರಿಯ ಉತ್ತರ ತೀರದಲ್ಲಿ ಪ್ರಾಕೃತದ ಪ್ರಾಬಲ್ಯವಿತ್ತೆಂದು ಮನವರಿಕೆಯಾಗದಿರದು. ಪೈಠಣದ ಪರಿಸರ ಪ್ರಾಂತ ಅದಕ್ಕೆ ಮೂಲಸ್ಥಾನ. ಈಚಿನ ಮರಾಠಿ ಸಾಹಿತ್ಯಕ್ಕೂ ಅದೇ ತವರುಮನೆ. ಮಹಾರಾಷ್ಟ್ರೀ ಪ್ರಾಕೃತವು[34] ಗ್ರಾಂಥಿಕ ಭಾಷೆಯೇ ಹೊರತು ಆ ಪ್ರಾಂತದ ಮನೆಮಾತಾಗಿರಲಿಕ್ಕಿಲ್ಲ. ಎಂಬ ಶ್ರೀಮಾನ್ ಜೋಶಿಯವರ ಮಾತುಗಳಲ್ಲಿ ಸ್ವಲ್ಪ ನಿಜ ಇದೆ. ಆದರ ಆ ಮನೆಮಾತು ಕನ್ನಡವಾಗಿರಲಿಲ್ಲ ಎಂದು ಹೇಳುವುದಕ್ಕೆ ಪ್ರತಿಬಂಧಕವಿಲ್ಲ. ಬರವಣಿಗೆಯ ಭಾಷೆಗೂ ವ್ಯಾವಹಾರಿಕ ಭಾಷೆಗೂ ಸ್ವಲ್ಪ ಅಂತರ ಇದ್ದೇ ಇರುತ್ತದೆ. ಮಹಾರಾಷ್ಟ್ರಿಯೇ ಗ್ರಾಂಥಿಕ ಭಾಷೆಯಾದರೆ ತತ್ಸದೃಶವಾದ ಭಾಷೆ ಆ ಪ್ರಾಂತದಲ್ಲಿ ಬಳಕೆಯಲ್ಲಿದ್ದಿರಬೇಕು. ಪಂಪನು ಹಳಗನ್ನಡದಲ್ಲಿ ಬರೆದನೆಂದಮಾತ್ರಕ್ಕೆ ಆ ಕಾಲದಲ್ಲಿ ಮನೆಮಾತು ಕನ್ನಡವಾಗಿರಲಿಲ್ಲವೆಂದು ಹೇಳಲಾದೀತೆ ? ಆದ್ದರಿಂದ ವ್ಯಾವಹಾರಿಕ ಭಾಷೆ ಒಂದು ವಿಧವಾದ ಮರಾಠಿಯೇ – ಈಗಿನ ಮರಾಠಿಯಂತಿಲ್ಲದಿರಬಹುದು ; ಆದರೆ ಅವೆರಡರ ಜೀವ ಒಂದೇ – ಮಹಾರಾಷ್ಟ್ರದಲ್ಲಿ ಎಂದರೆ, ಗೋದಾವರಿಯ ಉತ್ತರಕ್ಕೆ ಮನೆಮಾತಾಗಿರಲೇಬೇಕು. ಅಲ್ಲಿ ಕನ್ನಡವನ್ನು ಹುಡುಕಲಿಕ್ಕೆ ಹೊರಡುವುದು ಊರಲ್ಲಿಲ್ಲದವರನ್ನು ಹೆಸರು ಹಿಡಿದು ಕೂಗಿದ ಹಾಗೆ ಅಲ್ಲವೆ ?

ಶ್ರೀಮಾನ್ ಜೋಶಿಯವರು ಮೇಲಿಂದ ಮೇಲೆ ''The Substratum over which Gujarati and Marathi have spread was

---

34 L. S. I. VII, 12.

Dravidian'' ಎಂಬ ಸ್ಟೆರ್ನ್‌ಕೋನೊ ಅವರ ಮಾತುಗಳನ್ನು ಆಧಾರವಾಗಿ ಎಳೆದುತಂದುಕೊಂಡಿದ್ದಾರೆ. ಇಲ್ಲಿ Dravidian ಎಂಬ ಪದಕ್ಕೆ ಕನ್ನಡ ಎಂದು ಅವರ ಗ್ರಹಿಕೆ. ಇದು ಸರಿಯಲ್ಲ. ಮೂಲದ್ರಾವಿಡವಿರಬೇಕು. ಮಹಾರಾಷ್ಟ್ರ, ಗುಜರಾತಗಳಿಗೆ ಆರ್ಯರ ಸಂಸ್ಕೃತಿಯ ಸಂಪರ್ಕ ಆಗುವುದಕ್ಕೆ ಮೊದಲಾದದ್ದು ಕ್ರಿ. ಪೂ. ೮೦೦ರ ಹಿಂದೆ, ಎಂದರೆ ಬ್ರಾಹ್ಮಣಗಳ ಯುಗದಲ್ಲಿ. ಆ ಕಾಲದಲ್ಲಿ ಅಲ್ಲಿದ್ದ ಭಾಷೆ ಕನ್ನಡವೆಂದು ಹೇಳಲಾದೀತೆ ? ಆ ಕಾಲದಲ್ಲಿ ಈಗಿರುವಂತೆ ಬೇರೆ ಬೇರೆ ದ್ರಾವಿಡ ಭಾಷಾ ಶಾಖೆಗಳಿದ್ದಿರಲಾರವು. ಒಂದು ವೇಳೆ ಅದು ಕನ್ನಡವೇ ಎಂದು ಹೇಳುವುದಾದರೆ ಅದರಲ್ಲಿಲ್ಲದ ಚಕಾರ ಜಕಾರಗಳ ದಂತ್ಯೋಚ್ಚಾರಣೆಯೂ ಪ್ರಥಮ ಪುರುಷ ಸರ್ವನಾಮದ ಎರಡು ಬಹುವಚನ ರೂಪಗಳೂ ಮರಾಠಿಯಲ್ಲಿ ಹೇಗೆ ಬಂದುವು ? ಎಂಬ ಪ್ರಶ್ನೆಗೆ ಉತ್ತರ ಹೇಳುವುದು ದುಸ್ತರವಾಗುತ್ತದೆ. ಸಂಸ್ಕೃತದಲ್ಲಾಗಲಿ ಇಂಡೊ ಯೂರೋಪಿಯನ್ ಕುಲದ ಯಾವ ಭಾಷೆಯಲ್ಲಾಗಲಿ ಇವು ಕಂಡುಬರುವುದಿಲ್ಲ.[35] ಗುಜರಾತಿಯಲ್ಲಿ ಮಾತ್ರ ಆ ಎರಡು ಬಹುವಚನ ರೂಪಗಳಿವೆ, ಅಷ್ಟೆ. ಕನ್ನಡದಲ್ಲಿ ಇವಿಲ್ಲವೆಂಬುದನ್ನು ಒತ್ತಿ ಹೇಳಬೇಕಾಗಿದೆ. ತೆಲುಗಿನಲ್ಲಿ ಈಗಲೂ ಇವು ಬಳಕೆಯಲ್ಲಿವೆ. ಆದ್ದರಿಂದ ಮರಾಠಿ ಹುಟ್ಟುವುದಕ್ಕೆ ಪೂರ್ವದಲ್ಲಿ ಆ ಪ್ರಾಂತದಲ್ಲಿ ತೆಲುಗೇಕೆ ಇದ್ದಿರಬಾರದು ? ತೆಲುಗು ಸೀಮೆಗೆ ಅತಿ ಸಮೀಪವಾಗಿರುವ ಬಿರಾರಿನ(ವರ್ಹಾಡ)ಮರಾಠಿಗೆ–ಶ್ರೀಮಾನ್ ಜೋಶಿಯವರು ಹೇಳುವಂತೆ ಇದು ಮಹಾರಾಷ್ಟ್ರದ ಮೂಲವಾಗಿರಬಹುದೇನೋ – ಮೊದಲು ತೆಲುಗಿನಿಂದ ಈ ಪ್ರಭಾವ ಹರಿದುಬಂದು ಅನಂತರ ಮರಾಠಿಯಲ್ಲೆಲ್ಲ ವ್ಯಾಪಿಸಿಕೊಂಡಿರಬಹುದು. ಅದು ಹೇಗಾದರೂ ಇರಲಿ. ಸ್ಟೆರ್ನ್‌ಕೋನೊ ಅವರ Dravidian ಶಬ್ದಕ್ಕೆ ಕನ್ನಡ ಎಂದು ಕಲ್ಪಿಸಲು ಇರುವ ಕಾರಣಗಳಿಗಿಂತ ತೆಲುಗೆಂದು ಹೇಳಲು ಹೆಚ್ಚು ಆಧಾರಗಳಿವೆ ಎಂಬುದು ಗೊತ್ತಾಗದಿರದು. ಈ ಕಷ್ಟದಿಂದ ಪಾರಾಗಲು ಆ ಮಾತಿಗೆ ಮೂಲದ್ರಾವಿಡ ಎಂದು ಅರ್ಥ ಹೇಳದೆ ಬೇರೆ ಉಪಪತ್ತಿಯೇ ಕಾಣುವುದಿಲ್ಲ.

---

35 C.G.D.L., 414.

ಇನ್ನು ಮಹಾರಾಷ್ಟ್ರ ಎಂಬ ಶಬ್ದ ಹೇಗೆ ಬಂತು ಎಂಬುದನ್ನು ನೋಡೋಣ. ಇದು ಸಂಸ್ಕೃತದ ಹೆಸರೆಂದು ಅದರ ಹಣೆಯಲ್ಲೇ ಬರೆದಿದೆ. ಆರ್ಯೇತರ ಹೆಸರುಗಳನ್ನು ಸಂಸ್ಕೃತಕ್ಕೆ ತರ್ಜುಮೆ ಮಾಡುವ ಸಂಪ್ರದಾಯ ವಿರುವುದರಿಂದ ಆ ಶಬ್ದಕ್ಕೆ ಮೂಲವು ಆರ್ಯೇತರವಾಗಿರಬಹುದೇ ಎಂಬ ಶಂಕೆಯುಂಟಾಗುವುದು ಸಹಜ. ಇದರ ಪರಿಣಾಮವಾಗಿ ಶ್ರೀಮಾನ್ ಜೋಶಿಯವರು 'ಮರಹಟ್ಟ' ಎಂಬ ಒಂದು ಕನ್ನಡ ಪದವನ್ನು ಸೃಷ್ಟಿಸಿದ್ದಾರೆ. ಮರ+ಹಟ್ಟ ಎಂದು ಅದರ ವಿಭಜನೆ. ಮರ ಎಂದರೆ ದೊಡ್ಡದು ಎಂದು ಅವರ ಅರ್ಥ. ಇದು ಸರಿಯಾಗಿದೆ ಎಂದು ಒಪ್ಪೋಣ; ಹಟ್ಟ ಎಂಬುದನ್ನು ಅದರ ಅತಿ ವಿಸ್ತಾರವಾದ ಅರ್ಥದಲ್ಲಿಟ್ಟುಕೊಂಡರೂ ನಗರ ಎಂದಾಗುತ್ತದೇ ವಿನಾ ದೇಶ ಎಂಬರ್ಥ ಅದಕ್ಕೆ ಹೇಗೆ ಬರುತ್ತದೋ ತಿಳಿಯದು. ಈಗ ತಿಳಿದುಬಂದಿರುವುದರಲ್ಲಿ 'ಮಹಾರಾಷ್ಟ್ರ' ಶಬ್ದದ ಅತಿ ಪ್ರಾಚೀನ ಪ್ರಯೋಗ ಶ್ರೀಮಾನ್ ಜೋಶಿಯವರು ಕೊಟ್ಟಿರುವಂತೆ ಕ್ರಿ. ಶ. ೪ನೆಯ ಶತಮಾನದ್ದು. ಆದ್ದರಿಂದ 'ಮರಹಟ್ಟ' ಎಂಬುದರ ತರ್ಜುಮೆ 'ಮಹಾರಾಷ್ಟ್ರ' ಆಗಿದ್ದರೆ 'ಮರಹಟ್ಟ' ಎಂಬುದು ಆ ೪ನೆಯ ಶತಮಾನಕ್ಕಿಂತ ಹಿಂದಿನದಾಗಿರಬೇಕಲ್ಲವೆ ? 'ಹಟ್ಟ' ಎಂಬ ಕನ್ನಡ ಪದಕ್ಕೆ ಆ ಕಾಲದಲ್ಲಿ ಆ ರೂಪವಿರುವುದು ಸಾಧ್ಯವೆ ? ಸಾರ್ವತ್ರಿಕವಾಗಿ ಹಳಗನ್ನಡದಲ್ಲಿ ಅದರ ರೂಪ 'ಪಟ್ಟ' ಅಲ್ಲದೆ ಹಕಾರೋಚ್ಚಾರಣೆ ದ್ರಾವಿಡ ಭಾಷೆಗಳಿಗೆ ಸೇರಿದ್ದಲ್ಲ. ಈ ಸ್ವನವೇ ಆ ಭಾಷೆಗಳದಲ್ಲ.[36] ಹೀಗಿರುವಾಗ 'ಮರಹಟ್ಟ' ಎಂಬುದು ಕೃತಕವೆಂದು ತಟ್ಟನೆ ಗೊತ್ತಾಗುತ್ತದೆ. 'ಮರಪಟ್ಟ' ಎಂಬ ಅದರ ಸರಿಯಾದ ರೂಪವನ್ನು ಅಂಗೀಕರಿಸಿದರೂ ಅದರಿಂದ ಮಹಾರಾಷ್ಟ್ರಾರ್ಥ ಬರುವುದಿಲ್ಲ. ಆದ್ದರಿಂದ 'ಮರಹಟ್ಟ' ಮಹಾರಾಷ್ಟ್ರದ ಮೂಲವಲ್ಲ; ಆ ನಾಡು ನುಡಿಗಳ ಹೆಸರು ಕನ್ನಡವಲ್ಲ. ಆ ಶಬ್ದದ ಮೂಲವನ್ನು ಬೆದಕಲು ಇಲ್ಲಿ ಅವಕಾಶವಿಲ್ಲ.

ಗೋದಾವರಿಯ ಉತ್ತರಕ್ಕೆ ಶ್ರೀಮಾನ್ ಜೋಶಿಯವರು ಕೊಟ್ಟಿರುವ

---

36 C.G.D.L. 147

ಕನ್ನಡದ ಕುರುಹುಗಳ ವಿಷಯವಾಗಿ ಒಂದೆರಡು ಮಾತುಗಳನ್ನು ಹೇಳಬೇಕಾಗಿದೆ. ನಾಸಿಕ ಜಿಲ್ಲೆಯಲ್ಲಿ ವೀರಗಲ್ಲುಗಳಿವೆ ಎಂಬುದು ಮುಖ್ಯವಾದದ್ದು. ಆ ಪ್ರಾಂತದಲ್ಲಿ ಇವನ್ನು ಈ ಹೆಸರಿನಿಂದಲೇ ಕರೆಯುತ್ತಾರೆಂಬುದರಲ್ಲಿ ನಮಗೆ ಸಂಶಯವಿದೆ. ಆದರೆ ಸತಿ ಕಲ್ಲುಗಳನ್ನೂ ವೀರಗಲ್ಲುಗಳನ್ನೂ ನೆಡುವುದೂ ಪೂಜಿಸುವುದೂ ಕನ್ನಡಿಗರಿಗೇ ಬಂದ ಪದ್ಧತಿಯಲ್ಲ. ಅಥರ್ವವೇದದಲ್ಲಿಯೇ 'ಸತಿ'ಯ ವಿಷಯ ಹೇಳಿದೆ,[37] 'ಪ್ರೇತಶಿಲೆ'ಯನ್ನು ಪೂಜೆಮಾಡುವ ಪದ್ಧತಿ ಬಹು ಹಿಂದಿನದು. ಇದೇ ಕಾಲಕ್ರಮೇಣ ಈ ಕಲ್ಲುಗಳಾಗಿ ಪರಿಣಮಿಸಿದೆ. ಈ ಪದ್ಧತಿ ಒಂದಲ್ಲ ಒಂದು ರೂಪದಿಂದ ಭರತಖಂಡದಲ್ಲೆಲ್ಲ ಉಂಟು. ಯಮುನಾ ನದಿಯ ದಕ್ಷಿಣಕ್ಕಿರುವ ಪ್ರಾಂತಗಳಲ್ಲಿ ಸತಿಕಲ್ಲುಗಳು ಲೆಕ್ಕವಿಲ್ಲದಷ್ಟಿವೆ. [38] ಗುಜರಾತಿನಲ್ಲಿರುವ ಸತಿಕಂಬಗಳ ಮೇಲೆ ಹಡಗಿನ ಚಿತ್ರಗಳಿವೆಯೆಂದೂ ಸಮುದ್ರದ ಮೇಲೆ ಹೋಗಿ ಹಡಗೊಡೆದು ದುರ್ಮರಣ ಪಟ್ಟವರ ಸ್ಮಾರಕಗಳು ಅವು ಎಂದೂ ಟಾಡ್ ಅವರು ಹೇಳಿರುತ್ತಾರೆ. [39] ಗುಪ್ತರ ಕಾಲದಲ್ಲಿಯೂ ಈ ವಾಡಿಕೆ ಪ್ರಚುರವಾಗಿತ್ತು. [40] ಪಂಜಾಬಿನ ಚಂಬ ಎಂಬಲ್ಲಿ ಇಂಥ ಸ್ಮಾರಕಸ್ತಂಭಗಳಿವೆ. [41] ಈಗ ದೊರೆತಿರುವ ಇಂಥ ವೀರ–ಸತಿ ಶಿಲೆಗಳಲ್ಲೆಲ್ಲ ಅತಿ ಪ್ರಾಚೀನವಾದುವೆಂದರೆ ಬಲೋದವಲ್ಲಿ ಸಿಕ್ಕಿರುವುವು. ಅವು ಕ್ರಿ. ಶ. ೨ನೆಯ ಶತಮಾನಕ್ಕೆ ಸೇರಿದುವೆಂದು ಪ್ರಿನ್ಸೆಪ್ ಅವರ ಅಭಿಪ್ರಾಯ. [42] ಆದ್ದರಿಂದ ನಾಸಿಕ ಜಿಲ್ಲೆಯಲ್ಲಿ ಇಂಥ ಸ್ಮಾರಕಸ್ತಂಭಗಳಿದ್ದ ಮಾತ್ರಕ್ಕೆ ಅವು ಕನ್ನಡದ ನೆಲೆಯನ್ನು ತೋರಿಸುತ್ತವೆಂದು ಹೇಳಲಾಗುವುದಿಲ್ಲ. ರಾಷ್ಟ್ರಕೂಟ ಚಾಲುಕ್ಯರ ಕಾಲದಲ್ಲಿ ಈ ಪ್ರಾಂತಗಳಲ್ಲಿ ಕನ್ನಡ ಜನರೂ ಅಧಿಕಾರಿಗಳೂ ಇದ್ದರೆಂದು ಚರಿತ್ರೆಯಿಂದ ಗೊತ್ತಾಗುತ್ತದೆ. ಬಾದಾಮಿಯ ಚಾಲುಕ್ಯರ ಶಾಖೆಯೊಂದು ದಕ್ಷಿಣ ಗುಜರಾತಿ

---

37 See "Vedic Index," under Sati
38 A.S.I III, X
39 ಅದೇ.
40 I.G.I. II 51
41 C. I. 40
42 A. S. I. VIII 136

ನಲ್ಲಿತ್ತು.[43] ಬೀದರಿನ ಎಲಿಚ್ ಪುರದಲ್ಲಿದ್ದ ರಾಷ್ಟ್ರಕೂಟರು ಲಟ್ಟಲೂರಿನಿಂದ (ಲಾಟೂರ್) ಹೋದವರು.[44] ನೃಪತುಂಗನು ಕ್ರಿ. ಶ. ೮೦೮ರಲ್ಲಿ ಭರುಕಚ್ಛದಲ್ಲಿ ಹುಟ್ಟಿದವನು.[45] ಗುಜರಾತಿನಲ್ಲಿ ರಾಷ್ಟ್ರಕೂಟರ ಶಾಖೆಯೊಂದಿತ್ತು. ಇವರ ಅನುಯಾಯಿಗಳಾಗಿ ಎಷ್ಟೋ ಜನ ಕನ್ನಡಿಗರು ಅಲ್ಲಿಗೆ ಒಕ್ಕಲು ಹೋಗಿರಬೇಕು. ಆದ್ದರಿಂದ ಈ ಪ್ರಾಂತಗಳಲ್ಲಿ ಸಿಕ್ಕುವ ವೀರಗಲ್ಲುಗಳಲ್ಲಿ ಕೆಲವು ಕನ್ನಡಿಗರಿಗೆ ಸೇರಿರಬಹುದಾದ್ದು ಏನೂ ಸೋಜಿಗವಲ್ಲ. ಆ ಕಾಲದಲ್ಲಿ ಈಗಲೂ ಇರುವ ಹಾಗೆ ಅಲ್ಲಿ ಕನ್ನಡಿಗರಿದ್ದರೆಂದು ಹೇಳಬಹುದೇ ವಿನಾ ಅದೇ 'ಕನ್ನಡರ ಮೂಲಸ್ಥಾನ'ವೆಂದು ಹೇಳಲಾಗುವುದಿಲ್ಲ. ಹಾಗೆಯೇ ರಾಷ್ಟ್ರಕೂಟರ ಮೂರನೆಯ ಕನ್ನರನ ಕನ್ನಡ ಪ್ರಶಸ್ತಿಯೊಂದು ಜೂರಾದಲ್ಲಿ ಸಿಕ್ಕಮಾತ್ರಕ್ಕೆ ಅಲ್ಲಿಯವರೆಗೂ ಕನ್ನಡದ ವ್ಯಾಪ್ತಿ ಇತ್ತೆಂದು ಹೇಳಬಹುದೆ ? ಒಂದೇ ಕೋಗಿಲೆಯಿಂದ ವಸಂತಕಾಲ ಬರುತ್ತದೆಯೆ ? ಖಾನ್ದೇಶದ ತೆಂಕಣಕ್ಕೆ 'ಕನ್ನಡ' ಎಂಬ ತಾಲ್ಲೂಕು ಇರುವುದು ನಿಜ. ಬರಿ ಹೆಸರಿನಿಂದಲೆ ಅದು ಕನ್ನಡವಾಗಿರಬೇಕೆಂದು ಹೇಳಬಹುದೆ ? 'ಕನ್ನಡ' ಎಂಬುದು ಕನೆರ ಆಗುವುದಕ್ಕೇನೋ ನಿದರ್ಶನವಿದೆ-'ಉತ್ತರ ಕನೆರ ಆದರೆ ಉದಯಪುರ ಸಂಸ್ಥಾನದಲ್ಲಿ ಕನೆರ(kanera) ಎಂದೂ ಇಂದೂರಿನಲ್ಲಿ ಕನ್ನೊಡ್ ಎಂದೂ ಎರಡು ಊರುಗಳಿವೆ. ಆದ್ದರಿಂದ ಶ್ರೀಮಾನ್ ಜೋಶಿಯವರಂತೆ ಹೇಳುವುದಾದರೆ ಕನ್ನಡದ ವ್ಯಾಪ್ತಿ ಇಲ್ಲಿಯವರೆಗೂ ಬರಬೇಕಲ್ಲವೆ ? ಇದಕ್ಕೆ ಅಂತಿಲ್ಲ ಪಾರವಿಲ್ಲ. ಆ 'ಕನ್ನಡ' ತಾಲ್ಲೂಕಿನ ವಿಷಯ ಹೆಚ್ಚು ತಿಳಿದು ಬಂದ ಹೊರತು ಏನನ್ನೂ ಹೇಳಲಸಾಧ್ಯ ಎಂದು ಮಾತ್ರ ಹೇಳಬೇಕಾಗಿದೆ.

ನೀರಿಗೆ ಬಿದ್ದ ಸೋರೆಬುರುಡೆಯಂತೆ ಗಾಳಿ ಹೊಡೆದತ್ತ ಅಲೆದಾಡುವ ಜಾತಿ ಜನಾಂಗಗಳನ್ನು ಹಿಡಿದುಕೊಂಡು ಯಾವ ಸಿದ್ಧಾಂತವನ್ನಾದರೂ

---

43 R. T. 22
44 ಅದೇ 23
45 ಅದೇ 67

ಮಾಡಲು ಸಾಧ್ಯವೇ? ಶ್ರೀಮಾನ್ ಜೋಶಿಯವರು ಹೇಳುವ 'ಕನ್ನಡರು' ಇಂಥ ಸ್ವಭಾವದವರು, ಬತ್ತದ ತೆನೆ ಬಲಿಯಿತೆಂದರೆ ಒಮ್ಮೆ ಇವರನ್ನು ಕೊಂಕಣದಲ್ಲಿ ಕಾಣಬಹುದು; ಮತ್ತೊಮ್ಮೆ ಠಾಣಾ ಜಿಲ್ಲೆಯ ಅಂಗಡಿ ಬೀದಿ ಗಳಲ್ಲೆಲ್ಲ ಇವರೆ.[46] ನೆಲೆಯಾಗಿ ನಿಂತುಕೊಳ್ಳುವ ಜನರಲ್ಲ ಇವರು. ಧನಗರರು, ಗೌಳಿಗಳು, ಕುರುಬರು, ಮಣೆಯರು–ಇವರಲ್ಲಿಯೂ ಈ ಸ್ವಭಾವ ವಿಲ್ಲದಿಲ್ಲ. ಇವರಲ್ಲಿ ಕೆಲವರು ಕನ್ನಡ ಮಾತನಾಡಬಹುದು. ಸಾಧಾರಣ ವಾಗಿ ಇಂಥವರಿಗೆ ಹಲವು ಭಾಷೆಗಳ ಪರಿಚಯ ಇರುತ್ತದೆ. ಒಂದೊಂದು ಕಡೆ ಒಂದೊಂದು ಭಾಷೆ ಇವರದು. ಮದರಾಸಿನಲ್ಲಿ ಮೊಸರು ಮಾರುವವ ರೆಲ್ಲ ಕನ್ನಡ ಮಾತನಾಡುತ್ತಾರೆ. 'ಏನಯ್ಯಾ' ಎಂದು ಕೇಳಿದರೆ, 'ನಾವು ಸೇಲಂ ಜಿಲ್ಲೆಯವರು ಸ್ವಾಮಿ' ಎಂದು ಹೇಳುತ್ತಾರೆ. ಇಷ್ಟರಿಂದಲೆ ಮದರಾಸೆಲ್ಲ ಕನ್ನಡ ಎಂದು ಹೇಳಬಹುದೆ ? ಆದ್ದರಿಂದ ಇಂಥ ಚರ್ಚೆಯಲ್ಲಿ ತಿರುಗುಗಾಲಿನ ಜಾತಿ ಜನಾಂಗಗಳನ್ನು ಆಧಾರವಾಗಿ ತೆಗೆದುಕೊಳ್ಳುವುದು ಒಳ್ಳೆಯದಲ್ಲವೆಂದು ತೋರುತ್ತದೆ.

ಈಗಾಗಲೇ ಈ ವಿಮರ್ಶೆ ಮಿತಿಮೀರಿ ದೊಡ್ಡದಾಗಿ ಬೆಳೆದುಬಿಟ್ಟಿದೆ. ಶ್ರೀಮಾನ್ ಜೋಶಿಯವರು ಕೊಟ್ಟಿರುವ ಎಲ್ಲ ಆಧಾರಗಳನ್ನೂ ಇಲ್ಲಿ ವಿಚಾರಿಸಿ ನೋಡಲು ಸಾಧ್ಯವಾಗಲಿಲ್ಲ. ಅತಿ ಮುಖ್ಯವಾದ ಕೆಲವನ್ನು ಮಾತ್ರ ತೆಗೆದುಕೊಂಡು ಚರ್ಚಿಸಿದೆ ; ಅವುಗಳ ವಿಷಯವಾಗಿ ನಮಗೆ ತೋರಿಬಂದ ಸಂಶಯಗಳನ್ನು ಸೂಚಿಸಿದೆ. ಈ ವಿಷಯವನ್ನು ಇನ್ನೂ ಸ್ಪಷ್ಟವಾದ ಆಧಾರಗಳಿಂದ ಎಕ್ಕಿ ನೋಡಬೇಕಾಗಿದೆ;

ಶ್ರೀಮಾನ್ ಜೋಶಿಯವರು ಬಹು ವಿಷಯಗಳನ್ನು ಸಂಗ್ರಹಮಾಡಿ ದ್ದಾರೆ. ಅವರು ಪಟ್ಟಿರುವ ಪರಿಶ್ರಮಕ್ಕೂ, ಗ್ರಂಥಗಳ ಅನನುಕೂಲತೆ ಇದ್ದರೂ ವಿಷಯಗಳನ್ನು ಆರಿಸಿಕೊಳ್ಳುವುದರಲ್ಲಿ ವ್ಯಕ್ತಪಡಿಸಿರುವ ತಾಳ್ಮೆಗೂ ಜಾಣ್ಮೆಗೂ ನಾಡುನುಡಿಗಳ ಮೇಲಣ.ಭಕ್ತಿಗೂ ನಮ್ಮ ಹೃತ್ಪೂರ್ವಕವಾದ ವಂದನೆಗಳನ್ನು ಅವರಿಗೆ ಅರ್ಪಿಸದೆ ಇರೆವು. ೧೯೩೫

———

46 N. G. 409

(ಇಲ್ಲಿ ಉಪಯೋಗಿಸಿರುವ ಸಂಕೇತಗಳು)

| | | |
|---|---|---|
| 1 | A.S.I. | Archaeological Survey of India (Cunningham) |
| 2 | A.U.S. | Allahabad University Series. |
| 3 | B.R.A. | Buddhist Remains in Andhra, etc., |
| 4 | C.H.I. | Cambridge History of India, Vol. 1 |
| 5 | C.I. | Census of India, 1931, Vol. 1, part 1 |
| 6 | C.G.D.L. | Comparative Grammer of the Dravidian Languages. |
| 7 | C.W.B. | Collected Works of Bhandarkar, Vol. IV. |
| 8 | E.C. | Epigraphia Carnatica |
| 9 | E.I. | Epigraphia Indica |
| 10 | H.T.L. | History of Telugu Literature |
| 11 | I.A. | Indian Antiquary |
| 12 | I.G.I. | Imperial Gazetteer of India |
| 13 | I.P. | Introduction to Prakrit |
| 14 | L.S.I. | Linguistic Survey of India |
| 15 | M.A.R. | Mysore Archaeological Report. |
| 16 | M.E.R. | Madras Epigraphical Report. |
| 17 | N.G. | Nasik Gazetteer. |
| 18 | O.I.I. | Origional Inhabitants of India. |
| 19 | P.D.I. | Pre-Aryan and Pre-Dravidian in India. |
| 20 | R.T. | Rashtrakutas and their Times. |

# ಶಬ್ದಮಣಿದರ್ಪಣಂ: ಪ್ರಸ್ತಾವನೆ

---

'ಸೂರ್ಯೇಂದು ಮೇರುವಾರಿಧಿ ಪರ್ಯಂತಂ ಪರೆದು ನಿಲ್ಕೆ' ಎಂದು ಕೇಶಿರಾಜ ತನ್ನ 'ಶಬ್ದಮಣಿದರ್ಪಣ'ವನ್ನು ಹರಸಿ ಕನ್ನಡನಾಡಿನಲ್ಲಿ ಸಂಚಾರ ಮಾಡಲು ಬಿಟ್ಟಂದಿನಿಂದ ಕನ್ನಡ ಜನತೆ ಅದನ್ನು ಅಳಿಯಲೀಯದೆ ಅಕ್ಕರೆಯಿಂದ ಕಾಪಾಡಿಕೊಂಡು ಬಂದಿದೆ. ಈಗ ದೊರೆತಿರುವ ಮತ್ತು ಇನ್ನುಮುಂದೆ ದೊರೆಯಬಹುದಾದ ಆ ಗ್ರಂಥದ ಹಸ್ತಲಿಖಿತ ಪ್ರತಿಗಳ ಬಾಹುಳ್ಯವು ಇದಕ್ಕೆ ಸಾಕ್ಷಿಯಾಗಿದೆ. ಮುದ್ರಣಕಲೆ ಬಂದ ಮೇಲಂತೂ ಕನ್ನಡ ವಿದ್ವಾಂಸರು ಆ ಗ್ರಂಥವನ್ನು ಪರಿಷ್ಕರಿಸಿ ಅಭ್ಯಾಸಕ್ಕೆ ಅನುಕೂಲಿಸುವಂತೆ ತಮಗೆ ಉಚಿತವೆಂದು ತೋರಿದ ಸಹಾಯಕಸಾಮಗ್ರಿಗಳೊಡನೆ ಹಲವು ಸಾರಿ ಮುದ್ರಿಸಿ ಪ್ರಕಟಿಸಿದ್ದಾರೆ. ಅದು ಮೊದಲನೆಯ ಸಲ ಅಚ್ಚಾದದ್ದು ಕ್ರಿ.ಶ. ೧೮೬೮ರಲ್ಲಿ ; ಬೆಂಗಳೂರಿನಲ್ಲಿರುವ ಮೈಸೂರು ಸರ್ಕಾರದ

ಮುದ್ರಣಾಲಯದಲ್ಲಿ.[1] ಆಗ ವಿದ್ಯಾಭ್ಯಾಸದ ಇಲಾಖೆಯ ಮುಖ್ಯಾಧಿಕಾರಿಗಳಾಗಿದ್ದ ಜೆ. ಗ್ಯಾರೆಟ್ ಅವರು (J. Garrett) ಇದರ ಸಂಪಾದಕರು. ಇದಕ್ಕೆ ಅವರು ಬರೆದಿರುವ ೨ ಪುಟಗಳಷ್ಟು ಇಂಗ್ಲೀಷಿನ ಮುನ್ನುಡಿಯಲ್ಲಿ (Advertisement) ದೇಶೀಯ ಪಂಡಿತರ ಮನ್ನಣೆಗೆ ಇಷ್ಟರಮಟ್ಟಿಗೆ ಪಾತ್ರವಾಗಿರುವ ಈ ಗ್ರಂಥ ಇದುವರೆಗೆ ಅಚ್ಚಾಗದೆ ಇರುವುದು ಗಮನಾರ್ಹವಾದ ವಿಷಯ ಎಂಬ ಅಭಿಪ್ರಾಯದ ಒಂದು ವಾಕ್ಯವಿದೆ.[2] ಇದರಲ್ಲಿನ ಒಟ್ಟು ಪುಟಗಳು ಕ್ರೌನ್. ಅ. vi + ೩೨೧; ಸೂತ್ರ, ಟೀಕೆ, ವೃತ್ತಿ, ಪ್ರಯೋಗ ಈ ಕ್ರಮದಲ್ಲಿ ಇದು ಮುದ್ರಿತವಾಗಿದೆ. ಇಲ್ಲಿರುವ ಟೀಕೆ ನಿಟ್ಟೂರ ನಂಜಯ್ಯನ ಟೀಕೆಯನ್ನು ಬಲುಮಟ್ಟಿಗೆ ಹೋಲುತ್ತದೆ. ವೃತ್ತಿ ಪ್ರಯೋಗಗಳಲ್ಲಿ ತುಂಬ ವ್ಯತ್ಯಾಸಗಳಿವೆ. ಪ್ರತಿಯೊಂದು ಪುಟದಲ್ಲಿಯೂ ಹಲವು ಬಗೆಯಾದ ಸ್ಖಾಲಿತ್ಯಗಳು ಹೇರಳವಾಗಿವೆ. ತೀರ ಅಶುದ್ಧವಾದ ಹಸ್ತಪ್ರತಿಯೊಂದರ ಬೆಲೆಯನ್ನು ಮಾತ್ರ ಈ ಮುದ್ರಣಕ್ಕೆ ಕೊಡಬಹುದು. ಇದು ಪ್ರಥಮ ಮುದ್ರಣವಾದ್ದರಿಂದ ಇದರ ವಿಷಯ ಇಲ್ಲಿ ಹೇಳಿದೆ. ಇದಾದ ಮೇಲೆ ರೆವರೆಂಡ್ ಕಿಟ್ಟೆಲ್ ಅವರ ಮೂರು ಪರಿಷ್ಕೃತ ಮುದ್ರಣಗಳು ಹೊರಬಂದುವು. ಅವರ ಸಂಪಾದಕತ್ವದಲ್ಲಿ ಮೊದಲನೆಯ ಬಾರಿಗೆ ಈ ಗ್ರಂಥ ಪ್ರಕಟವಾದದ್ದು. ಕ್ರಿ.ಶ. ೧೮೭೨ರಲ್ಲಿ. ಪಾಠ ಪರಿಷ್ಕರಣಕ್ಕಾಗಿ ಅವರು ಹತ್ತು ಹಸ್ತಲಿಖಿತ ಪ್ರತಿಗಳನ್ನು ಬಳಸಿಕೊಂಡಿದ್ದಾರೆ. ಇವುಗಳಲ್ಲಿ ೫ ಓಲೆಯ ಪ್ರತಿಗಳು : ಉಳಿದುವು ಕಾಗದದವು. ೫ ಪ್ರತಿಗಳು ಮೈಸೂರಿನ ಕಡೆಯವು ; ೩ ಉತ್ತರ ಕರ್ಣಾಟಕ ಪ್ರದೇಶದವು ; ಒಂದು ಮಡಕೇರಿಗೆ ಸೇರಿದ್ದು ; ಇನ್ನೊಂದು ಮಂಗಳೂರಿನ ಕಡೆಯದು. ಓಲೆಯ ಪ್ರತಿಗಳು ಯಾವಾಗ ಲಿಖಿತವಾದುವೆಂಬ ವಿಷಯವಾಗಿ ವಿವರಗಳೇನೂ

---

1. ಈ ವಿಷಯವನ್ನು ನನಗೆ ತಿಳಿಸಿದವರು ಶ್ರೀ ಎಚ್. ದೇವೀರಪ್ಪ, ಎಂ.ಎ., ಅವರು.
2. "It is remarkable that a work so highly esteemed by learned natives as the Sabdamani Darpana should not have been printed before."

ದೊರೆಯುವುದಿಲ್ಲ ; ಒಂದು ಮಾತ್ರ ೧೭೦೨ರಲ್ಲಿ ಬರೆದಂತೆ ತಿಳಿಯುತ್ತದೆ ;[3] ಕಾಗದದ ಪ್ರತಿಗಳಿಗಿಂತ ಇವು ಹಳೆಯುವೆಂದು ಸಾಮಾನ್ಯವಾಗಿ ಹೇಳಬಹುದು. ಕಾಗದದ ಪ್ರತಿಗಳಲ್ಲಿ ಒಂದು ೧೮೩೯ರಲ್ಲಿ ಹುಟ್ಟಿದೆ. ಕನ್ನಡನಾಡಿನ ಎಲ್ಲ ಪ್ರಮುಖ ಭಾಗಗಳನ್ನು ಪ್ರತಿನಿಧಿಸುವಂತೆ ಕಿಟ್ಟೆಲ್ ಅವರು ಈ ಪ್ರತಿಗಳನ್ನು ಆರಿಸಿಕೊಂಡಿರುವುದು ಶ್ಲಾಘ್ಯವಾದ ವಿಷಯ. ಆದರೆ ಕಾಲದ ದೃಷ್ಟಿಯಿಂದ ಇವುಗಳ ಪ್ರಾತಿನಿಧ್ಯ ಅಸಮರ್ಪಕವೆಂದು ಹೇಳಬೇಕಾಗಿದೆ. ಮೇಲಿನ ಹತ್ತು ಪ್ರತಿಗಳಲ್ಲಿ ನಾಲ್ಕರಲ್ಲಿ ಟೀಕು ದೊರೆಯುವುದಿಲ್ಲ. ಎರಡರಲ್ಲಿ ಟೀಕಿನ ಜೊತೆಗೆ ಪದಚ್ಛೇದವೂ ಅನ್ವಯವೂ ಲಿಖಿತವಾಗಿವೆ ; ಉಳಿದ ನಾಲ್ಕರಲ್ಲಿ ಟೀಕು ಮಾತ್ರ ಇದೆ ; ಒಂದು ಪ್ರತಿಯಲ್ಲಿ ಮಾತ್ರ ಟೀಕಾಕಾರನ ಹೆಸರನ್ನು ನಿಟ್ಟೂರ ನಂಜಯ್ಯನೆಂದು ಹೇಳಿದೆ[4]. ಹಳಗನ್ನಡದ ಱ, ೞ ಎಂಬೆರಡಕ್ಷರಗಳನ್ನು ಯಾವ ಪ್ರತಿಯಲ್ಲಿಯೂ ಉಚಿತವಾದೆಡೆಗಳಲ್ಲಿ ನಿರ್ದಿಷ್ಟವಾಗಿ ಬರೆದಿಲ್ಲ. ಇದರಲ್ಲಿ ಅವ್ಯವಸ್ಥೆ ಇದೆ. ಈ ಹತ್ತು ಪ್ರತಿಗಳ ಪಾಠಭೇದಗಳನ್ನು ತೌಲನಾತ್ಮಕ ದೃಷ್ಟಿಯಿಂದ ನೋಡಿ ಕಿಟ್ಟೆಲ್ ಅವರು–ಸೂತ್ರಗಳ ಪಾಠ ಸುರಕ್ಷಿತವಾಗಿ ಉಳಿದುಕೊಂಡು ಬಂದಿದೆ, ವೃತ್ತಿ ಪ್ರಯೋಗಗಳ ವಿಷಯದಲ್ಲಿ ವ್ಯತ್ಯಾಸಗಳಿವೆ ಎಂಬ ತೀರ್ಮಾನಕ್ಕೆ ಬಂದಿದ್ದಾರೆ.[5] ಈ ಮೊದಲ ಮುದ್ರಣವಾದ ಮೇಲೆ, ೨೭ ವರ್ಷಗಳ ಅನಂತರ ೧೮೯೯ರಲ್ಲಿ "ಎರಡನೆಯ ಸುಧಾರಿಸಲ್ಪಟ್ಟ ಆವೃತ್ತಿ" ಪ್ರಕಟವಾಯಿತು. ಇದರಲ್ಲಿ ಪ್ರಯೋಗಗಳ ಪಾಠವನ್ನು ಹೆಚ್ಚು ಸಮರ್ಪಕವಾಗಿ ಪರಿಷ್ಕರಿಸಲಾಗಿದೆ. ಈ ಕಾರ್ಯದಲ್ಲಿ ಮೂಡಬಿದರೆಯ ಒಂದು ಓಲೆಯ ಪ್ರತಿಯಿಂದ ತುಂಬ ಸಹಾಯವಾದಂತೆ ತಿಳಿದುಬರುತ್ತದೆ ; ಈ ಪ್ರತಿಯಲ್ಲೂ ಟೀಕಾಕಾರನ ಹೆಸರಿಲ್ಲ. ಈ ಎರಡನೆಯ ಆವೃತ್ತಿಯ ಪಾಠವನ್ನು ಮತ್ತೆ ಪರಿಶೋಧಿಸಿ ೧೯೨೦ರಲ್ಲಿ ಮೂರನೆಯ ಮುದ್ರಣವನ್ನು ಪ್ರಕಟಿಸಲಾಯಿತು. ಈ ಕೆಲಸ

---

3. ಶಬ್ದಮಣಿದರ್ಪಣ (ಕಿಟ್ಟೆಲ್ ೧೮೭೨), **preface xxvi**
4. ಅದೇ vi
5. **''The Sutras have been well preserved''** ಅದೇ **preface vi.**

ವನ್ನು ಮಾಡಿದವರು ಈಗ ದಿವಂಗತರಾಗಿರುವ ಪಂಜೆ ಮಂಗೇಶರಾಯರು. ಅವರು ಬರೆದಿರುವ ಮುನ್ನುಡಿಯಲ್ಲಿ "ಘನ ಕಿಟ್ಟೆಲ್ಲರು ಪ್ರಚುರಗೊಳಿಸಿದ ಮೂಲಗ್ರಂಥದ ಮೂರನೆಯ ಆವೃತ್ತಿಯೇ ಈ ಪುಸ್ತಕವು. ಕೇಶಿರಾಜನ ಸೂತ್ರಗಳಿಗೆ ಮೂಲವಾಗಿರುವ ನಾಗವರ್ಮನ ಪದ್ಯಗಳನ್ನೂ ಶ್ಲೋಕ ಗಳನ್ನೂ ಈ ಆವೃತ್ತಿಯಲ್ಲಿ ಕೊಟ್ಟಿರುತ್ತೇನೆ. ಸೂತ್ರಗಳನ್ನು ಉದಾಹರಿಸುವ ಪದ್ಯಭಾಗಗಳಿಗೆ ಒರಸೆಯಾಗಿ ಸಂಖ್ಯೆ ಹಾಕಿರುತ್ತೇನೆ" ಎಂದು ತಮ್ಮ ಕಾರ್ಯ ಭಾಗವನ್ನು ಸೂಚಿಸಿದ್ದಾರೆ. ಇದಿಷ್ಟು ಅವರಿಂದ ಪರಿಷ್ಕೃತವಾದ 'ಶಬ್ದಮಣಿದರ್ಪಣ'ದ ಮುದ್ರಣಗಳ ವಿಚಾರ. ಬೆಂಗಳೂರಿನ ಕರ್ನಾಟಕ ಸಾಹಿತ್ಯ ಪರಿಷತ್ತಿನಿಂದ ೧೯೨೦ರಲ್ಲಿ ಈ ವ್ಯಾಕರಣದ ಪರಿಷ್ಕೃತ ಮುದ್ರಣ ವೊಂದು ಪ್ರಕಟವಾಯಿತು. ಇದನ್ನು ಸಂಪಾದಿಸಿದವರು ಯಾರು ಎಂಬುದು ತಿಳಿಯುವಂತಿಲ್ಲ. "ಶಬ್ದಮಣಿದರ್ಪಣದ ಈ ನಮ್ಮ ಪ್ರತಿಯನ್ನು ಮೈಸೂರು ಓರಿಯಂಟಲ್ ಲೈಬ್ರರಿಯಲ್ಲಿರುವ ಮೂರು ಓಲೆಯ ಪ್ರತಿಗಳ ಆಧಾರದಿಂದಲೂ ಮಂಗಳೂರಿನಲ್ಲಿ ಅಚ್ಚಾಗಿರುವ ಎರಡು ಪುಸ್ತಕಗಳ ಸಹಾಯದಿಂದಲೂ ಮುದ್ರಿಸಲಾಗಿದೆ" ಎಂದು ಪರಿಷ್ಕರಣ ಕಾರ್ಯಕ್ಕೆ ನೆರವಾದ ಗ್ರಂಥ ಸಾಮಗ್ರಿಯನ್ನು ನಿರ್ದೇಶಿಸಲಾಗಿದೆ. ಇಲ್ಲಿ ಅಚ್ಚಾಗಿರುವ ಪಾಠ ವೃತ್ತಿ ಪ್ರಯೋಗಗಳಲ್ಲಿ ಸ್ವಲ್ಪ ವ್ಯತ್ಯಾಸವಿದ್ದರೂ ಕಿಟ್ಟೆಲ್ ಅವರ ಮುದ್ರಣದ ಪಾಠವನ್ನು ಬಲುಮಟ್ಟಿಗೆ ಹೋಲುತ್ತದೆ. ಒಂದು ಓಲೆಯ ಪ್ರತಿಯಲ್ಲಿ ಮಾತ್ರ ನಿಟ್ಟೂರು ಸಂಜಯ್ಯನ ಟೀಕೆಯೂ ಇರುತ್ತದೆ.

೧೯೩೦ರಲ್ಲಿ ಮದ್ರಾಸ್ ಯೂನಿವರ್ಸಿಟಿಯ ಕನ್ನಡ ಗ್ರಂಥಮಾಲೆ ಯಲ್ಲಿ ೩ನೆಯ ಪುಸ್ತಕವಾಗಿ 'ಶಬ್ದಮಣಿದರ್ಪಣ' ಪ್ರಕಟವಾಯಿತು. ಇದರ ಸಂಪಾದಕರು ಶ್ರೀಮಾನ್‌ಗಳಾದ ಎ. ವೆಂಕಟರಾವ್ ಮತ್ತು ಪಂಡಿತ ಎಚ್. ಶೇಷ ಅಯ್ಯಂಗಾರ್. ಇದರಲ್ಲಿ ಕೇಶಿರಾಜನ ವೃತ್ತಿಯಿಲ್ಲ; ಲಿಂಗಣಾರಾಧ್ಯ ರಚಿತವಾದ ವೃತ್ತಿಯಿದೆ. ಗ್ರಂಥ ಪರಿಷ್ಕರಣಕ್ಕಾಗಿ ಲಿಂಗಣಾರಾಧ್ಯ ವೃತ್ತಿಯನ್ನುಳ್ಳ ಮದ್ರಾಸ್ ಓರಿಯಂಟಲ್ ಲೈಬ್ರರಿಯ ಒಂದು ಓಲೆಯ ಪ್ರತಿಯನ್ನೂ ಕಿಟ್ಟೆಲ್ ಅವರ ಮೂರನೆಯ ಆವೃತ್ತಿಯ ಮುದ್ರಿತ ಗ್ರಂಥವನ್ನೂ ಕರ್ಣಾಟಕ ಸಾಹಿತ್ಯ ಪರಿಷತ್ತಿನ ಮುದ್ರಣವನ್ನೂ

ಆರಾಜ್ಯೈನ ಪುಸ್ತಕ ಭಂಡಾರದ ತಾಳೆಯೋಲೆಯ ಪ್ರತಿಯನ್ನೂ ಉಪಯೋಗಿಸಿಕೊಂಡಿದೆ. ಈ ಮುದ್ರಣಕ್ಕೆ ಈಗ ದಿವಂಗತರಾಗಿರುವ ಎಚ್. ಚೆನ್ನಕೇಶವ ಅಯ್ಯಂಗಾರ್ಯರು ೧೧೨ ಪುಟಗಳಷ್ಟು ದೀರ್ಘವಾದ 'ಅವತರಣಿಕೆ'ಯನ್ನು ಬರೆದು ಅಭ್ಯಾಸಿಗಳಿಗೆ ತುಂಬ ಉಪಕಾರಮಾಡಿದ್ದಾರೆ. ಗ್ರಂಥಾಂತ್ಯದಲ್ಲಿ ಸೂತ್ರ ಪ್ರಯೋಗ ಮುಂತಾದುವುಗಳ ಅಕಾರಾದಿಗಳನ್ನೊಳಗೊಂಡ ೯ ಪರಿಶಿಷ್ಟಗಳಿಂದ ಈ ಮುದ್ರಣದ ಪ್ರಯೋಜನವು ಮಿಗಿಲಾಗಿದೆ. ಇಲ್ಲಿ ಕೊಟ್ಟಿರುವ ವೃತ್ತಿಗಳು ಕೇಶಿರಾಜನವಲ್ಲವಾದ್ದರಿಂದ ಪ್ರಕೃತ ಪರಿಷ್ಕರಣಕ್ಕೆ ಹೆಚ್ಚಿನ ಸಹಾಯವಾಗುವಂತಿಲ್ಲ. ಪ್ರಯೋಗಗಳ ವಿಷಯದಲ್ಲಿ "ಕೇಶಿರಾಜನು ಕೊಟ್ಟಿರುವ ಉದಾಹರಣೆಗಳಲ್ಲಿ ಕೆಲವನ್ನು ಲಿಂಗಣಾರಾಧ್ಯನು ಮಾರ್ಪಡಿಸಿರುವನು ; ಕೆಲವನ್ನು ಹೆಚ್ಚಾಗಿ ಕೊಟ್ಟಿರುವನು ; ಕೆಲವನ್ನು ಬಿಟ್ಟಿರುವನು" ಎಂದು ಅವತರಣಿಕೆಯಲ್ಲಿ (ಪುಟ ೪) ಹೇಳಿದೆ. ಈ ಕಾರಣದಿಂದ ಇಲ್ಲಿನ ಪ್ರಯೋಗಗಳ ಮತ್ತು ಅವುಗಳ ಪಾಠದ ವಿಷಯದಲ್ಲಿ ಅನಿರ್ದಿಷ್ಟತೆಯಿದ್ದು ಸಂದೇಹಕ್ಕೆ ಅವಕಾಶವುಂಟಾಗಿದೆ. ಪ್ರಕೃತ ಮುದ್ರಣದಲ್ಲಿ ಅವಶ್ಯಕವಾದ ಎಡೆಗಳಲ್ಲಿ ಮಾತ್ರ ಇಲ್ಲಿನ ಪ್ರಯೋಗಗಳ ಪಾಠವನ್ನು ಗಮನಿಸಿದೆ.

## ಮಾತೃಕೆಗಳು

ಪ್ರಸಕ್ತ ಮುದ್ರಣಕ್ಕೆ ನಾಲ್ಕು ಪ್ರತಿಗಳನ್ನು ಬಳಸಿಕೊಂಡಿದೆ. ಎರಡು ಓಲೆಯವು ; ಇನ್ನೆರಡು ಮುದ್ರಿತವಾದುವು. ಇವಕ್ಕೆ ಕ್ರಮವಾಗಿ (ಕ), (ಖ), (ಕಿ), (ಪ), ಎಂಬ ಸಂಕೇತಗಳನ್ನು ಕೊಟ್ಟಿದೆ.

(ಕ) ಈ ಓಲೆಯ ಪ್ರತಿ ಶ್ರವಣಬೆಳಗೊಳದಿಂದ ಬಂದದ್ದೆಂದು ತಿಳಿದು ಬರುತ್ತದೆ. ಇದರಲ್ಲಿ ೯೮ ಓಲೆಗಳಿವೆ ; ೩೩ನೆಯ ಮತ್ತು ೭೮ನೆಯ ಓಲೆಗಳಲ್ಲಿ ಒಂದು ಮಗ್ಗುಲಲ್ಲಿ ಮಾತ್ರ ಬರಹವಿದೆ. ಓಲೆಯ ಉದ್ದ ೧೧'', ಅಗಲ ೧.೮'' ಪ್ರತಿ ಓಲೆಯ ಒಂದೊಂದು ಪಾರ್ಶ್ವದಲ್ಲಿ ೭ ರಿಂದ ೧೦

ಪಂಕ್ತಿಗಳಿವೆ. ಪ್ರತಿ ಪಂಕ್ತಿಯಲ್ಲೂ ಅಕ್ಷರ ಸಂಖ್ಯೆ ೪೩ರಿಂದ ೬೮ರಷ್ಟು. ಗ್ರಂಥದ ಆರಂಭದಲ್ಲಿ "ಶ್ರೀವೀತರಾಗಾಯನಮಃ। ಕರ್ಣಾಟಕ ಶಬ್ದಮಣಿ ದರ್ಪಣ ಬರುವುದಕ್ಕೆ ಶುಭಮಸ್ತು । ನಿರ್ವಿಘ್ನಮಸ್ತು । ಶ್ರೀ ಸರಸ್ವತ್ಯೈ ನಮಃ।" ಎಂದಿದ್ದು ಅನಂತರ ಸೂತ್ರಗಳ ಬರೆವಣಿಗೆ ಬರುತ್ತದೆ. ಇದರಲ್ಲಿ ನಿಟ್ಟೂರ ಸಂಜಯ್ಯನ ಟೀಕು ಇಲ್ಲ. ಅಂತ್ಯದಲ್ಲಿ "ಅವ್ಯಯ ದಿತ್ಥ್ವವಿವರಣ ಮಷ್ಟಮಪ್ರಕರಣಂ ಶ್ರೀ ಶ್ರೀ ಶ್ರೀ" ಎಂದು ಬರುತ್ತದೆ. ಪ್ರತಿಕಾರನ ಹೆಸರನ್ನಾಗಲಿ ಪ್ರತಿಮಾಡಿದ ಕಾಲವನ್ನಾಗಲಿ ತಿಳಿಸಿಲ್ಲ. ಅಕ್ಷರಗಳು ನೇರಾಗಿ ದುಂಡಾಗಿ ಮುದ್ದಾಗಿವೆ.

ಈ ಪ್ರತಿಯ. ಬರವಣಿಗೆಯಲ್ಲಿನ ಕೆಲವು ಅಂಶಗಳನ್ನು ನೋಡ ಬಹುದು.(೧) ರೇಫ ಸಂಯುಕ್ತವನ್ನು ಬರೆಯುವಾಗ ಸಜಾತೀಯದ್ವಿತ್ವ ವನ್ನು ಬರೆದು ಆದಕ್ಕೆ ರವತ್ತನ್ನು(ೡ) ಮಗ್ಗುಲಲ್ಲಿ ಬರೆಯುವುದು ಓಲೆಯ ಪ್ರತಿಗಳ ಸಾಧಾರಣ ರೂಢಿ ಇಲ್ಲಿಯೂ ಇದೆ ; ದರ್ಪ್ಪಣ, ನಿರ್ವ್ವಿಘ್ನ, ನಿರ್ಮ್ಮಳ, ಮೂರ್ತ್ತಿ, ಕಟಕಾಚಾರ್ಯ್ಯ, ಮಲ್ಲಿಕಾರ್ಜ್ಜುನ ಇತ್ಯಾದಿ. ಮುದ್ರಿತ ಪುಸ್ತಕದಲ್ಲಿ ಕೆಳಗಣ ಅಕ್ಷರವನ್ನು ಬಿಟ್ಟಿದೆ (೨) ಅಕಾರವನ್ನು ಬರೆಯುವುದರಲ್ಲಿ ಸರಿಯಾದ ಕ್ರಮವಿಲ್ಲ. ಇರಬೇಕಾದ ಕೆಲವೆಡೆಗಳಲ್ಲಿ ಇಲ್ಲ ; ನೆರಕೇಳ್ದು (೬೯–೧) ಮಿರುಗುತ್ತಿರ್ಪ್ಪ (೬೬–೨), ಪೊರ ಅಡಿ (೬೮ ಪ್ರಯೋಗ), ಆರಿಕೆಯುದಂತತೆ (೬೮), ಇತ್ಯಾದಿ. ರೇಫಕ್ಕೆ ಬದಲಾಗಿ ಕೆಲವೆಡೆ ಆಕಾರ ಬಂದಿದೆ ; ಆಲಿವಟಿಲ್ಗಳುಂ (೧೨೬–೩). ಎರಡಯ್ದುಗಳ್ (ಸೂ. ೧೫೦), ಕುಱುಳ್ಗಳ ಕರ್ಪು (೧೫೦), ಇ. ಸಂಸ್ಕೃತ ಶಬ್ದದ ರೇಫಗೆ ಕೆಲವೆಡೆ ಕ್ವಚಿತ್ತಾಗಿ ಆಕಾರಬಂದಿದೆ; ಕುಱುಪ್ರಭು, (೨೫೨) ; ಸಂಸ್ಕೃತದ ಷ್ಟ ಎಂಬಕ್ಷರಕ್ಕೆ ಲ್ಪ ಬರೆದಿದೆ ; ಪುಲ್ಪವೃಷ್ಟಿ (೧೯೯) (೩) ಬಿಕಾರವನ್ನೂ ಸರಿ ಯಾಗಿ ಬರೆದಿಲ್ಲ. ಇದಕ್ಕೆ ಪ್ರತಿಯಾಗಿ ಹಲವೆಡೆ ಳಕಾರವಿದೆ ; ಅಳಿಯದ ಪಕ್ಷಂ (೬೨), ಗಿರಿಯತ್ತಣುಂದಿಳಿದಂ (೬೨) ಇ ಕೆಲವೆಡೆ ಅಕಾರ ಹಾಕಿದೆ ; ಬೀಲು, ಬಾಲು, ತೇಲು (೫೮–ಪ್ರ) ಇ. ಅಕಾರದ ಬರವಣಿಗೆಯಲ್ಲೇ ಮೇಲಿನ ಅವ್ಯವಸ್ಥೆಯಿರುವುದರಿಂದ ಈ ಪ್ರತಿಯು ಗ್ರಂಥನಕಾಲ ೧೭ನೆಯ ಶತಮಾನಕ್ಕಿಂತ ಹಿಂದೆ ಹೋಗಲಾರದು.

ಈ ಪ್ರತಿಯಲ್ಲಿನ ಸೂತ್ರಗಳ ಪಾಠ ಸಾಮಾನ್ಯವಾಗಿ ಕಿಟ್ಟೆಲ್ ಅವರ ಮತ್ತು ಪರಿಷನ್ಮುದ್ರಣದ ಪಾಠವಂತೆಯೇ ಇದೆ. ಕೆಲವೆಡೆ ಪಾಠಾಂತರಗಳುಂಟು ; ೫, ೬, ೨೨, ೨೮, ೪೬, ೫೦ ಇ ಈ ಪಾಠಾಂತರಗಳಿಂದ ಸೂತ್ರದ ಮುಖ್ಯಾರ್ಥದಲ್ಲಿ ವ್ಯತ್ಯಾಸ ಕಾಣದೆ ಇರುವುದರಿಂದ ಇದನ್ನು ಅಮುಖ್ಯವೆಂದು ಭಾವಿಸಬಹುದು. ವೃತ್ತಿಪ್ರಯೋಗಗಳ ವಿಷಯದಲ್ಲಿ ಮಾತ್ರ ಹೆಚ್ಚಿನ ಬದಲಾವಣೆಗಳಿವೆ. ಈ ಅಂಶವನ್ನು ಮುಂದೆ ವಿವರವಾಗಿ ಹೇಳಿದೆ.

ಕೆಲವು ಕಡೆಗಳಲ್ಲಿ ಇತರ ಪ್ರತಿಗಳ ಪಾಠಗಳನ್ನು ಓಲೆಯ ಅಂಚಿನಲ್ಲಿ ಬರೆದಿರುವುದು ಕಾಣುತ್ತದೆ; ಸೂತ್ರ ೩೪೮ರ ಪ್ರಯೋಗ ೨, ೩ ರಲ್ಲಿ 'ತಳಿರಂತೆಂದು ಪಾಠಾಂ', 'ಬಲ್ಲಿದರೊಳರೆ ಎಂದು ಪಾಠಂ' ಎಂದಿದೆ. ಅಂಚಿನಲ್ಲಿರುವ ಅಕ್ಷರಗಳಿಗೂ ಓಲೆಯ ಮೈಯಲ್ಲಿರುವ ಅಕ್ಷರಗಳಿಗೂ ಗಾತ್ರದಲ್ಲಿ ಹೊರತಾಗಿ ಆಕಾರದಲ್ಲಿ ಏನೂ ವ್ಯತ್ಯಾಸವಿಲ್ಲದಿರುವುದರಿಂದ, ಇವೆರಡನ್ನೂ ಬರೆದ ಕೈ ಒಂದೇ ಎಂದು ಹೇಳಬಹುದು.

ಈ ಪಾಠಾಂತರಗಳು ಈ ಪ್ರತಿಕಾರನಿಗೆ ಹೇಗೆ ಲಭಿಸಿದುವು ? ಇದು ಮೂರು ತೆರನಾಗಿರಬಹುದು, (೧) ಈ ಪ್ರತಿಯ ಮೂಲಮಾತೃಕೆಯಲ್ಲಿ ಈ ಬೇರೆಪಾಠಗಳು ಓಲೆಯ ಅಂಚಿನಲ್ಲಿ ಲಿಖಿತವಾಗಿರಬಹುದು. ಅದರಂತೆ ಈ ಪ್ರತಿಕಾರ ಬರೆದಿರಬೇಕು. ಇದು ಅಸಂಭವವಲ್ಲವಾದರೂ ಸಹಜವಲ್ಲ. ಪ್ರತಿಕಾರನು ಮೂಲದ ಅಂಚಿನ ಬರವಣಿಗೆಗಳನ್ನು ಓಲೆಯ ಒಡಲಿನಲ್ಲಿಯೇ ಸೇರಿಸಿಕೊಂಡು ಬರೆಯುವುದು ಸ್ವಾಭಾವಿಕ. ಇದರಿಂದ ಅವನ ಕ್ಲೇಶ ಕಡಿಮೆಯಾಗುತ್ತದೆ. ಈ ಕಾರಣದಿಂದ ಈ ಅನುಮಾನವನ್ನು ಬಿಡಬಹುದು. (೨) ಪ್ರಕೃತ ಪ್ರತಿಕಾರನು ತನ್ನ ಪ್ರತಿಯನ್ನು ಬೇರೊಂದು ಪ್ರತಿಯೊಡನೆ ಹೋಲಿಸಿ ನೋಡಿ ಪಾಠಾಂತರಗಳನ್ನು ಗುರುತು ಹಾಕಿಕೊಂಡಿರಬಹುದು. ಹೀಗಾಗಿದ್ದರೆ ಪಾಠಾಂತರಗಳ ಸಂಖ್ಯೆ ಈಗ ಇರುವುದಕ್ಕಿಂತ ಇನ್ನೂ ಅಧಿಕವಾಗಿರಬೇಕಿತ್ತು. ಹಾಗೇನೂ ಇಲ್ಲದಿರುವುದರಿಂದ ಈ ಊಹೆಯೂ ಅಸಮರ್ಪಕ. (೩) ಪ್ರತಿಕಾರನು ತನ್ನ ಪ್ರತಿಯನ್ನು ಪಾಠ ಹೇಳಿಸಿಕೊಳ್ಳುವಾಗ

ಉಪಯೋಗಿಸುತ್ತಿದ್ದಿರಬಹುದು. ಉಪಾಧ್ಯಾಯನು ಪಾಠಭೇದಗಳುಂಟೆಂದು ಅವನ್ನು ಹೇಳಿದಾಗ ವಿದ್ಯಾರ್ಥಿ ತನ್ನ ಪ್ರತಿಯಲ್ಲಿ ಅದನ್ನು ಬರೆದುಕೊಂಡಿರಬಹುದು. ಇದು ತುಂಬ ಸಂಭವ. ಕೆಲವು ಅಪೂರ್ವಶಬ್ದಗಳಿಗೆ ಅಂಚಿನಲ್ಲಿ ಅರ್ಥ ಬರೆದಿರುವುದು (ಉದಾ. ಪುಟ ೧೪೫, ಅ, ಟಿ.) ಈ ಊಹೆಗೆ ಪೋಷಕ. ಅಲ್ಲದೆ ಓಲೆಯಲ್ಲಿ ಬರೆದಿರುವ ಪಂಕ್ತಿಗಳ ಸಂಖ್ಯೆ ಒಂದೇ ಸಮನಾಗಿಲ್ಲ ದಿರುವುದು, ಅಕ್ಷರಗಳ ಸಂಖ್ಯೆಯಲ್ಲೂ ಗಾತ್ರದಲ್ಲೂ ವ್ಯತ್ಯಾಸವಿರುವುದು, ಎರಡು ಓಲೆಗಳ ಒಂದು ಪಾರ್ಶ್ವದಲ್ಲಿ ಬರೆಯದೆ ಬಿಟ್ಟಿರುವುದು, ಗ್ರಂಥದ ಕೊನೆಯಲ್ಲಿ ಪ್ರತಿಮಾಡಿದವನ ಮತ್ತು ಮಾಡಿಸಿಕೊಂಡವನ ಹೆಸರುಗಳಿಲ್ಲ ದಿರುವುದು—ಇವನ್ನೆಲ್ಲ ನೋಡಿದರೆ ಈ ಪ್ರತಿಯ ಲೇಖಕ ವೃತ್ತಿಯಿಂದ ಲಿಪಿಕಾರನಲ್ಲವೆಂದೂ ಒಂದೇ ಪಟ್ಟಿಗೆ ಕುಳಿತು ಬರೆಯದೆ ಭಾಗಶಃ ಗ್ರಂಥ ವನ್ನು ಬರೆದವನೆಂದೂ ಸ್ವಂತ ಉಪಯೋಗಕ್ಕಾಗಿ ಅಂದಂದಿನ ಪಾಠಕ್ಕೆ ಎಷ್ಟು ಬೇಕೋ ಅಷ್ಟನ್ನು ಬರೆದುಕೊಂಡ ವಿದ್ಯಾರ್ಥಿಯೆಂದೂ ಊಹಿಸ ಬಹುದು.

(ಖ) ಈ ಓಲೆಯ ಪ್ರತಿ ಯಾರಿಂದ ಯಾವಾಗ ನನ್ನ ಬಳಿಗೆ ಬಂತೊ ನೆನಪಿಲ್ಲ. ಈ ಕಟ್ಟಿನಲ್ಲಿ 'ನಾಚಿರಾಜೀಯ'ವೆಂಬ ಅಮರಕೋಶದ ಕನ್ನಡ ವ್ಯಾಖ್ಯಾನವೂ ಇದೆ ; ಇದು ಅಸಮಗ್ರ. ಓಲೆ ೧–೮೨ ರಲ್ಲಿ 'ಶಬ್ದ ಮಣಿದರ್ಪಣ' ಲಿಖಿತವಾಗಿದೆ. ಓಲೆಗಳ ಅಳತೆ ೧೧.೩; ೨.೧. ಒಂದೊಂದು ಪಾರ್ಶ್ವದಲ್ಲಿ ೧೨–೧೩ರ ವರೆಗೆ ಪಂಕ್ತಿಗಳಿವೆ ; ಪಂಕ್ತಿಯಲ್ಲಿ ಸರಾಸರಿ ೪೭ ರಿಂದ ೫೮ರ ವರೆಗೆ ಅಕ್ಷರಗಳಿವೆ. ಅವು ದುಂಡಾಗಿರದೆ ಬಲಗಡೆಗೆ ಸ್ವಲ್ಪ ವಾಲಿಕೊಂಡಿವೆ. ಓದುವುದಕ್ಕೇನೂ ಕ್ಲೇಶವಾಗುವುದಿಲ್ಲ. ಅಕಾರ ಬಿಕಾರ ಗಳನ್ನು ಬರೆಯುವುದರಲ್ಲಿ ನಿರ್ದಿಷ್ಟವಾದ ವ್ಯವಸ್ಥೆಯೇನೂ ಇಲ್ಲ. ಕೆಲವೆಡೆ ಕುಳಕ್ಕೆ ಬಿಕಾರವನ್ನೂ, ಬಿಕಾರಕ್ಕೆ ಕುಳವನ್ನೂ ಬರೆದಿದೆ; ಅಬ್ದಿನ (೮೫-೧) ; ಪೇಳಲ್ಪಡುಗುಂ (೬೧), ಅತ್ತಣಿಂದಿಳಿದಂ (೬೨). ಕೆಲವೆಡೆ ಅಕಾರಕ್ಕೆ ಬದಲಾಗಿ ರಕಾರವನ್ನೂ ರೇಫಗೆ ಱಕಾರವನ್ನೂ ಬರೆದಿದೆ ; ಪೊದರ್ (೧೦೧), ನಾಮಲೂಥ (೬೨) ; ಮಲದತ್ತಣಿಂದಿಳಿದಂ (೬೨). ಗ್ರಂಥದ

ಆರಂಭದಲ್ಲಿ ಹೀಗಿದೆ. "ಶ್ರೀಗುರು ಬಸವಲಿಂಗಾಯ ನಮಃ । ಗ್ರಂಥ ಆಕಾಶಲಿಂಗಮಿತ್ಯಾಹು ಪೃಥ್ವೀತಸ್ಯಾದಿಪೀಠಕಂ । ಆಲಯಂ ಸರ್ವಭೂತಾನಾಂ ಲಯನಾಂ ಲಿಂಗಮುಚ್ಯತೇ । ಸರ್ವಲೋಕೋಪಕಾರಾಯ ದೇವಃ ಪರಮೇಶ್ವರಃ ಚರಂತಿ ಶಿಷ್ಟರೂಪೇಣಾಂ ನಮಸ್ತೇ ಜಂಗಮಾತ್ಮನೇ ॥ ಶ್ರೀ ಗುರುಬಸವಲಿಂಗಾಯ ನಮಃ । ಇದು ಪಾರಮೇಶ್ವರರಾಂಘ್ರಿ ಸರೋರುಹ। ಶಬ್ದಮಣಿದರ್ಪಣಕ್ಕೆ ಇದಾದ ಮೇಲೆ ಶ್ರೀ ವಾಗ್ದೇವಿಗೆ....ಎಂಬ ಪದ್ಯದಿಂದ ಗ್ರಂಥಲೇಖನ ತೊಡಗಿದೆ. ಅಂತ್ಯದಲ್ಲಿ "ಪ್ರಯೋಗಸಾರಮೆಂಬ ಶಬ್ದಾರ್ಥನಿರ್ಣಯ ಸಂಪೂರ್ನಂ । ಶಬ್ದಮಣಿದರ್ಪಣಂ ಸಂಪೂರ್ಣಂ । ಮಂಗಳ ಮಹಾಶ್ರೀ" ಎಂದಿದೆ. ಗ್ರಂಥ ಮುಗಿದ ಮೇಲೆ ೮೨ನೆಯ ಓಲೆಯ ೪ನೆಯ ಪಂಕ್ತಿಯಿಂದ ೮೪ನೆಯ ಓಲೆಯ ಎರಡನೆಯ ಪಕ್ಕದ ಅಂತ್ಯದವರೆಗೂ ಬರವಣಿಗೆ ಇದೆ. ಇದರಲ್ಲಿ ಕ್ರಮದ ಸೂತ್ರಗಳಲ್ಲಿ ಬರುವ "ಸಮುಚ್ಚಯವಶದಿಂ" ಎಂಬ ಸಮುಚ್ಚಯವಶದಿಂ" ಎಂಬ ಸಮುಚ್ಚಯಾದಿಗಳನ್ನು ಕ್ರೋಢೀಕರಿಸಿದೆ. "ಕ್ರಮದಿಂದೆ ಸಂಧಿನಾಮಂ ಸಮುಚ್ಚಯ ವಶದಿಂ । ಸಂಜ್ಞಾಪ್ರಕರಣಂ ರೂಢಪದ ಪ್ರಕರಣಂ ಎಂಟು" ಎಂದು ಆರಂಭವಾಗಿದೆ. ಕೊನೆಯಲ್ಲಿ "ಅಲೋಕಂ । ಅಳಕಂ । ಈ ಶಬ್ದಂಗಳು ರತ್ವಕ್ಕಂ ಲಳಮುಂಯೆಂಬ ಸಮುಚ್ಚಯದಿಂ ಲತ್ವಕ್ಕಂ ರತ್ವಳತ್ವಕ್ಕಂ ರತ್ವ ಲತ್ವಕ್ಕಂ ಲತ್ವಲತ್ವಕ್ಕಂ ಲತ್ವಮುಂಟು । ಸಮುಚ್ಚಯ ಸಂಪೂರ್ನ್ನಮಂಗಳ ಮಹಾ ೧೮೮೧" ಎಂದಿದೆ. ಪ್ರತಿಯ ಲೇಖನ ಕಾಲವಾಗಲಿ ಲಿಪಿಕಾರನ ಹೆಸರಾಗಲಿ ಬರೆದಿಲ್ಲ. ಲಿಪಿಕಾರನ ಪ್ರಮಾದಗಳು (ಕ) ಪ್ರತಿಯಲ್ಲಿರುವುದಕ್ಕಿಂತಲೂ ಸ್ವಲ್ಪ ಹೆಚ್ಚಾಗಿಯೇ ಇವೆ. ಪ್ರಯೋಗಗಳನ್ನು ಬರೆಯುವಾಗ ಅವುಗಳನ್ನು ಹಲವೆಡೆ ಮೊಟಕುಮಾಡಿ ಬರೆದಿದೆ. (ಕ) ಪ್ರತಿಗೂ ಇದಕ್ಕೂ ಕ್ವಚಿತ್ತಾಗಿ ಪಾಠಸಾಮ್ಯ ಅಲ್ಲಲ್ಲಿ ಉಂಟು. ವೃತ್ತಿಗಳು (ಕಿ), (ಪ) ಗಳಲ್ಲಿರುವುದಕ್ಕಿಂತ ವಿಸ್ತಾರವಾಗಿ ಹೇಳಿವೆ. ಇದರ ವಿಷಯ ಮುಂದೆ ಬರುತ್ತದೆ (ಕ) ದ ಹಾಗೆಯೇ ಇದರಲ್ಲೂ ನಿಟ್ಟೂರ ಸಂಜಯ್ಯನ ವ್ಯಾಖ್ಯಾನವಿಲ್ಲ ; ಪದಚ್ಛೇದ ಅನ್ವಯಗಳೂ ಇಲ್ಲ.

(ಕಿ) ಇದು ಕಿಟ್ಟೆಲ್ ಅವರ ಪರಿಷ್ಕರಣದ ಮೂರನೆಯ ಆವೃತ್ತಿಯ

ಮುದ್ರಿತ ಪ್ರತಿ ; ೧೯೨೦ ರಲ್ಲಿ ಪ್ರಕಟವಾದದ್ದು. ಈ ಪ್ರತಿಯ ಪಾಠವನ್ನೂ ಕ್ರಮವನ್ನೂ ಪ್ರಕೃತ ಮುದ್ರಣಕ್ಕೆ ಸಾಮಾನ್ಯವಾಗಿ ಆಧಾರವಾಗಿ ಸ್ವೀಕರಿಸಿದೆ.

(ಪ) ಇದು ೧೯೨೦ ರಲ್ಲಿ ಕರ್ಣಾಟಕ ಸಾಹಿತ್ಯ ಪರಿಷತ್ತಿನಿಂದ ಪ್ರಕಟವಾದ ಮುದ್ರಿತ ಪ್ರತಿ. ಇದರ ವಿಚಾರವಾಗಿ ಹಿಂದೆಯೇ ಹೇಳಿದೆ. ಈ ಪ್ರತಿಯಲ್ಲಿ ಸೂತ್ರ ೧೯೧ರ ಪಾಠ ಬೇರೆ ರೀತಿಯಲ್ಲಿದೆ ; ಇದಕ್ಕೆ ಆಧಾರ ಈ ಪ್ರತಿಯ ಪರಿಷ್ಕರಣಕ್ಕೆ ಬಳಸಿರುವ ಎರಡು ಓಲೆಯ ಪ್ರತಿಗಳು. ಈಗ ಬಳಸಿರುವ (ಕ), (ಖ), (ಕಿ), ಪ್ರತಿಗಳಲ್ಲಿ ಈಗ ಇಲ್ಲಿ ಮುದ್ರಿತವಾಗಿರುವ ಹಾಗೆಯೇ ಈ ಸೂತ್ರದ ಪಾಠವುಂಟು.

## ಪಾಠ ಸಮಸ್ಯೆಗಳು

'ಶಬ್ದಮಣಿದರ್ಪಣ'ದ ಪ್ರತಿ, ಕೇಶಿರಾಜನ ಸ್ವಹಸ್ತದಿಂದ ಲಿಖಿತವಾದದ್ದು. ಈಗ ಅಲಭ್ಯವೆಂಬ ವಿಷಯ ಸರ್ವವಿದಿತ. ಅದು ಸಿಕ್ಕಿದರೆ ಆ ಗ್ರಂಥದ ಪಾಠ ವಿಷಯದಲ್ಲಿ ಯಾವ ಸಮಸ್ಯೆಗೂ ಅವಕಾಶವಿರುತ್ತಿರಲಿಲ್ಲ. ಅದು ಸಿಕ್ಕದಿರುವುದು ಹಾಗಿರಲಿ, ಅದರಿಂದ ನೇರಾಗಿ ನಕಲಾದ, ಕಾಲದ ದೃಷ್ಟಿಯಿಂದ ಅದಕ್ಕೆ ಸಮೀಪತಮವಾದ ಪ್ರತಿ ಯಾವುದೂ ಇದುವರೆಗೂ ಬೆಳಕಿಗೆ ಬಂದಿಲ್ಲ. ಈಗ ದೊರೆಯುವ ಮಾತೃಕೆಗಳೆಲ್ಲ ಆ ಮೂಲ ಪ್ರತಿಯ ನಕಲುಗಳ ಮರುನಕಲುಗಳ ಪ್ರತಿನಕಲುಗಳ ಒಳಿನಕಲುಗಳು ; ಗ್ರಂಥ ರಚಿತವಾದ ಕಾಲದಿಂದ ಹಲವು ಶತಮಾನಗಳ ಈಚೆಗೆ ಲಿಖಿತವಾದುವು.[6] ಪ್ರತಿಯಿಂದ ಪ್ರತಿಗೆ ಲೇಖಕಜನಿತ ಪ್ರಮಾದಗಳು ಅಧಿಕವಾಗುತ್ತ ಹೋಗು

---

6. ನನ್ನ ದೃಷ್ಟಿಗೆ ಬಂದ ಶಮದ. ದ ಪ್ರತಿಗಳಲ್ಲಿ ಶಕ ೧೪೭೩ರಲ್ಲಿ ಲಿಖಿತವಾದ ಪ್ರತಿಯೇ ತೀರ ಹಳೆಯದು. ಇದು ಮೂಡಬಿದ್ರಿ ಜೈನಮಠಗಳ ತಾಡಪ್ರತಿಯ ಗ್ರಂಥ ಸಂಗ್ರಹದಲ್ಲುಂಟು (ಪುಟ. ೧೧೦. ನಂಬರು ೭೧). ಇದರ ಉಪಯೋಗ ನನಗೆ ದೊರೆಯಲಿಲ್ಲ.

ವುದು ಸ್ವಾಭಾವಿಕ. ಅಲ್ಲದೆ ಕನ್ನಡನಾಡಿನ ಬೇರೆ ಬೇರೆ ಪ್ರದೇಶಗಳಲ್ಲಿ ಒಂದೊಂದು ತೆರನಾದ ಪಾಠ ಸಂಪ್ರದಾಯ ಪ್ರಚಾರಕ್ಕೆ ಬಂದಿರಬಹುದು. ಈ ಕಾರಣಗಳಿಂದ ನಮಗೆ ಸಿಕ್ಕಿರುವ ಪ್ರತಿಗಳು ಮೂಲಪ್ರತಿಯ ಪಾಠವನ್ನು ಪ್ರತಿಬಿಂಬಿಸುತ್ತವೆ ಎಂದು ನಂಬುವುದು ಹೇಗೆ ? ಇವುಗಳ ಆಧಾರದ ಮೇಲೆ ಪರಿಷ್ಕೃತವಾಗಿರುವ ಯಾವ ಮುದ್ರಿತ ಪ್ರತಿಯ ಪಾಠವೂ ಮೂಲ ಪ್ರತಿಯ ಪಾಠವೆಂದು ಹೇಳುವ ಹಾಗಿಲ್ಲ. ಸಂಪಾದಕನ ತಿದ್ದುಗಳಿಂದ ಸ್ಖಾಲಿತ್ಯಗಳ ಸಂಖ್ಯೆ ಕನಿಷ್ಠ ಪ್ರಮಾಣದಲ್ಲಿರಬಹುದು ; ಇಷ್ಟು ಮಾತ್ರ ಸಾಧ್ಯ. ಈ ಮಾತು ಪ್ರಕೃತ ಮುದ್ರಣಕ್ಕೂ ಅನ್ವಯಿಸುತ್ತದೆ. ಗ್ರಂಥ ಸಂಪಾದನೆಯ ಪರಮೋದ್ದೇಶ ಕವಿ ಲಿಖಿತ ಪ್ರತಿಯ ಪಾಠವನ್ನು ದೊರಕುವ ಸಾಮಗ್ರಿಗಳ ಸಹಾಯದಿಂದ ಕಂಡುಹಿಡಿಯುವುದು ; ಅದು ಸಾಧ್ಯವಾಗದಿದ್ದರೆ ಮೂಲ ಪ್ರತಿಗೆ ಸಮೀಪತಮವಾದ ಪಾಠವನ್ನು ನಿರ್ದೇಶಿಸುವುದು ; ಇವೆರಡೂ ಆಗದೆ ಹೋದಾಗ ಅರ್ಥದ ದೃಷ್ಟಿಯಿಂದ ಸ್ಪಷ್ಟವಾಗಿರುವ, ಸ್ಖಾಲಿತ್ಯಾದಿ ದೋಷಗಳಿಂದ ಆದಷ್ಟು ಮುಕ್ತವಾಗಿರುವ ಪಾಠವೊಂದನ್ನು ಕೊಡುವುದು. ಇವುಗಳಲ್ಲಿ ಕೊನೆಯ ಉದ್ದೇಶ ಈ ಮುದ್ರಣದಲ್ಲಿ ಸ್ವಲ್ಪಮಟ್ಟಿಗೆ ಸಾಧಿತ ವಾಗಿದೆಯೆಂದು ನಂಬಬಹುದು. ಉಳಿದ ಎರಡು ಉದ್ದೇಶಗಳು ಸಾಧ್ಯ ವಾಗದಿರುವುದಕ್ಕೆ ಕೆಲವು ಪಾಠ ಸಮಸ್ಯೆಗಳನ್ನು ಸಮರ್ಪಕವಾಗಿ ಬಿಡಿಸಲಾಗ ದಿರುವುದೇ ಕಾರಣವಾಗಿದೆ. ಅವುಗಳ ಸ್ವರೂಪವನ್ನು ಸ್ವಲ್ಪ ವಿವರಿಸಿದೆ.

'ಶಬ್ದಮಣಿದರ್ಪಣ'ದ ಸೂತ್ರ, ವೃತ್ತಿ, ಪ್ರಯೋಗ–ಈ ಮೂರಕ್ಕೆ ಈ ಸಮಸ್ಯೆಗಳು ಸಂಬಂಧಿಸಿವೆ. ಸೂತ್ರಗಳ ಪಾಠದಲ್ಲಿ ಬಲವಾದ ಸಮಸ್ಯೆಗ ಳಾವುವೂ ಇರುವಂತೆ ಕಾಣುವುದಿಲ್ಲ. ಅಲ್ಲಿ ಇಲ್ಲಿ ಅಲ್ಪವಾದ ಪಾಠಭೇದಗ ಳೇನೋ ಇವೆ ; ೩೪. ೪೨, ೯೮, ೭೦, ೧೫೧, ೧೬೧, ೨೧೪, ೨೨೦, ೨೩೨ ಈ ಸೂತ್ರಗಳನ್ನು ನೋಡಬಹುದು. ಇಲ್ಲಿನ ಪಾಠಭೇದಗಳು ಸೂತ್ರಾರ್ಥ ಗಳನ್ನು ಮಾರ್ಪಡಿಸುವಷ್ಟು ಸಮರ್ಥವಾಗಿಲ್ಲ. ಕೆಲವೆಡೆ ಸೂತ್ರಗಳ ಅನುಪೂರ್ವಿಯಲ್ಲಿ ಸ್ವಲ್ಪ ಹಿಂದುಮುಂದಾಗಿದೆ ; ಇದನ್ನೂ ಪರಿಗಣಿಸ ಬೇಕಾಗಿಲ್ಲ. ಎರಡು ಸೂತ್ರಗಳು ಮಾತ್ರ ಕೇಶಿರಾಜನವಲ್ಲವೆಂದು ತೋರು ತ್ತವೆ. ಸೂತ್ರ ೧೩೨ ನೆಯದು ಇಲ್ಲಿ ಬಳಸಿರುವ (ಕ), (ಖ), ಪ್ರತಿಗಳಲ್ಲಿ

ವೃತ್ತಿಪ್ರಯೋಗಂ ಗಳ್ ಕ, ಖ. ಪ್ರತಿಗಳಲ್ಲಿ ಕಾಣಬರುವುದಿಲ್ಲ ಎಂದು ಬರೆದಿದೆ. ಅಲ್ಲದೆ ಕಿಟ್ಟೆಲ್ ಅವರು ಉಪಯೋಗಿಸಿರುವ ಕೆಲವು ಪ್ರತಿಗಳಲ್ಲೂ "ಈ ಸೂತ್ರ ಲಿಖಿತವಾಗಿಲ್ಲ. ಈ ಕಾರಣದಿಂದ ಇದು ಕೇಶಿರಾಜ ಕೃತವಾದುದೋ ಅನ್ಯಕೃತವಾದುದೋ ಎಂಬ ಸಂದೇಹಕ್ಕೆ ಎಡೆಯಿದೆ. ಕರ್ಮಣಿಪ್ರಯೋಗವನ್ನು ಹೇಳುವ ೨೬೩ನೆಯ ಸೂತ್ರ"ಅನುಕ್ತ ಸೂತ್ರಂ"ಎಂದು ಹೆಸರಾಂತಿದೆ. ಇದೂ ಇದರ ವೃತ್ತಿಪ್ರಯೋಗಗಳೂ ಹಲವು ಓಲೆಯ ಪ್ರತಿಗಳಲ್ಲಿ ದೊರೆಯುವುದಿಲ್ಲ. ಪ್ರಯೋಗಗಳನ್ನು ಕೊಡುವಾಗ ಭಟ್ಟಾಕಳಂಕನ ಶಬ್ದಾನುಶಾಸನದಿಂದ ಸೂತ್ರಗಳನ್ನೂ ಅಲ್ಲಿನ ಉದಾಹರಣೆ ಗಳನ್ನೂ ಉದ್ಧರಿಸಿದೆ. ಸು. ೧೨೬೦ ರಲ್ಲಿದ್ದ ಕೇಶಿರಾಜ ೧೬೦೪ರಲ್ಲಿ ರಚಿತ ವಾದ ಗ್ರಂಥದಿಂದ ಅನುವಾದಿಸುವುದು ಅಸಂಭಾವ್ಯವಾಗಿರುವುದರಿಂದ ಈ ಸೂತ್ರ ವೃತ್ತಿ ಪ್ರಯೋಗಾದಿಗಳನ್ನು ೧೬೦೪ ರಿಂದ ಈಚೆಗೆ ಇದ್ದ ಯಾರೋ ಒಬ್ಬನು—ಬಹುಶಃ ನಿಟ್ಟೂರ ನಂಜಯ್ಯನೇ ಇರಬಹುದು—ಬರೆದು 'ಶಬ್ದಮಣಿದರ್ಪಣ'ದಲ್ಲಿ ಸೇರಿಸಿರಬೇಕೆಂದು ಖಚಿತವಾಗಿಯೇ ತೀರ್ಮಾನಿಸ ಬಹುದು.[7] ಅವನ್ನು ಈ ಮುದ್ರಣದಲ್ಲಿ ಬಿಡಬಹುದಾಗಿತ್ತು. ಆದರೆ ಹಿಂದಿನ ಮುದ್ರಣಗಳ ಸಂಪ್ರದಾಯದಂತೆ ಅವನ್ನು ಇಲ್ಲಿ ಸೇರಿಸಿ ಮುದ್ರಿಸಿದೆ. ಇಷ್ಟು ಹೊರತಾಗಿ ಸೂತ್ರಗಳ ಪಾಠ ಕೇಶಿರಾಜನು ಬರೆದಿದ್ದ ರೂಪದಲ್ಲಿಯೇ ಉಳಿದುಕೊಂಡು ಬಂದಿದೆಯೆಂದು ಸ್ಥೂಲವಾಗಿ ಹೇಳ ಬಹುದು.

ಇದೇ ಮಾತನ್ನು ವೃತ್ತಿಗಳ ವಿಷಯವಾಗಿ ಹೇಳುವ ಹಾಗಿಲ್ಲ. ಒಂದೊಂದು ಗುಂಪಿನ ಪ್ರತಿಗಳಲ್ಲಿ ಅವು ಒಂದೊಂದು ತೆರನಾಗಿರುವಂತೆ ಕಾಣುತ್ತದೆ. ಉದಾಹರಣೆಗೆ, ಇಲ್ಲಿ ಉಪಯೋಗಿಸಿರುವ ಪ್ರತಿಗಳಲ್ಲಿ ಸೂತ್ರ ೭೭ರ ವೃತ್ತಿಯನ್ನು ನೋಡೋಣ :

೧. (ಕ) ಸ್ವರಂಗಳಿದ್ದೊಡಂ ಆದೇಶ ರಹಿತಮಪ್ಪ ವ್ಯಂಜನಂಗಳಿದ್ದೊಡಂ ಪರದೊಳಿರ್ದ್ದ ಪವರ್ಗ್ಗಕ್ಕೆ ಸಮಾಸ ವಿಷಯದೊಳ್‌ವತ್ವಮಕ್ಕು । ಬಹುಳತೆಯಿಂ ವಾಕ್ಯದೊಳಮಕ್ಕುಂ.

---

7 ಶಬ್ದಮಣಿದರ್ಪಣ, ಮದ್ರಾಸ್ ಮುದ್ರಣ, 228 ಅ.ಟಿ. 2ನ್ನು ನೋಡಿ.

(ಖ) ಸಮಾಸಂಗಳೊಳ್ ಪ್ರಸಿದ್ಧಿಯಿಂ ಪೂರ್ವಪದಾಂತ್ಯದೊಳಿರ್ದ ಸಹಜ ಸ್ವರಂಗಳ್ಗೆಯುಂ ಆದೇಶಮಂ ಬೇರ್ಕೆಯ್ದು ಶೊಲಗಿನಿಂದ ನಿಜ ವ್ಯಂಜನಂಗಳ್ಗೆಯುಂ ಪರಮಾಗಿ ಪರಪದ ಪೂರ್ವದೊಳ್‌ನಿಂದ ಪವರ್ಗ ಸ್ಥಾನಕ್ಕೆ ಬಹುಳತೆಯಿಂ ವತ್ವಮಕ್ಕುಂ ಮತ್ತಂ ಕೆಲವು ವಿಭಕ್ತ್ಯಂತಮಾಗಿ ನಿಂದ ಕಾರಕಕ್ಕೆ ಪರದೊಳಿರ್ದ್ದ ಕ್ರಿಯಾವಾಚಕಂಗಳ ಮೊದಲೊಳಿರ್ದ್ದ ಪಕಾರಕ್ಕೆ ವತ್ವಾದೇಶಂ ಪ್ರಚುರತೆಯಿಂ ಸವನಿಸುವುದು.

(ಕಿ). (ಪ). ಸ್ವರಂಗಳಿಂದನಾದೇಶದ ಸಹಜವಾದ ವ್ಯಂಜನಂಗಳಿಂ ಪರದೊಳಿರ್ದ ಪವರ್ಗಕ್ಕೆ ಸಮಾಸ ವಿಷಯದೊಳ್ ವತ್ವಮಕ್ಕುಂ, ಬಹುಳ ಮೆಂಬುದಲುಂ ಕೆಲವಯೊಳಿಲ್ಲ; ವಾಕ್ಯದೊಳಂ ವತ್ವಮುಂಟು.

ಈ ವೃತ್ತಿ ಪಾಠಗಳಲ್ಲಿ (ಕ) (ಕಿ). (ಪ) ಗಳಲ್ಲಿರುವುವು ಸ್ವಲ್ಪ ಹೆಚ್ಚು ಕಡಿಮೆ ಒಂದೇ ಎಂದು ಹೇಳಬಹುದು. 'ಬಹುಳತೆಯಿಂ ವಾಕ್ಯದೊಳಮಕ್ಕುಂ' ಎಂಬ (ಕ) ದಪಾಠ (ಕಿ). (ಪ) ಗಳಲ್ಲಿ ಒಡೆದು ಎರಡು ವಾಕ್ಯಗಳಾಗಿರುವಂತೆ ತೋರುತ್ತದೆ. ಉಳಿದುವು ಅಲ್ಪವಾದ ಪಾಠಭೇದಗಳು. (ಖ) ದ ವೃತ್ತಿ ಮಾತ್ರ ತೀರ ಬೇರೆಯಾಗಿದೆ. ಇಲ್ಲಿ ಸ್ವರ, ವ್ಯಂಜನ ಪವರ್ಗ—ಇವು ಎಂಥವೆಂಬುದನ್ನು ತಿಳಿಸುವ ವಿವರಣಾತ್ಮಕವಾದ ವಿಶೇಷಣಗಳನ್ನು ಹೇರಳ ವಾಗಿ ಬಳಸಿದೆ. ಮುಂದಕ್ಕೆ 'ವಾಕ್ಯದೊಳಂ' ಎಂಬುದರ ವಿವರಣೆ ದೀರ್ಘ ವಾಗಿ ಹೇಳಿದೆ. ಇದನ್ನು ನೋಡಿದರೆ (ಕ). (ಕಿ). (ಪ) ಗಳಲ್ಲಿರುವಂತೆ ಸಂಕ್ಷೇಪವಾದ ವೃತ್ತಿ ಮೊದಲಿಗೆ ಇದ್ದು ವ್ಯಾಕರಣದ ಪರಿಭಾಷೆಯನ್ನು ಬಲ್ಲ ಯಾರೋ ಅದನ್ನು ವಿಸ್ತರಿಸಿ ಬರೆದಿರಬಹುದೆಂಬ ಶಂಕೆ ತಲೆದೋರುತ್ತದೆ ; ಅಥವಾ ವಿವೃತವೃತ್ತಿಯೇ ಮೊದಲಿದ್ದು ಅನಂತರ ಅದನ್ನು ಸಂಕ್ಷೇಪಿಸಿರಲೂ ಬಹುದು. ವೃತ್ತಿಯ ಅಭಿಪ್ರಾಯದಲ್ಲಿ ಹೆಚ್ಚು ಕಡಿಮೆಗಳೇನೂ ಇಲ್ಲ. ಈ ನಾಲ್ಕು ಅಥವಾ ಎರಡು ಬಗೆಯಾಗಿರುವ ವೃತ್ತಿಗಳಲ್ಲಿ ಕೇಶಿರಾಜನು ಬರೆದದ್ದು ಯಾವುದು ಎಂಬುದು ಅನಿರ್ದಿಷ್ಟವಾಗಿಯೇ ಉಳಿಯುತ್ತದೆ.

## 11. ಸೂತ್ರ ೧೬೪ ವೃತ್ತಿಭೇದಗಳು

(ಕ) : ಎಳೆದು ಪಳದಿವಂಬುದಕ್ಕೆ ಪುಲ್ಲಿಂಗದಕಾರಂ ಬರೆ ಮಧ್ಯಾಕ್ಷರಕ್ಕೆ ಹ್ರಸ್ವೇತ್ವಮಕ್ಕುಂ । ಎಳೆಯುಂ । ಪಳೆಯುಂ । ಪಳೆಯುರೆಂದು । ಸ್ತ್ರೀಲಿಂಗದಳ್ ಎಂಬುದು ಪರಮಾದೊಡಕ್ಕುಂ । ಎಳೆಯೊಳ್ ಎಳೆಯುಳಿರು ತೆನ್ನ ಪಕ್ಕದೊಳೆಳಸಿ ಮನೋಜಾತರೂಪ ತಾನೇ। ಅದಲ್ಲದೆಯುಂ ಸ್ತ್ರೀಲಿಂಗ ದೆಳ್ ಪಱಿಮಾದೊಡೆ ಗುಣ ವಚನದುಕಾರದೊಳೆ ತದ್ಧಿತದೊಳ್ ಲೋಪ ಮುಂಟಾಗಿ, ಕಿಱಿಯಳ್ । ಪಿರಿಯಳ್ । ಅಸಿಯಳ್ । ನಿಡಿಯಳೆಂದುಂಟು । ಬಱಿದುಯೆಂಬ ಶಬ್ದದ ಱುಕಾರಕ್ಕುಕಾರಾದೇಶವಾಗಿ ಬಱುವನೆಂದಾಯ್ತು ಪೊಸತೆಂಬುದಱ ತುಕಾರಕ್ಕ ಬಿಂದುವೆರಸು ಬಕಾರದೇಶಂ । ಪೊಸಂಬನೆಂದು ಪ್ರಯೋಗಂ । ವಿಚಾರಿಸದುದಿಂತೆ[8] ಪೊಸಂಬ ರೊತ್ತೆಯುಂ ಕೊಳ್ವದು ತಕ್ಕುದಲ್ತು । ಬಹಳ ಗ್ರಹಣದಿಂ ಪೊಸಬನೆಂದುಂಟು ಪೊಸಬ ನಿದಾವನಾದ ಪನೊ ಕಂಡೞುದಂತೆ ಪೊಲೆಂದುಃಕಂಡೆನೀ ।[9]

(ಖ) : ಎಳದು ಪಳದು ಎಂಬಿವರ್ಕೆ । ಪುಲ್ಲಿಂಗದ । ಅಕಾರಂ ಬರೆ ಮಧ್ಯಾಕ್ಷರಕ್ಕೆ । ಹ್ರಸ್ವ ಮಪ್ಪೇತ್ವಮಕ್ಕುಂ । ಬಱ–ದಪೆಂದೊಳರುವ ರಿಕಾರ ಬ ಶಬ್ದದ ಇಕಾರಕ್ಕೆ ಅಕಾರದೇಶಮಕ್ಕುಂ । ಪೊಸತೆಂಬುದರ ತುಕಾರಕ್ಕೆ । ಬಿಂದುಮೆರಸ ಬಕಾರಂ । ಪ್ರ । ಎಳೆಯುಂ । ಪಳೆಯುಂ । ಎಳೆಯುಳ್ । ಪಳೆಯುಳ್ । ಎಂದು ಸ್ತ್ರೀಲಿಂಗದ ಅಳೆ ಪರಮಾದೊಡೆ । ಗುಣವಚನದ ದುಕಾರದೊಳ್ ತದ್ಧಿತದೊಳ್ ಲೋಪಮುಂಟಾಗಿ। ಕಿರಿಯಳ್ ಪಿರಿಯಳ್ । ಅಸಿಯಳ್ । ನಿಡಿಯಳೆಂದುಂಟು । ಬಱುದೆಂಬಶಬ್ದದ ಱುಕಾರದೊಳಗಿರ್ದ್ದ । ಇಕಾರಕ್ಕೆ । ಉಕಾರಾದೇಮಾಗಿ । ಬಱುವನೆಂ

---

8. ಬಿಡಬೇಕಾದ ಅಕ್ಷರದ ಮೇಲೆ ಒಂದು ಸಣ್ಣ ಗೆರೆಹಾಕುವುದು ಓಲೆಯ ಪ್ರತಿಗಳಲ್ಲಿ ರೂಢಿ.

9. ಈ ಪ್ರಯೋಗ ನೇಮಿಚಂದ್ರನ ಲೀಲಾವತಿಯದು (೨.೧೫). (ಕ) ಪ್ರತಿಯ ಅಧಿಕ ಪ್ರಯೋಗಗಳಲ್ಲಿ ಕೆಲವು ಹೀಗೆಯೇ 'ಲೀಲಾವತಿ' ಯಿಂದ ಉದ್ಧೃತವಾಗಿವೆ.

ದಾಯ್ತು । ಪ್ರ । ವಿಚಾರಿಸದಂತೆ ಪೊಸಂಬರೊತ್ತೆಯುಂ । ಕೊಳ್ವುದು ತಕ್ಕುದಲ್ತು ॥ ೮೨ ॥ (ಕಿ), (ಪ) ಎಳದು ಪಱಿದು ಎಂಬ ಶಬ್ದಂಗಳ್ಗೆ ಪುಲ್ಲಿಂಗದಕಾರಂ ಬರೆ ಮಧ್ಯಕ್ಕೆ ಹ್ರಸ್ವಮಪ್ಪೆತ್ವ ಮಕ್ಕುಂ ಬಱಿದೆಂಬ ಶಬ್ದದ ಱಕಾರಕ್ಕೆ ಉಕಾರಾದೇಶಂ ; ಪೊಸತೆಂಬುದಱ ತುಕಾರಕ್ಕೆ ಬಿಂದು ವೆರಸು ಬಕಾರಾದೇಶಮಕ್ಕುಂ.

ಮೇಲಿನ ವೃತ್ತಿಪಾತಗಳಲ್ಲಿ(ಕ) ಪ್ರತಿಯದು ತುಂಬ ಗಮನಾರ್ಹ : (೧) ಒಂದಕ್ಕಿಂತ ಹೆಚ್ಚಾದ ವ್ಯಾಕರಣ ಪ್ರಕ್ರಿಯೆಗಳು ವೃತ್ತಿಯಲ್ಲಿ ಪ್ರತಿಪಾದಿತವಾಗಿದ್ದಾಗ ಅವುಗಳನ್ನು ಹೇಳುವ ವಾಕ್ಯಗಳನ್ನು ಬೇರ್ಪಡಿಸಿ ಒಂದೊಂದರ ಕೆಳಗೆ ಅದಕ್ಕೆ ಕೊಟ್ಟಿರುವ ಪ್ರಯೋಗಗಳನ್ನು ಬರೆದಿರುವುದು ಇಲ್ಲಿ ಕಾಣುತ್ತದೆ. ಈ ಪ್ರತಿಯು ಬಹುಸಂಖ್ಯಾಕ ವೃತ್ತಿಗಳಲ್ಲಿ ಈ ಕ್ರಮವನ್ನು ಅನುಸರಿಸಿದೆ. ಕಿಟ್ಟೆಲ್ ಅವರು ಉಪಯೋಗಿಸಿದ ಪ್ರತಿಗಳೊಂದರಲ್ಲಿ. ಹೀಗೆಯೇ ವೃತ್ತಿಯನ್ನು ಸೀಳಿ ಪ್ರಯೋಗಗಳನ್ನು ಬರೆದಿದೆ. ಇದು ಬಹುಶಃ ವೃತ್ತಿಯ ಪ್ರಾಚೀನತೆಗೆ ಕುರುಹೆಂದು ಅವರ ಅಭಿಪ್ರಾಯ.[10] (೨) ಅಚ್ಚಿನ ಪ್ರತಿಗಳಲ್ಲಾಗಲಿ ಅವಕ್ಕೆ ಮಾತೃಕೆಗಳಾದ ಪ್ರತಿಗಳಲ್ಲಾಗಲಿ ದೊರೆಯದಿರುವ ಕಾರಣದಿಂದ ಹೊಸದಾಗಿ ಯಾರೋ ಸೇರಿಸಿದ್ದೆಂದು ಹೇಳಬಹುದಾದ ವೃತ್ತಿ ಭಾಗಗಳೂ ಪ್ರಯೋಗಗಳೂ ಇಲ್ಲಿವೆ (ಪುಟ ೧೨೬–ಅ.ಟಿ. ೧ ಪುಟ ೧೩೧, ಅ.ಟಿ. ೧ ; ಪುಟ ೯೩ ಅ.ಟಿ. ೧) ಈ ಪ್ರಯೋಗಗಳನ್ನು ನೇಮಿಚಂದ್ರನ 'ಲೀಲಾವತಿ' ಯಿಂದ (೨–೫೧ ; ೬–೭) ಆರಿಸಿರುವುದರಿಂದಲೂ ಇತರ

---

10 "Another sign of its originality and probably antiquity is that, at least often, the different rules of a gloss, unlike those of the glosses of the other manuscripts, (except M and M.B.) are not compressed into one sentence, but given separately as headings to the instances. "1872 Ed., Preface III.

ಸಂದರ್ಭಗಳಲ್ಲೂ ಅದೇ ಕಾವ್ಯದಿಂದ (೨.೫೭–ಸೂ. ೧೧೪ ಅ.ಟಿ. ೨, ೧–೧೧–ಸೂ. ೨೨೮–೨) ಪ್ರಯೋಗಗಳನ್ನು ತೆಗೆದಿರುವುದರಿಂದಲೂ ಇವನ್ನೂ ಕೇಶಿರಾಜನೇ ಬರೆದಿರಬಹುದೆಂದು ಹೇಳುವುದಕ್ಕೂ ಎಡೆಯಿದೆ. (ಇ) ವೃತ್ತಿಯಲ್ಲಿ ಕೇಶಿರಾಜನನ್ನು ಖಂಡಿಸಿರುವ ವಾಕ್ಯಗಳೂ ಉಂಟು : ಸೂತ್ರ ೩೦೪ನ್ನು ನೋಡಿ. "ಇದು ತಪ್ಪಲ್ಲ ಕೇಶವನಟುಯದೆ ತಪ್ಪೆಂದಂ ಭಂಡಾರಮೆಂದು ಸಂಸ್ಕೃತ ಶಬ್ದಮುಂಟು" (ಇತ್ಯಾದಿ). (ಕ) ಪ್ರತಿಯಲ್ಲಿ ಈ ಮೂರು ವೈಶಿಷ್ಟ್ಯಗಳಿವೆ. ಅಲ್ಲದೆ ಉಸ್ಮಾನಿಯ ವಿಶ್ವವಿದ್ಯಾಲಯದ 'ಶಬ್ದಮಣಿದರ್ಪಣ'ದ ಪ್ರತಿಗೂ ಇದಕ್ಕೂ ಕೆಲವೆಡೆಗಳಲ್ಲಿ ಸಾದೃಶ್ಯವಿದೆ. ಈ ಪ್ರತಿಯಲ್ಲಿ ಸೂತ್ರ ೧೬೫ (ಇಲ್ಲಿ ೧೭೬)ರ ಕೆಳಗೆ ಕಾಣುವ "ಅಂಗಯ್ ಮೇಂಗಯ್...." ಎಂಬ ಪದ್ಯವೂ ಸೂತ್ರ ೧೬೮ (ಇಲ್ಲಿ ೧೭೯)ರ ಕೆಳಗೆ ಇರುವ "ಎಸೆವಮೃತಂ..." ಎಂಬ ಪದ್ಯವೂ ಇದರಲ್ಲಿ ದೊರೆಯುತ್ತವೆ ; ಎರಡನೆಯದು ಲಿಂಗಣಾರಾಧ್ಯನ ಪ್ರತಿಯಲ್ಲೂ ಸೂಚಿತವಾಗಿದೆ.[11]

(ಖ) ದ ವೃತ್ತಿಯಲ್ಲಿ ವಿಸ್ತೃತ ಪಾಠವೂ ಅಧಿಕವಾಗಿ ಸೇರಿರುವ ಭಾಗಗಳೂ ಉಂಟು.

(ಕಿ) (ಪ) ಪ್ರತಿಗಳ ವೃತ್ತಿ ಸಂಗ್ರಹವಾಗಿ ಎಷ್ಟು ಬೇಕೋ ಅಷ್ಟಿದೆ.

ಒಟ್ಟಿನಲ್ಲಿ ವೃತ್ತಿ ಪಾಠದ ಸಮಸ್ಯೆಗಳು ಇವು ; (೧) (ಕ)ದಲ್ಲಿ ಇರುವ ಹಾಗೆ ವೃತ್ತಿಪ್ರಯೋಗ ಮಿಶ್ರಿತರೂಪದಲ್ಲಿ ಕೇಶಿರಾಜ ಬರೆದಿದ್ದಾನೆ? (೨) (ಖ) ದಲ್ಲಿ ಇರುವ ಹಾಗೆ ವಿಸ್ತೃತರೂಪದಲ್ಲಿ ವೃತ್ತಿ ಇದ್ದಿತೆ ? (ಇ) (ಕಿ) (ಪ) ಗಳಲ್ಲಿರುವಂತೆ ಇದ್ದಿತೆ ? ಈ ಮೂರು ವಿಧಗಳಲ್ಲಿ ಕೇಶಿರಾಜ ಯಾವುದನ್ನು ಉಪಯೋಗಿಸಿದ್ದನು ? ಇದನ್ನು ನಿರ್ಣಯಿಸುವುದು ಈಗ ಸಾಧ್ಯವೆ ? ಕೇಶಿರಾಜನು ಬರೆದಿದ್ದ ರೂಪದಲ್ಲಿಯೇ ವೃತ್ತಿಪಾಠವನ್ನು ಒಂದು ವೇಳೆ

---

11 ಶಬ್ದಮಣಿದರ್ಪಣದ ಪಾಠಾಂತರಗಳು, ಪುಟ ೭೮. ೮೦.

ಗೊತ್ತುಮಾಡಲು ಸಾಧ್ಯವಾಗದಿದ್ದರೆ ಅದಕ್ಕೆ ಸಮೀಪವರ್ತಿಯಾದ ಪಾಠವನ್ನಾದರೂ ಕಂಡುಹಿಡಿಯಲು ಆದೀತೆ ?

ವೃತ್ತಿಗಳಿಗೆ ಇಷ್ಟು ಬೇರೆ ಬೇರೆ ರೂಪಗಳು ಕಾಣುವುದರಿಂದ ಅವಕ್ಕೆ ಕಾರಣ ಪ್ರತಿಕಾರರ ಕೈವಾಡ ಎಂದು ಹೇಳುವುದಕ್ಕಿಂತ ಕೇಶಿರಾಜನು ವೃತ್ತಿಯನ್ನು ರಚಿಸಲಿಲ್ಲವೆಂದೂ ಲಿಂಗಣಾರಾಧ್ಯನಂತೆ ಬೇರೆ ಯಾರೋ ತಮ ತಮಗೆ ತೋರಿದಂತೆ ವೃತ್ತಿರಚನೆ ಮಾಡಿರಬಹುದೆಂದೂ ಏಕೆ ಹೇಳಬಾರದು? ಹೀಗೆ ಶಂಕಿಸುವ ವಿದ್ವಾಂಸರೂ ಉಂಟು, "ಶಬ್ದಮಣಿದರ್ಪಣದ ವೃತ್ತಿ ಕೇಶಿರಾಜನದಲ್ಲ" ಎಂಬ ತಮ್ಮ ಲೇಖನದಲ್ಲಿ[12] ಶ್ರೀ ವಿ. ರಾಮಶರ್ಮಾ ಅವರು ಈ ವಿಷಯವನ್ನು ಪ್ರತಿಪಾದಿಸಿದ್ದಾರೆ. ವಿಷಯ ಸಮರ್ಥನೆಗೆ ಇಲ್ಲಿ ಒದಗಿಸಿರುವ ಕಾರಣಗಳು ಪ್ರಬಲವೂ ನಿರ್ಣಾಯಕವೂ ಆಗಿಲ್ಲವೆಂದೂ ವೈಯಕ್ತಿಕ ಅಭಿಪ್ರಾಯದ ವಿಲಾಸ ಹೆಚ್ಚಾಗಿದೆಯೆಂದೂ ತೋರಬಹುದು. ಆದರೂ "ಇಂಥಾ ಅರ್ಥವೃತ್ತಿಯನ್ನು ಕೇಶಿರಾಜನು ಬರೆದನೆ" ಎಂಬ ಸಂದೇಹವಾದರೂ ಹುಟ್ಟುವುದಕ್ಕೆ ಅವಕಾಶವಿದೆಯೆಂಬ ಅಂಶ ಈ ಲೇಖನದಿಂದ ವಿಶದವಾಗುತ್ತದೆ. "ಆ ಸೂತ್ರಕ್ಕರ್ಥವೃತ್ತಿ ವರ್ತಿಸೆ ಬರೆದಂ" ಎಂಬ ಪ್ರತಿಜ್ಞಾವಾಕ್ಯವನ್ನು ಒಳಕೊಂಡಿರುವ ಸೂತ್ರವೂ (ಸೂ. ೬) ಅನ್ಯವೃತ್ತಿಕಾರಕರ್ತೃಕವೆಂದು ಅವರ ಸೂಚನೆ. ಈ ಸಂದರ್ಭ "ಒಂದೊಂದೆಡೆಯಲ್ಲಿಯ ವೃತ್ತಿಯ ಪಾಠಕ್ರಮವನ್ನವಲೋಕಿಸಿದರೆ ಈ ವ್ಯಾಖ್ಯಾನಕಾರನೇ ಕೇಶಿರಾಜನ ಸೂತ್ರಗಳಿಗೆ ವೃತ್ತಿ ಬರೆದನೇನೋ ಎಂಬ ಸಂದೇಹಕ್ಕೂ ಆಸ್ಪದವಾಗುವ ಹಾಗಿದೆ" ಎಂಬ ಪ್ರೊ. ಡಿ. ಕೆ. ಭೀಮಸೇನರಾಯರ ವಾಕ್ಯವನ್ನು ನೆನೆಯಬಹುದು.[13]

ಇನ್ನು ಪ್ರಯೋಗಪಾಠ ಸಮಸ್ಯೆಗಳ ವಿಚಾರ. (೧) ಪ್ರಯೋಗವನ್ನು ಕೊಡುವಾಗ ಕೇಶಿರಾಜನು ಅದನ್ನೊಳಗೊಂಡ ಇಡಿ ಪದ್ಯವನ್ನು ನಾಗವರ್ಮನು ಕೊಟ್ಟಿರುವಂತೆ ಕೊಟ್ಟಿದ್ದನೆ ? ಒಂದು ಪ್ರತಿಯಲ್ಲಿ ಇಡಿ ಪದ್ಯವು ಕಂಡರೆ ಇನ್ನೊಂದರಲ್ಲಿ ಪ್ರಯೋಗವನ್ನೊಳಗೊಂಡ ಭಾಗ ಮಾತ್ರ ಕಾಣು

---

12 ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಸಂಪುಟ ೨೬, ಸಂಚಿಕೆ ೧, ಪುಟ ೫೬-೬೧.

13 ಶಬ್ದಮಣಿದರ್ಪಣದ ಪಾಠಾಂತರಗಳು, ಪುಟ ೯.

ತ್ತದೆ. ಸೂತ್ರ ೨೯ ಪ್ರಯೋಗ ೨ನ್ನು ನೋಡಬಹುದು. (ಕ) ದಲ್ಲಿ ಇಡಿ ಪದ್ಯವಿದ್ದರೆ (ಖ.ಕಿ.ಪ.) ಗಳಲ್ಲಿ ಅದರ ಅರ್ಧಮಾತ್ರ ಇದೆ. ಹೀಗೆಯೇ ಸೂತ್ರ ೬೬ರ (೧)ನೆಯ ಪ್ರಯೋಗ ಇಡಿಯಾಗಿ (ಕ.ಖ)ಗಳಲ್ಲಿಲ್ಲ, (ಕಿ.ಪ.) ಗಳಲ್ಲುಂಟು. ಗ್ರಂಥದ ಉದ್ದಕ್ಕೂ ಇಂಥ ನಿದರ್ಶನಗಳು ಹೇರಳವಾಗಿ ದೊರೆಯುತ್ತವೆ. ಹೀಗಾಗಲು ಕಾರಣವೇನು ? ಕೆಲವರು ಪ್ರತಿಕಾರರು ಲೇಖನಶ್ರಮವನ್ನು ಕಡಿಮೆ ಮಾಡಿಕೊಳ್ಳುವುದಕ್ಕಾಗಿ ಇಡಿ ಪ್ರಯೋಗ ಗಳನ್ನು ಮೊಟಕಾಗಿಸಿ ಬರೆದಿರಬಹುದು.[14] ಇದನ್ನು ಒಪ್ಪಿದರೆ ಇಡೀ ಪದ್ಯ ವನ್ನು ಒಳಗೊಂಡಿರುವ ಪ್ರತಿ ಈ ದೃಷ್ಟಿಯಿಂದಲಾದರೂ ಕೇಶಿರಾಜನ ಸ್ವಹಸ್ತ ಪ್ರತಿಯನ್ನು ಪ್ರತಿಬಿಂಬಿಸುತ್ತಿದೆಯೆಂದು ಹೇಳಬೇಕಾಗುತ್ತದೆ. ಈ ವಿಷಯವನ್ನು ಕಿಟ್ಟೆಲ್ ಅವರು ಆಗಲೇ ಮನಗಂಡಿದ್ದರು. ಅವರು ಉಪ ಯೋಗಿಸಿದ ಪ್ರತಿಗಳಲ್ಲಿ ಒಂದು ಉಳಿದ ಪ್ರತಿಗಳಲ್ಲಿ ಸಂಕುಚಿತವಾಗಿ ಬರೆದ ಪ್ರಯೋಗವನ್ನು ಇದರಲ್ಲಿ ಸಾಧಾರಣವಾಗಿ ಇಡಿ ಪದ್ಯವಾಗಿ ಬರೆದಿದೆ ; ಇಡಿ ಪ್ರಯೋಗ ಪದ್ಯವಿರುವುದು ಮೂಲಕ್ಕೆ ಹೆಚ್ಚು ಸಮೀಪವರ್ತಿ ಎಂದು

---

14 ಹೀಗೆ ಪ್ರಯೋಗವನ್ನು ಕುಗ್ಗಿಸಿ ಬರೆಯುವುದು, ಎಲ್ಲಿಯವರೆಗೂ ಹೋಗಿದೆ ಯೆಂದರೆ, ಕೆಲವು ಪ್ರತಿಗಳಲ್ಲಿ ಪ್ರಸ್ತುತ ವ್ಯಾಕರಣಾಂಶವನ್ನು ಒಳಗೊಂಡ ಶಬ್ದ ಮಾತ್ರ. ಅಲ್ಲಿನ ಇತರ ಶಬ್ದಗಳ ಸಾಹಚರ್ಯವನ್ನು ಪೂರ್ಣವಾಗಿಯೋ ಅಪೂರ್ಣವಾಗಿಯೋ ಕಳೆದುಕೊಂಡು, ಲಿಖಿತವಾಗಿದೆ ; ೧೮೬೮ ರಲ್ಲಿ ಬೆಂಗಳೂರಿನಲ್ಲಿ ಮುದ್ರಿತವಾದ ಪ್ರತಿಯಲ್ಲಿ ಹೀಗಿದೆ: ಕಿಟ್ಟೆಲ್ ಅವರು ಉಪಯೋಗಿಸಿದ ( ) ಪ್ರತಿಯಲ್ಲೂ 1 (ಎ.ಎ) ಪ್ರತಿಯಲ್ಲೂ ಇದೇ ರೀತಿ ; ''Full quotations are scarce ; the illustrations are generally given in words (selected from the verses found in Nos. I, II, III) and in short sentences'' preface iv.
ಹಾವೇರಿಯ ಶ್ರೀಮಾನ್ ಎಚ್. ಜಿ. ಬೆಂಗೇರಿಯವರು ದಯಮಾಡಿ ನನಗೆ ಕಳಿಸಿರುವ ಅಸಮಗ್ರವಾದ ಒಂದು ಓಲೆಯ ಪ್ರತಿಯಲ್ಲೂ ಹೀಗುಂಟು : ಸೂತ್ರ ೭೫ : ಪ್ರಯೋಗಗಳು—ಪಳಗನ್ನಡಂ,ಗಳಿಗೂಸಾಡುವರ್, ಕಣ್ದೆರವಿ, ಮೇಲ್ದುಡಿಗೆ, ಉಡಿದೊವಲ್, ತಣ್ಬುಳಿಲ್. ಇತ್ಯಾದಿ).

ಅವರ ಅಭಿಪ್ರಾಯ.[15] ಎಲ್ಲ ಸಂದರ್ಭಗಳಲ್ಲೂ ಇದನ್ನು ಒಪ್ಪುವುದು ಕಷ್ಟವಾದೀತು.

ಕೇಶಿರಾಜನು ಮೂಲತಃ ಪದ್ಯಭಾಗವನ್ನು ಮಾತ್ರ ಪ್ರಯೋಗವಾಗಿ ಕೊಟ್ಟಿದ್ದೂ ಅದು ಪ್ರತಿಕಾರರ ಕೈವಾಡದಿಂದ ಇಡಿ ಪದ್ಯವಾಗಿ ಪರಿಣಮಿಸಿರಬಹುದೆ ? ಕೇಶಿರಾಜನ ಪ್ರಯೋಗಗಳಿಗೆ ಮೂಲವೂ ಮುಖ್ಯವೂ ಆದ ಆಕರ ನಾಗವರ್ಮನ 'ಕಾವ್ಯಾವಲೋಕನ' ದ 'ಶಬ್ದಸ್ಮೃತಿಪ್ರಕರಣ' ವೆಂಬುದು ಸರ್ವಜ್ಞಾತ. ಇದನ್ನು ಬಲ್ಲ ಮತ್ತು ಸ್ವತಃ ಸ್ವಲ್ಪಮಟ್ಟಿಗೆ ಪಂಡಿತನೂ ಆದ ಪ್ರತಿಕಾರ ಈ ಗ್ರಂಥದ ಇಡಿ ಪ್ರಯೋಗ ಪದ್ಯದ ಸಹಾಯದಿಂದ ಕೇಶಿರಾಜನ ಅಪೂರ್ಣ ಪ್ರಯೋಗ ಪದ್ಯಭಾಗವನ್ನು ತುಂಬಿ ಬರೆದಿರಬಹುದು. ೨೯ನೆಯ ಸೂತ್ರದ (೨)ನೆಯ ಪ್ರಯೋಗ "ಕಟಿಲೆ ನುಡಿವಟಲೆ ಬಗ್ಗಿಸಿ" ಎಂಬುದು (ಖ.ಕಿ.ಪ.) ಗಳಲ್ಲಿ ಭಾಗಶಃ ಉದ್ಧೃತವಾಗಿದೆ. (ಕ) ಪ್ರತಿಕಾರನೋ ಅವನಿಗೆ ಮೂಲವಾದ ಯಾರೋ 'ಕಾವ್ಯಾವಲೋಕನ' ದಲ್ಲಿರುವ ಇದೇ ಪದ್ಯವನ್ನು ನೋಡಿ (ಪದ್ಯ. ೨೬). ಪೂರ್ತಿಯಾಗಿ ತನ್ನ ಪ್ರತಿಯಲ್ಲಿ ಬರೆದುಕೊಂಡಿರಬಹುದು. ಹೀಗೆಯೇ ೬೬ನೆಯ ಸೂತ್ರದ (೧) ನೆಯ ಪ್ರಯೋಗ ಇಡಿಯಾಗಿ (ಕಿ.ಪ) ಗಳಲ್ಲಿದೆ ; ಇವಕ್ಕೆ ಮೂಲವಾದ ಪ್ರತಿಗಳ ಲೇಖಕರು 'ಕಾವ್ಯಾವಲೋಕನ'ದ ೪೭ನೇ ಪದ್ಯವನ್ನು ಬಲ್ಲವ

---

15 "Its peculiarity is that it frequently quotes a whole verse or prose sentence where other manuscripts give only a coherent portion of either of them or even only one or two incoherent words selected from either of them. (This last way of abridgement scarcely once in M, seldom in M·B.) Tence in this respect it seems to be a better representation... ... of what the Sabdamanidarpana originally was than any other of the manuscripts (except M in our hands.") 1972 Ed· Preface III,

ರಾಗಿದ್ದಿರಬಹುದು. ಈ ಕಾರಣಗಳಿಂದ ಕೇಶಿರಾಜನ ಪ್ರಯೋಗ ಇಡಿ ಪದ್ಯರೂಪವಾಗಿತ್ತೆ ಅಥವಾ ಪದ್ಯಭಾಗ ಮಾತ್ರವಾಗಿತ್ತೆ ಎಂಬ ಪ್ರಶ್ನೆಗೆ 'ಇದಮಿತ್ಥಂ' ಎಂದು ಉತ್ತರ ಹೇಳುವ ಹಾಗಿಲ್ಲ. ಇಡಿ ಪ್ರಯೋಗ ಪದ್ಯವಿರುವ ಪ್ರತಿ ಕೇಶಿರಾಜನ ಸ್ವಹಸ್ತಪ್ರತಿಯ ಪ್ರತಿಬಿಂಬವೆಂಬ ಮಾತೂ ಸಂದೇಹಾಸ್ಪದವಾಗಿರುವಂತೆ ತೋರುತ್ತದೆ. (೨) ಎಲ್ಲ ಮುದ್ರಿತ ಪ್ರತಿಗಳಲ್ಲೂ ಅವಕ್ಕೆ ಮೂಲವಾದ ಮಾತೃಕೆಗಳಲ್ಲೂ ಭಾಗಶಃ ಆಗಿಯೇ ಪ್ರಯೋಗವಿರುವುದು ಕಾಣುತ್ತದೆ; ಸೂತ್ರ ೧೧೭ ಪ್ರ. (೧-೫). ಇಂಥ ಪ್ರಯೋಗಗಳ ಸಂಖ್ಯೆ ಮಿಗಿಲಾಗಿದೆ. ತುಂಬಿ ಬರೆಯುವ ಪ್ರವೃತ್ತಿಯುಳ್ಳ ಪ್ರತಿಕಾರರೂ ಇವನ್ನು ಹಾಗೆಯೇ ಉಳಿಸಿಕೊಂಡಿರುವುದನ್ನು ನೋಡಿದರೆ ಅವರಿಗೆ ಅವುಗಳ ಆಕರ ಸಿಕ್ಕಲಿಲ್ಲವೆಂದು ಊಹಿಸಬಹುದು.[16] ಪ್ರಕೃತ ಇಂಥ ಪ್ರಯೋಗ ಪದ್ಯಭಾಗಗಳು ಮೂಲತಃ ಕೇಶಿರಾಜನು ಬರೆದಿದ್ದ ರೂಪದಲ್ಲಿಯೇ ಇನ್ನೂ ಉಳಿದಿವೆಯೆಂದು ಹೇಳಬೇಕಾಗುತ್ತದೆ. ಕೇಶಿರಾಜನ ಸ್ವಹಸ್ತಪ್ರತಿಯ ಪ್ರತಿಬಿಂಬ ಬಹುಶಃ ಇಲ್ಲಿ ನೆಲಸಿದರೆ ಇಡಿ ಪ್ರಯೋಗಗಳಲ್ಲಿ ಅಲ್ಲ. (೩) ಕೆಲವು ಪ್ರಯೋಗಗಳು ಪುನರುಕ್ತವಾಗಿವೆ. ಒಂದು ವ್ಯಾಕರಣ ಪ್ರಕ್ರಿಯೆಗೆ ನಿದರ್ಶನವಾಗಿ ಕೊಟ್ಟ ಪ್ರಯೋಗವೇ ಇನ್ನೊಂದು ಸಲ ಬೇರೊಂದಕ್ಕೆ ನಿದರ್ಶನವಾಗಿ ಬಂದಿದೆ : ೧೨೬-೩, ೧೪೬-೨ ; ೮೨-೧೧, ೧೯೭-೧ ; ೧೧೪-೫, ೧೧೬-೧ ಇತ್ಯಾದಿ. ಇವುಗಳಲ್ಲಿ ಮೊದಲನೆಯದಾದ "ಅಲಿವರಲ್ಗಳುಮಿಂದ್ರಗೋಪಮುಂ" ಎಂಬುದು ಎರಡೆಡೆಗಳಲ್ಲಿ ಪಂಚಮರ್ಥದ ತೃತೀಯೆಗೆ ಉದಾಹೃತವಾಗಿದೆ. ೧೨೬ನೆಯ ಸೂತ್ರದ ಪ್ರಯೋಗ ಎಲ್ಲ ಪ್ರತಿಗಳಲ್ಲೂ ಉಂಟು ; ೧೪೬ರ ಪ್ರಯೋಗ (ಕ.ಖ)ಗಳಲಿಲ್ಲ. ಆದ್ದರಿಂದ ಇದನ್ನು ಯಾವನೋ ಪ್ರತಿಕಾರನು ೧೪೬ರ ಕೆಳಗೆ ಪುನರುಕ್ತ ಮಾಡಿರಬೇಕು. ವಿಶಾಲ ಪ್ರಯೋಗ ಸಂಪತ್ತಿಯನ್ನುಳ್ಳ ಕೇಶಿರಾಜನಿಗೆ ಬೇರೆ ಪ್ರಯೋಗವನ್ನು ೧೪೬ರ ಕೆಳಗೆ ಕೊಡುವುದು ಕಷ್ಟವೇನೂ ಆಗುತ್ತಿರಲಿಲ್ಲ.

---

16 ಇವುಗಳಲ್ಲಿ(೫)ನೆ ಪ್ರಯೋಗದ ಇಡಿ ಪದ್ಯ 'ಕಾವ್ಯಾವಲೋಕನ'ದಲ್ಲಿವೆ (ಪದ. ೧೧೧)

"ಕುಡುವಿಲ್ಲನೆಚ್ಚ ಕೋಲುಂ...." ಎಂಬ ಎರಡನೆಯ ಪ್ರಯೋಗವನ್ನು ೪೮೨ರ ಕೆಳಗೆ ಅಸಮಗ್ರವಾಗಿಯೂ, ೧೯೭ರ ಕೆಳಗೆ ಇಡಿ ಪದ್ಯರೂಪದಲ್ಲೂ ಬಂದಿದೆ. (ಕಾವ್ಯಾವಲೋಕನ ೨೮೯ ನೋಡಿ). ಒಂದರಲ್ಲಿ ಸಮಾಸಲಿಂಗಕ್ಕೂ ಇನ್ನೊಂದರಲ್ಲಿ ಬಹುವ್ರೀಹಿಗೂ ಇದು ಉದಾಹೃತವಾಗಿದೆ. ಸೂತ್ರ ೮೨ರ ಪ್ರಯೋಗ (ಕಿ.ಪ) ಗಳಲ್ಲಿಲ್ಲ ; ಸೂತ್ರ ೧೯೭ರ ಪ್ರಯೋಗ ಎಲ್ಲ ಪ್ರತಿಗಳಲ್ಲೂ ಉಂಟು. ಆದ್ದರಿಂದ (ಕಿ.ಖ.) ಪ್ರತಿಕಾರರು ೧೯೭ರ ಪ್ರಯೋಗವನ್ನು ೮೨ರ ಕೆಳಗೂ ಬರೆದಿರಬಹುದು. ಎರಡೆಡೆಗಳಲ್ಲಿ ಇರುವ ಭಿನ್ನ ವ್ಯಾಕರಣ ಪ್ರಕ್ರಿಯೆಗಳಿಗೆ ಇದು ಉದಾಹರಣೆಯಾಗಿರುವುದರಿಂದ ಒಂದು ವೇಳೆ ಕೇಶಿರಾಜನೇ ಇದನ್ನು ಪುನರುಕ್ತಮಾಡಿರಬಹುದು. ಪುನರುಕ್ತ ಪ್ರಯೋಗಗಳ ಸಂಖ್ಯೆ ಬಹಳ ಕಡಿಮೆ ಆಗಿರುವುದರಿಂದ ಈ ವಿಷಯವನ್ನು ಪ್ರಧಾನವಾಗಿ ಎಣಿಸಬೇಕಾಗಿಲ್ಲ. (೪) ಕೆಲವು ಪ್ರತಿಗಳಲ್ಲಿ ಅಧಿಕ ಪ್ರಯೋಗಗಳು ಕಾಣುತ್ತವೆ. ಪುಟ. ೯೦ ಅ.ಟಿ. ೯೭–೩ ಅ.ಟಿ. ೧. ಇವನ್ನು ಬಹುಶಃ ಪ್ರತಿಕಾರರು ಸೇರಿಸಿರಬೇಕು (೫) ಒಂದು ಪ್ರತಿಯ ಪ್ರಯೋಗಕ್ಕೆ ಪ್ರತಿಯಾಗಿ ಇನ್ನೊಂದರಲ್ಲಿ ಬೇರೊಂದು ಪ್ರಯೋಗ ಬರೆದಿದೆ ; ಸೂತ್ರ ೧೮–೪ ಮತ್ತು ಅ.ಟಿ. ೩ ; ೧೧೪.೩ ಮತ್ತು ಅ.ಟಿ. ೨ ಇದಕ್ಕೆ ಕಾರಣವೇನು ? (೬) ಕೆಲವು ಪ್ರತಿಗಳಲ್ಲಿ ಕಾಣುವ ಪ್ರಯೋಗ ಇನ್ನೊಂದರಲ್ಲಿ ಇಲ್ಲ ; ಸೂ. ೧೧೪–೪, ೬, ೭.(ಕ) ಪ್ರತಿಕಾರ ಇವನ್ನು ಬರೆಯದೆ ಬಿಟ್ಟಿರಬಹುದು. ಇಷ್ಟೇ ಅಲ್ಲದೆ ಕೆಲವು ಪ್ರಯೋಗಗಳಿಗೆ ಸ್ಥಾನಪಲ್ಲಟವಾಗಿರಲೂಬಹುದು. ಪ್ರಯೋಗಪಾಠ ಸಮಸ್ಯೆಗಳು ಹೀಗಿರುವಾಗ ಕೇಶಿರಾಜನೇ ಲಿಖಿಸಿದ್ದ ಪ್ರಯೋಗಗಳ ಸ್ವರೂಪ ಹೇಗಿದ್ದಿರಬಹುದು ಎಂದು ತೀರ್ಮಾನಿಸುವುದು ಹಾಗಿರಲಿ ; ಊಹೆ ಮಾಡುವುದಾದರೂ ಸಾಧ್ಯವೇ ?

ಒಟ್ಟಿನಲ್ಲಿ ವೃತ್ತಿ ಪ್ರಯೋಗಗಳ ಪಾಠ ಅನೇಕ ಸಮಸ್ಯೆಗಳಿಂದ ತುಂಬಿದೆಯೆಂಬುದು ಸ್ಪಷ್ಟವಾಗಿದೆ. ಅವು ಅತಿಜಟಿಲವೂ ಭ್ರಾಂತಿಕಾರಕವೂ ಆಗಿರುವುವಲ್ಲದೆ ಎಷ್ಟೋ ವೇಳೆ ಅಪರಿಹಾರ್ಯವಾಗಿಯೂ ಇರುವಂತೆ ತೋರುತ್ತದೆ: ವಸ್ತುಸ್ಥಿತಿ ಹೀಗಿರುವಾಗ ಕಿಟ್ಟೆಲ್ ಅವರು "ಶಬ್ದಮಣಿದರ್ಪಣ"ದ ಎರಡನೆಯ ಸುಧಾರಿಸಲ್ಪಟ್ಟ ಆವೃತ್ತಿಗೆ ೧೮೯೭ರಲ್ಲಿ ಬರೆದ ಮುನ್ನುಡಿಯಲ್ಲಿ

"ಈ ಎರಡನೆಯ ಪರಿಷ್ಕೃತ ಮುದ್ರಣ ಕೇಶಿರಾಜನ ಮೂಲಪ್ರತಿಯನ್ನು ಚೆನ್ನಾಗಿಯೇ ಪ್ರತಿಬಿಂಬಿಸುತ್ತಿದೆ ಎಂದು ಸಂಪಾದಕನು ನಂಬುತ್ತಾನೆ; 'ಕನ್ನಡ ನುಡಿಯಲ್ಲಿ ಆಸಕ್ತಿ ಇರುವ ವಿದ್ವಾಂಸರೆಲ್ಲ ಇದನ್ನು ಕೃತಜ್ಞತೆಯಿಂದ ಸ್ವಾಗತಿಸುವರೆಂದು ಆಶಿಸುತ್ತೇನೆ' ಎಂಬರ್ಥ ಬರುವಂತೆ ಬರೆದಿರುವುದು ಸೋಜಿಗವಾಗಿದೆ.[17] ಈ ಅಭಿಪ್ರಾಯದ ಎರಡನೆಯ ಅಂಶದಲ್ಲಿ ಸಂದೇಹ ವೇನಿಲ್ಲ; ಶಬ್ದಮಣಿದರ್ಪಣದ ಪರಿಷ್ಕೃತ ಮುದ್ರಣಕ್ಕಾಗಿ ಅವರಿಗೆ ಕನ್ನಡಿಗರು ಕೃತಜ್ಞರಾಗಿದ್ದಾರೆ; ಮೊದಲ ಭಾಗ ಸೂತ್ರಪಾಠದೃಷ್ಟಿಯಿಂದ ಮಾತ್ರ ಬಹುಮಟ್ಟಿಗೆ ಸತ್ಯವೆಂದೂ ವೃತ್ತಿ ಪ್ರಯೋಗ ಪಾಠ ದೃಷ್ಟಿಯಿಂದ ಅಸಮರ್ಪಕವೆಂದೂ ಅವರು ತಮ್ಮ ಆದರ್ಶಕ್ಕೆ ಇನ್ನೂ ಬಹು ದೂರ ವಾಗಿಯೇ ಇದ್ದಾರೆಂದೂ ಹೇಳದೆ ವಿಧಿಯಿಲ್ಲ.

"ಶಬ್ದಮಣಿದರ್ಪಣ"ದ ಪಾಠದ ವಿಚಾರವಾಗಿ ಮೊದಲು ಸಂಶೋಧನೆ ನಡೆಸಿದ ಕೀರ್ತಿ ಪ್ರೊ. ಡಿ. ಕೆ. ಭೀಮಸೇನರಾಯರಿಗೆ ಸಲ್ಲುತ್ತದೆ. ತಮಗೆ ದೊರೆತ ಒಂದು "ಹೊಸಪ್ರತಿ"ಯ ಆಧಾರದ ಮೇಲೆ ಅವರು ೧೯೪೪ನೆಯ ಇಸವಿಯ ಜನವರಿ ೨೮, ೨೯, ೩೦ ರಂದು ಧಾರವಾಡದ ಕನ್ನಡ ರಿಸರ್ಚ್ ಇನ್ಸ್‌ಸ್ಟಿಟ್ಯೂಟಿನಲ್ಲಿ ಮಾಡಿದ ಎರಡು ಉಪನ್ಯಾಸಗಳು ಈ ವಿಷಯದಲ್ಲಿ ಹೊಸ ಬೆಳಕನ್ನು ಬೀರಿದುವು. ಆ ಉಪನ್ಯಾಸಗಳು "ಶಬ್ದಮಣಿದರ್ಪಣದ ಪಾಠಾಂತರಗಳು ಮತ್ತು ಅನುಭವಾಮೃತವೂ ಹರಿಕಥಾಮೃತಸಾರವೂ" ಎಂಬ ಹೆಸರಿನಿಂದ ೮ ವರ್ಷಗಳ ತರುವಾಯ ೧೯೫೨ರಲ್ಲಿ ಮುದ್ರಿತವಾಗಿ ಪ್ರಕಟವಾದುವು. 'ಹೊಸ ಪ್ರತಿ'ಯಲ್ಲಿ ಕಾಣುವ ಹೊಸ ವಿಷಯಗಳನ್ನೆಲ್ಲಾ ಇಲ್ಲಿ ಸೂತ್ರಾನುಕ್ರಮವಾಗಿ ನಿರೂಪಿಸಿದೆ. ಇದರಲ್ಲಿರುವ ವ್ಯಾಖ್ಯಾನ ಯಾರದೋ ಗೊತ್ತಿಲ್ಲ. "ಆ ಪ್ರತಿಯ ಪಾಠಗಳು ಪ್ರಚಲಿತ ಶಬ್ದಮಣಿ

---

17. "This Editor believes that present edition fairly represents Kesiraja original and trusts that all the scholars interested in the Kannada languages will, therefore gratefully welcome it." 2nd Edn. 1899, Preface.

ದರ್ಪಣದ ಪಾಠಗಳಿಗಿಂತ ಅನೇಕ ಕಡೆಗಳಲ್ಲಿ ಭಿನ್ನವಾಗಿವೆ. ಇದರಿಂದ ಈಗಿನ ಸಂದೇಹಗಳು ತಕ್ಕಮಟ್ಟಿಗೆ ದೂರವಾಗುತ್ತವೆ. ಪಾಠಾಂತರಗಳಲ್ಲಿ ಬರಿಯ ಸೂತ್ರಗಳನ್ನಷ್ಟೇ ತೆಗೆದುಕೊಂಡಿಲ್ಲ. ವೃತ್ತಿಗಳನ್ನೂ, ಪ್ರಯೋಗಗಳನ್ನೂ ಜೊತೆಗೆ ಸೇರಿಸಿದೆ. ಅನೇಕ ಕಡೆಗಳಲ್ಲಿ ವೃತ್ತಿಗೂ, ಪ್ರಯೋಗಗಳಿಗೂ, ಸೂತ್ರಗಳಿಗೂ ವ್ಯತ್ಯಾಸವೂ ಕಂಡುಬಂದು ಸೂತ್ರವೃತ್ತಿಗಳನ್ನು ಬರೆದವರು ಬೇರೆ ಬೇರೆ ಎಂಬ ಅನುಮಾನಕ್ಕೆ ಆಸ್ಪದವಾಗಿದೆಯಷ್ಟೆ" ಎಂದು ಈ ಪ್ರತಿಯ ಸಾಧಾರಣ ಸ್ವರೂಪವನ್ನು ಅವರು ವರ್ಣಿಸಿದ್ದಾರೆ (ಪುಟ ೨). ಇದನ್ನು ನೋಡಿದರೆ ಪಾಠ ಸಮಸ್ಯೆ ಎಷ್ಟು ಜಟಿಲವಾದುದೆಂಬುದು ವ್ಯಕ್ತವಾಗುತ್ತದೆ. ವ್ಯಾಖ್ಯಾನಕಾರನ ಅಭಿಪ್ರಾಯಗಳೂ ಅವನ್ನು ಅವಲಂಬಿಸಿ ಶ್ರೀ ಡಿ. ಕೆ. ಭೀಮಸೇನರಾಯರು ಮಾಡಿರುವ ಸೂಚನೆಗಳೂ ವಾದಗ್ರಸ್ತವಾಗಿ ಕೆಲವೆಡೆ ತೋರಬಹುದು. ಆದರೆ ಅವರು ಮಾಡಿರುವ ಕೆಲಸ ತುಂಬ ಬೆಲೆಯುಳ್ಳದ್ದು. "ಶಬ್ದಮಣಿದರ್ಪಣ"ದ ಪಾಠ ಸಮಸ್ಯೆಗಳ ಸಮ್ಯಗ್ ಜ್ಞಾನಕ್ಕೆ ಅದು ಪ್ರೇರಕವಾಗಿರುವುದಲ್ಲದೆ ಮಾರ್ಗದರ್ಶನವನ್ನೂ ಮಾಡುತ್ತಿದೆ ; ಸಂಶೋಧನೆಗೆ ಹೊಸ ಕ್ಷೇತ್ರವನ್ನು ತೆರೆದಿದೆ. ಈ ಕೆಲಸಕ್ಕಾಗಿ ಅವರು ಅಭಿನಂದನೀಯರು.

### ಬೇರೊಂದು ಪರಿಷ್ಕರಣ

ಕೇಶಿರಾಜನ ಸ್ವಹಸ್ತ ಪ್ರತಿಯ ಸ್ವರೂಪವನ್ನು ಕಂಡು ಹಿಡಿಯುವುದಕ್ಕೂ ಅದು ಸಾಧ್ಯವಾಗದಿದ್ದಲ್ಲಿ ಅದಕ್ಕೆ ಅತಿ ಸಮೀಪವಾದ ಪಾಠವನ್ನು ಗೊತ್ತುಪಡಿಸುವುದಕ್ಕೂ ಪಾಠ ಸಮಸ್ಯೆಗಳ ವಿಶದೀಕರಣಕ್ಕೂ ಸರ್ವಪಾಠ ಭೇದಗಳನ್ನೊಳಗೊಂಡ ಸಶಾಸ್ತ್ರೀಯ ಸವಿಮರ್ಶ ಪರಿಷ್ಕರಣವನ್ನು ಸಿದ್ಧಪಡಿಸಬೇಕಾದ ಅವಶ್ಯಕತೆಯಿದೆ. ಇದು ತುಂಬ ಶ್ರಮಸಾಧ್ಯವಾದ ಕಾರ್ಯ ; ಹಲವು ವರ್ಷಗಳಾದರೂ ಆಗಬಹುದು ಇದನ್ನು ಮಾಡುವುದಕ್ಕೆ. ಬೇರೆ ಬೇರೆ ಕಾಲಗಳಲ್ಲಿ ಲಿಖಿತವಾದುವೆಂದು ಖಚಿತವಾಗಿ ಗೊತ್ತಾಗುವ ಹಲವು ಹಸ್ತಪ್ರತಿಗಳನ್ನು ಮೊದಲು ಸಂಗ್ರಹ ಮಾಡಬೇಕು ; ಕನ್ನಡನಾಡಿನ ಬೇರೆಬೇರೆ ಪ್ರದೇಶಗಳಿಗೆ ಇವು ಸೇರಿದುವಾಗಿರಬೇಕು. ಇಂಥ ಪ್ರತಿಗಳನ್ನು ಕೂಡಿಹಾಕುವುದೇ ಒಂದು ಶ್ರಮ ; ಇದಕ್ಕೆ ಬಹಳ ಹಣ ಬೇಕಾಗಬಹುದು.

ಇವು ಸಾಕಷ್ಟು ಸಂಖ್ಯೆಯಲ್ಲಿ ದೊರೆತ ಮೇಲೆ ಅತ್ಯಂತ ಪ್ರಾಚೀನ ಪ್ರತಿಯನ್ನು ಆಧಾರವಾಗಿಟ್ಟುಕೊಂಡು ಉಳಿದ ಪ್ರತಿಗಳ ಪಾಠಭೇದಗಳನ್ನು ಗುರುತಿಸಬೇಕು. ಈ ಕಾರ್ಯವನ್ನು ಮಾಡುವುದಕ್ಕೆ ದಕ್ಷರೂ ಪ್ರಾಮಾಣಿಕರೂ ಆಲಸ್ಯವಿಲ್ಲದವರೂ ಲಿಪಿಸೂಕ್ಷ್ಮತೆಗಳನ್ನು ಬಲ್ಲವರೂ ಆದ ಹಲವರ ನೆರವು ಬೇಕಾಗುತ್ತದೆ ; ಇದಕ್ಕೂ ಧನಸಹಾಯ ಆಗಬೇಕು. ಹೀಗೆ ಸಿದ್ಧವಾದ ಪಾಠಭೇದಗಳನ್ನೆಲ್ಲ ಪರಿಶೀಲಿಸಿ ಸದೃಶ ಪಾಠಗಳನ್ನುಳ್ಳ ಪ್ರತಿಗಳನ್ನು ಒಂದೊಂದು ಗುಂಪಾಗಿ ವರ್ಗೀಕರಣ ಮಾಡಬೇಕು. ಪ್ರತಿಯೊಂದು ವರ್ಗದ ಮೂಲಪಾಠವನ್ನು ಕಂಡುಹಿಡಿದು ಅವುಗಳನ್ನು ಮತ್ತೆ ಪರಿಶೀಲಿಸಿ ಅವುಗಳೆಲ್ಲಕ್ಕೂ ಮೂಲವಾದ ಪಾಠವನ್ನು ರಚಿಸಿಕೊಳ್ಳಬೇಕು. ಈ ಕ್ರಮದಲ್ಲಿ ಆದಷ್ಟು ಹಿಂದು ಹಿಂದಕ್ಕೆ, ಕೇಶಿರಾಜನ ಮೂಲ ಪ್ರತಿಯ ಸಮೀಪಕ್ಕೆ ಹೋಗುವುದು ಸಾಧ್ಯವಾಗುತ್ತದೆ. ಇದಕ್ಕೆ ಸಮರ್ಥರಾದ ಸಂಪಾದಕರು ಬೇಕು. ಅಂಥವರು ಸುಮ್ಮನೆ ಸಿಕ್ಕುವುದಿಲ್ಲ; ಅವರಿಗೂ ಹಣ ಬೇಕು. ಆದ್ದರಿಂದ ಇಂಥ ಕೆಲಸವನ್ನು ಒಬ್ಬನೇ ಮಾಡುವುದಕ್ಕಾಗುವುದಿಲ್ಲ, ವಿಶ್ವವಿದ್ಯಾನಿಲಯಗಳಂಥ ಧನಬಲವುಳ್ಳ ವಿದ್ವತ್ ಸಂಸ್ಥೆಗಳು ಸಮರ್ಥ ಜನಬಲವನ್ನೂ ದೊರಕಿಸಿಕೊಂಡು ಈ ಕಾರ್ಯವನ್ನು ಕೈಕೊಂಡರೆ ಸಮರ್ಪಕವಾಗಿಯೂ ಕ್ಷಿಪ್ರವಾಗಿಯೂ ಮಾಡಿ ಮುಗಿಸುವುದು ಸಾಧ್ಯವಾದೀತು. ಪುಣೆಯ ಭಂಡಾರ್ಕರ್ ಸಂಸ್ಥೆಯವರು ಮಹಾಭಾರತದ ಪರಿಷ್ಕೃತ ಮುದ್ರಣಕ್ಕೆ ಯಾವ ಕಾರ್ಯವನ್ನು ಮಾಡಿದ್ದಾರೆಯೋ ಅಂಥ ಕೆಲಸವನ್ನು, ಅಷ್ಟು ದೊಡ್ಡ ಪ್ರಮಾಣದಲ್ಲಿ ಅಲ್ಲದೇ ಇದ್ದರೂ ತಕ್ಕಷ್ಟು ಪ್ರಮಾಣದಲ್ಲಿ, 'ಶಬ್ದಮಣಿದರ್ಪಣ'ದ ಪರಿಷ್ಕರಣದಲ್ಲಿ ಮಾಡಬೇಕಾಗಿದೆ. ಈ ಕೆಲಸಕ್ಕೆ ಆ ಗ್ರಂಥದ ಮುದ್ರಿತ ಪ್ರತಿಗಳಿಂದ ಸಹಾಯವಾಗುವಂತೆಯೇ ಪ್ರಕೃತ ಮುದ್ರಣದಿಂದಲೂ ಆಗಬಹುದು.

## ಪ್ರಯೋಗಗಳ ಆಕರ

'ಶಬ್ದಮಣಿದರ್ಪಣ'ದ ವೈಶಿಷ್ಟವೂ, ರಮಣೀಯತೆಯೂ ಇರುವುದು ಕೇಶಿರಾಜ ಅಲ್ಲಿ ಕಾಣಿಸಿರುವ ಪ್ರಯೋಗಸಂಪತ್ತಿಯಲ್ಲಿ. ಅದರ ಸ್ವಲ್ಪ ಭಾಗ ಅವನಿಗೆ 'ಕಾವ್ಯಾವಲೋಕನ'ದಲ್ಲಿ ಉದಾಹೃತವಾಗಿರುವ ಪದ್ಯಗಳಿಂದ ಲಭಿಸಿದೆ

ಯೆಂದು ತೋರುತ್ತದೆ. ಎಂದರೆ ಅವನು ಆ ಪದ್ಯಗಳಿಗೆ ಮೂಲವಾದ ಕಾವ್ಯಗಳನ್ನು ಸ್ವತಃ ಓದದೆ ನಾಗವರ್ಮನು ಕೊಟ್ಟಿದ್ದ ಉದಾಹರಣೆಗಳಷ್ಟ ರಿಂದಲೇ ಸಂತೃಪ್ತನಾಗಿದ್ದನೆಂದು ಭಾವಿಸಬಾರದು. ಯಾವುದಾದರೂ ಕಾವ್ಯ ದಿಂದ ನಾಗವರ್ಮ ಆರಿಸಿಕೊಂಡಿರದ ಪ್ರಯೋಗಗಳು, ಅದೇ ಕಾವ್ಯದಿಂದ ಉದ್ಧೃತವಾಗಿ, ಕೇಶಿರಾಜನಲ್ಲಿ ದೊರೆಯುವುದು ಅವನು ಆ ಕೃತಿಯನ್ನು ತನ್ನ ಅಭ್ಯಾಸಕ್ಕೆ ಒಳಪಡಿಸಿಕೊಂಡಿದ್ದನೆಂಬುದಕ್ಕೆ ಸಾಕ್ಷಿ. "ತೆಂಕನಾಡ ಮಱಿಯಲ್ಕೆಂದುಂ ಮನಂ ಬರ್ಕುಮೇ" ಎಂಬ ಪ್ರಯೋಗ, ಪಂಪಭಾರತಕ್ಕೆ ಸೇರಿದ್ದು (೪-೩೧), ಕೇಶಿರಾಜನಲ್ಲಿ ಮಾತ್ರ ಸಿಕ್ಕುವುದರಿಂದ (೧೪೫-೪) ಅವನಿಗೆ ಆ ಕೃತಿಯ ನೇರಾದ ಪರಿಚಯವಿದ್ದುದನ್ನು ತೋರಿಸುತ್ತದೆ. ಹೀಗೆ ಕೇಶಿರಾಜನು ಸ್ವಂತ ಪರಿಶ್ರಮದಿಂದ ಆರಿಸಿಕೊಂಡಿರುವ ಪ್ರಯೋಗಗಳೂ ಸಂಖ್ಯೆಯಲ್ಲಿ ಹೆಚ್ಚಾಗಿವೆ ; ಅವನ ಕಾವ್ಯ ಪರಿಚಯದ ವೈಪುಲ್ಯವನ್ನೂ ಹೇಳುತ್ತಿವೆ. ನಾಗವರ್ಮನ ಪ್ರಯೋಗ ನಿಧಿ ಕೇಶಿರಾಜನಲ್ಲಿ ವೃದ್ಧಿಗೊಂಡು ದೊಡ್ಡ ಆಸ್ತಿಯಾಗಿದೆ. ಯಾವ ಕವಿಗಳ ಸುಮಾರ್ಗ ತನಗೆ ಲಕ್ಷ್ಯವೆಂದು ಕೇಶೀರಾಜ ಸ್ವೀಕರಿಸಿದನೋ ಆ ಗಜಗ ಗುಣನಂದ್ಯಾದಿ ಕವಿಕೃತಿಗಳು ಅವನ ಪ್ರಯೋಗಗಳಿಗೆ ಆಕರಗಳೆಂದು ಸ್ಪಷ್ಟವಾಗಿಯೇ ಇದೆ (ಸೂತ್ರ ೫). ಆ ಕವಿಗಳಲ್ಲಿ ಪಂಪನ ಕೃತಿಗಳು ಲಭ್ಯವಾಗಿವೆ ; ಪೊನ್ನನ 'ಜಿನಾಕ್ಷರಮಾಲೆ, ಶಾಂತಿಪುರಾಣ'ಗಳು ಮಾತ್ರ ದೊರೆತಿವೆ ; ಸುಜನೋತ್ತಂಸನ (ಬೊಪ್ಪಣ್ಣ ಪಂಡಿತ) 'ಗೊಮ್ಮಟಸ್ತುತಿ, ನಿರ್ವಾಣಲಕ್ಷ್ಮೀಪತಿ ನಕ್ಷತ್ರಮಾಲಿಕೆ'ಗಳು ಹೊರತಾಗಿ ಬೇರೆ ಅವನ ಕಾವ್ಯಗಳು ಸಿಕ್ಕಿಲ್ಲ ; ಉಳಿದ ಕವಿಗಳ ಯಾವ ಕೃತಿಯೂ ಬೆಳಕಿಗೆ ಬಂದಿಲ್ಲ. ಆದ್ದರಿಂದ ಕೇಶಿರಾಜನ ಪ್ರಯೋಗಗಳು ಯಾವ ಯಾವ ಕಾವ್ಯಗಳಿಂದ ಬಂದುವೆಂಬುದನ್ನು ನಿರ್ದಿಷ್ಟವಾಗಿ ಹೇಳುವು ದಕ್ಕಾಗದೆ ಇದೆ. ಈ ಕವಿಗಳ ಸಾಲಿನಲ್ಲಿ ರನ್ನನನ್ನು ಕೇಶಿರಾಜ ಹೆಸರಿಸಿಲ್ಲ ವಾದರೂ ಅವನ ಕೃತಿಗಳಿಂದಲೂ ಪ್ರಯೋಗ ಸ್ವೀಕರಣವಾಗಿದೆ. ಈ ಸಾಲಿಗೆ ನಾಗವರ್ಮ ೧, ಶಂಖವರ್ಮ, ವ್ಯಾಕರಣದ ನಯಸೇನ. ಹರಿಪಾಲ. ಹಂಸರಾಜ, ನಾಗಚಂದ್ರ-ಈ ಕವಿಗಳನ್ನೂ ಸೇರಿಸಿದರೆ ಇಮ್ಮಡಿನಾಗವರ್ಮ ನಿಗೆ ದೊರೆತಿದ್ದ ಸಾಹಿತ್ಯದ ಸಮಷ್ಟಿರೂಪ ವೇದ್ಯವಾಗುತ್ತದೆ. ಇದರ ಜೊತೆಗೆ ಬ್ರಹ್ಮಶಿವ, ನೇಮಿಚಂದ್ರ, ಜನ್ನ, ಬಹುಶಃ ಸುಮನೋಬಾಣ,

ಹರಿಹರ–ಈ ಕವಿಕೃತಿಗಳನ್ನೂ ಕೂಡಿಸಿಕೊಂಡರೆ ಕೇಶಿರಾಜನಿಗೆ ದೊರೆತಿದ್ದ ಸಾರಸ್ವತಸಂಪತ್ತು ಎಂಥದೆಂದು ತಿಳಿಯುತ್ತದೆ. ಅಲ್ಲದೆ ಅವನು ಶಾಸನ ಸಾಹಿತ್ಯವನ್ನು ಸ್ವಲ್ಪಮಟ್ಟಿಗಾದರೂ ನೋಡಿದ್ದಿರಬೇಕೆಂದು "ನುಡಿದನೆ ಕಾಪ್ಪುದನೇ", (೬೬–೫) ಮತ್ತು "ಸಿಡಿಲನ್ನಂ ಸಿಂಗದನ್ನಂ ಪುರಹರನುರಿ ಗಣ್ಣನ್ನನೀ ನಾರಸಿಂಹಂ" ಎಂಬ ಪ್ರಯೋಗಗಳಿಂದ (೧೭೧–೧) ತಿಳಿಯುತ್ತದೆ.[18] ಮೇಲೆ ಹೇಳಿರುವ ಸಾಹಿತ್ಯ ರಾಶಿಯಲ್ಲಿ ಈಗ ಲಬ್ಧವಿರುವ ಗ್ರಂಥಗಳಿಂದ ಯಾವ ಯಾವ ಪ್ರಯೋಗಗಳು ಕೇಶಿರಾಜನಿಂದ ಸ್ವೀಕೃತವಾಗಿವೆಯೆಂಬ ಅಂಶವನ್ನು ಶ್ರೀಮಾನ್ ಪಂಡಿತ ಎಚ್.ಶೇಷ ಅಯ್ಯಂಗಾರ್ ಮತ್ತು ಎ. ವೆಂಕಟರಾವ್ ಅವರು ತಮ್ಮಿಂದ ಸಂಪಾದಿತವಾದ 'ಶಬ್ದಮಣಿದರ್ಪಣ'ದ ಪರಿಶಿಷ್ಟಗಳಲ್ಲಿ ತಕ್ಕಮಟ್ಟಿಗೆ ತೋರಿಸಿದ್ದಾರೆ. ಇಲ್ಲಿ ಒಂದೆರಡು ಪ್ರಯೋಗಗಳ ಮೂಲವನ್ನು ಮಾತ್ರ ಸೂಚಿಸಬಹುದು, "ಜನೋದಯಂಗಿದಂ ಪೇಟಲೊಡರ್ಚಿರೆಂ" ಎಂಬ ಪ್ರಯೋಗದ (೨೨೮–೭) 'ಜನೋದಯ' ಎಂಬುದು ಗಂಗರಾಜನಾದ ಎಱೆಯಪ್ಪನ (ಕಾಲ ೮೮೬–೯೧೩) ಬಿರುದುಗಳಲ್ಲಿ ಒಂದೆಂದೂ ಅದು ಅವನಿಗೆ "ಯಥಾಸ್ಥಾನ ನಿಯೋಜಿತವಾದ ಸಾಮಾದ್ಯುಪಾಯಗಳಿಂದ ತನ್ನ ಜನರಿಗೆ ಅಭಿವೃದ್ಧಿಯನ್ನುಂಟು ಮಾಡುತ್ತಿದ್ದನಾದುದರಿಂದ" ಉಂಟಾಯಿತೆಂದೂ ತಿಳಿದುಬರುವುದರಿಂದ[19] ಈ ಪ್ರಯೋಗ ಎಱೆಯಪ್ಪನಿಗೆ ಸಂಬಂಧಿಸಿದ ಕಾವ್ಯಕ್ಕೆ ಸೇರಿದ್ದಾಗಿರಬೇಕು ; ಅದು ಶೂದ್ರಕ ಗ್ರಂಥವೆಂದು ಹೇಳಬಹುದು. ಭುವನೈಕ ರಾಮನನ್ನು ನೇರಾಗಿ ಹೆಸರಿಸಿರುವ ಮೂರು ಪ್ರಯೋಗಗಳು (೧೩೦-೧, ೧೬೬-೧, ೧೮೩–೧) ಪೊನ್ನನ "ಭುವನೈಕ ರಾಮಾಭ್ಯುದಯ" ಕಾವ್ಯವೆಂಬ ಊಹೆ

---

18. ಶ್ರವಣಬೆಳಗೊಳ ೫೯, ಕಾಲ ೯೭೪, ಕಾವ್ಯಾವಲೋಕನ ೪೯ ; ನಾಗಮಂಗಲ ೧೫, ಕಾಲ ೧೧೭೯ ; ಚನ್ನರಾಯಪಟ್ಟಣ ೨೯೫, ಕಾಲ ೧೨೦೬ ( ? ). ನರಸಿಂಹನ ಅಥವಾ 'ದಕ್ಷಿಣ ಚಕ್ರವರ್ತಿ' ಯ ಪ್ರಶಂಸಾರೂಪವಾಗಿರುವ 'ಸೂಕ್ತಿ ಸುಧಾರ್ಣವ' ದಲ್ಲಿ ದೊರೆಯುವ, ಕೆಲವು ಪದ್ಯಗಳು ಕೇಶಿರಾಜ ಕೃತಿ 'ಚೋಳಪಾಲಕಚರಿತೆ' ಗೆ ಸೇರಿದುವಾಗಿರಬಹುದು.

19. ಕರ್ಣಾಟಕದ ಅರಸು ಮನೆತನಗಳು, ಸಂ. ೧, ಪು. ೭೮೪

ಇದುವರೆಗೆ ನಡೆದಿದೆ. ಇದು ಸರಿ. ರಾಷ್ಟ್ರಕೂಟ ಚಕ್ರವರ್ತಿ ಮುಮ್ಮಡಿ ಕೃಷ್ಣನಿಗೆ(ಕಾಲ ೯೩೯–೯೬೮) "ಭುವನೈಕ ರಾಮ" ಎಂಬ ಬಿರುದು ಇದ್ದಂತೆ "ಭುವಣೆಕ್ಕರಾಮು ರಾಯಾಹಿರಾಉ. ಜಹಾಂ ಅಚ್ಛ ಇ ತುಡಿಗು ಮಹಾಣು ಭಾಉ" ಎಂಬ ಪುಷ್ಪದಂತನ ಮಾತುಗಳಿಂದ ತಿಳಿದು ಬರುತ್ತದೆ.[20] ಕೃಷ್ಣ ರಾಜನ ಆಸ್ಥಾನ ಕವಿಯಾಗಿದ್ದ ಪೊನ್ನ ಈ ಬಿರುದನ್ನು ಉಪಯೋಗಿಸಿಕೊಂಡು ತನ್ನ ದೊರೆಯ ಪ್ರಶಸ್ತಿಯನ್ನುಳ್ಳ ಕಾವ್ಯರಚನೆ ಮಾಡಿರಬೇಕು. 'ಶಬ್ದಮಣಿ ದರ್ಪಣ'ದ ಹಲವು ಪ್ರಯೋಗಗಳಿಗೆ ಮೂಲವಾದ ಇಡಿ ಪದ್ಯಗಳು 'ಸೂಕ್ತಿ ಸುಧಾರ್ಣವ'ದಲ್ಲಿ ದೊರೆಯುತ್ತವೆ.[21] ಇವು ಯಾವ ಕಾವ್ಯಗಳಿಂದ ತೆಗೆದುವೋ, ಅವನ್ನು ರಚಿಸಿದವರು ಯಾರೋ ತಿಳಿಯುವುದಿಲ್ಲ.

### ಕೇಶಿರಾಜನ ವ್ಯಕ್ತಿತ್ವ

ಪ್ರಸಿದ್ಧ ಕವಿಗಳೂ ಪಂಡಿತರೂ ಆಗಿದ್ದವರ ಮನೆತನದಲ್ಲಿ ಹುಟ್ಟಿದವನು ಕೇಶಿರಾಜ. ಅವನ ತಂದೆ 'ಸೂಕ್ತಿ ಸುಧಾರ್ಣವ'ವನ್ನು ರಚಿಸಿದ ಚಿದಾನಂದ ಮಲ್ಲಿಕಾರ್ಜುನ ; ತಾಯಿಯ ತಂದೆ ಕವಿ ಸುಮನೋಬಾಣ ; ಸೋದರಮಾವ ಜನ್ನಕವಿ. ಇವರ ನಡುವೆ ಬೆಳೆದು ಕಲಿತು ಕೇಶಿರಾಜನು ಕವಿಯೂ ಪಂಡಿತನೂ ಆದನು. ಇವನು ಬರೆದಿರುವ ಚೋಳಪಾಲಕ ಚರಿತ್ರೆ, ಚಿತ್ರಮಾಲೆ, ಸುಭದ್ರಾಹರಣ, ಕಿರಾತ ಎಂಬ ಕಾವ್ಯಗಳು ಇದುವರೆಗೆ ಲಭ್ಯವಾಗಿಲ್ಲ. ಅವುಗಳಿಂದ ಅವನ ಕವಿ ಮನೋಧರ್ಮವನ್ನು ವಿಶದ

---

20. ತಿಸಟ್ಠಿ ಮಹಾಪುರಿಸ ಗುಣಾಲಂಕಾರ ಸಂಧಿ ೧ ಕಡವಕ ೩.
21. ಶಮ.ದ. ಸೂ. ೧೦೬—೬ = ಸೂಕ್ತಿ. ಪುಟ ೭—೩೫ ; ೭೭—೧೮ = ೨೬—೧೩ ; ೧೨೦—೨೨ = ೨೯—೬೦ ; ೮೨—೧೬ = ೪೯—೧೨೩ ; ೭೭—೧೭ = ೬೬—೬ ; ೭೪—೧ = ೬೬—೯ ; ೭೮—೧೧ = ೭೧—೩೪ ; ೭೭—೨೧ = ೭೩—೪೬ ; ೭೯—೭ = ೭೩ = ೫೧ ; ೧೩೪—೫ = ೮೭—೧೨೭ ; ೨೨೫—೧ = ೯೩—೫ ; ೧೦೭—೫ = ೨೨೧—೩೯೨ ; ೧೫—೧ = ೨೪೮—೮೦ ; ೨೩೯—೨ __ ೨೬೧—೩೪೮ ; ೨೫೦—೬ ; ೫೨—೨ = ೩೪೦—೭೫ ; ೧೧೫—೧ = ೩೬೩—೫೩ ; ೨೪೪—೧ = ೩೮೩—೧೪ ಇತ್ಯಾದಿ.

ವಾಗಿ ತಿಳಿಯಬಹುದಾಗಿತ್ತು. 'ಶಬ್ದಮಣಿದರ್ಪಣ' ವೊಂದರಿಂದಲೇ ಆ ಕವಿಮನದ ಪರಿಚಯ ಸ್ವಲ್ಪಮಟ್ಟಿಗೆ ಆಗುತ್ತದೆ. ಕವಿತೆಗೆ ಕಾರಣಗಳಾದ ಪ್ರತಿಭೆ, ಅಭ್ಯಾಸ, ವಿದ್ವತ್ಸೇವೆ ಕಾವ್ಯಪರಿಚಯಗಳು ಕೇಶಿರಾಜನ ಪಾಲಿಗೆ ಸ್ವಲ್ಪ ಅಧಿಕ ಪ್ರಮಾಣದಲ್ಲಿಯೇ ಸಂದಿದ್ದುವು. ಅವರ ಕಾರಯಿತ್ರೀ ಪ್ರತಿಭೆಯ ಆವಿಷ್ಕರಣ ಅವನ ಕಾವ್ಯಗಳಲ್ಲಿಯೇ ಹೊರತು ವ್ಯಾಕರಣ ಗ್ರಂಥದಲ್ಲಿ ಅಲ್ಲ. ಆದರೂ ಸೂತ್ರವೃತ್ತಿಗಳಲ್ಲಿ ದೊರೆಯುವ ಕಱು ತಾಯ ಬೞಯನುಱುಯದ ತೆಱದಿಂ, ಕರಡೆಯ ಗಿರ್ಗಟದ ದನಿಯಪ್ಪೊಲ್, ಸಂಚ ರಿಸುವ ನೊಳವುಂ, ಕೈವಾರಮಂ ಬೀಸಿದಂತೆ, ಕಡಲುಡಿಗೆಯಾದ ಪೃಥ್ವಿ— ಎಂಬಿವುಗಳಲ್ಲಿ ಕಾವ್ಯೋಚಿತ ರೀತಿ ಕಾಣುತ್ತದೆ. ಅವನ ಸಹೃದಯತೆಯೂ ಅಭಿರುಚಿಯೂ ಅವನು ಕೊಟ್ಟಿರುವ ಪ್ರಯೋಗಗಳಲ್ಲಿ ಚೆನ್ನಾಗಿ ಮೈಗೊಂ ಡಿವೆ ; ಕಾಮನ ಗರಟಿಗೆ ವರ್ಪಂತೆ ಸುತ್ತಿ ಬರ್ಪುವು ಗಿಳಿಗಳ್, ಪೋಲ್ತಂ ಕಿಸುಸಂಜೆ ಕವಿದ ನೀಲಾಚಲಮಂ, ನೇಸಱು ಮೂಡಿದುದು ಬಕಂಗೆ ಮಿಟ್ಟಿ ಮೂಡುವ ತೆಱದಿಂ, ಕುಡುಮಿಂಚಂ ಮಸೆದನ್ನರಪ್ಪ ಪಲರೊಳ್ವೆಂಡಿರ್, ಪ್ರಾಯಂ ಕೂಸಾದೊಡಭಿಪ್ರಾಯಂ ಕೂಸುಕ್ಕುಮೆ—ಇವೇ ಮುಂತಾದ ಪ್ರಯೋಗಗಳು ಇದಕ್ಕೆ ಉದಾಹರಣೆಗಳು. ಇವು ಅವನ ಭಾವಕತನವನ್ನೂ ರುಚಿಸಂಸ್ಕಾರದ ಉನ್ನತಿಯನ್ನೂ ತೋರಿಸುತ್ತವೆ. ಇಂಥ ಪ್ರಯೋಗಗಳು ವ್ಯಾಕರಣದ ಅಭ್ಯಾಸಕ್ಕೂ ರಸದ ಲೇಪವನ್ನು ಬಳಿಯುತ್ತವೆ. ಅದು ಶುಷ್ಕವಾಗಿ ತೋರದೆ ಸುಕುಮಾರಮತಿಗಳಿಗೂ ಹೃದ್ಯವಾಗಿದೆ. ಈ ಕವಿ ಮನಕ್ಕಿಂತ ಕೇಶಿರಾಜನ ಶಾಸ್ತ್ರಿಮನ ಹೆಚ್ಚು ಪ್ರಶಂಸನೀಯ. ನಿರಾಧಾರವಾಗಿ ಏನನ್ನೂ ಹೇಳದೆ ಪ್ರಯೋಗ ಬಲವನ್ನು ಅವಲಂಬಿಸಿರುವ ಶಾಸ್ತ್ರಪ್ರಜ್ಞೆ, ಪ್ರಾಮಾಣಿಕತೆಗಳು, ಸಂದೇಹ ಬಂದಲ್ಲಿ ಹಾಗೆಂದು ಒಪ್ಪುವುದು, ವಿಷಯ ವನ್ನು ನಿರ್ಣಾಯಕವಾಗಿ ಹೇಳಲಾಗದಿದ್ದಾಗ ತೋರುವ ತಾಟಸ್ಥ್ಯ, ತನಗೆ ಒಪ್ಪಿಗೆಯಲ್ಲದಿರುವುದನ್ನು ಕಂಠೋಕ್ತವಾಗಿ ನಿಷೇಧಿಸುವುದು, ಗುಣದೋಷ ಗಳೆರಡಕ್ಕೂ ಒಬ್ಬನೇ ಕವಿಯ ಪ್ರಯೋಗಗಳನ್ನು ಕೊಡುವುದರಲ್ಲಿ ಕಾಣಿಸಿರುವ ನಿಷ್ಪಕ್ಷಪಾತದೃಷ್ಟಿ, ಆತ್ಮವಂಚನೆ, ಪರವಂಚನೆಗಳ ಅಭಾವ—ಇವೆಲ್ಲ ಕೇಶಿ ರಾಜನ ವೈಜ್ಞಾನಿಕ ಮನೋಧರ್ಮವನ್ನು ತೋರಿಸುತ್ತವೆ. ಇವೆಲ್ಲಕ್ಕೂ

ತಕ್ಕ ನಿದರ್ಶನಗಳನ್ನು ಅವನ ವ್ಯಾಕರಣದಲ್ಲಿ ನೋಡಬಹುದು. ಒಂದನ್ನು ಮಾತ್ರ ಇಲ್ಲಿ ಎತ್ತಿ ಹೇಳಿದೆ : ಸೂತ್ರ ೨೨೨ಕ್ಕೆ ಪ್ರಯೋಗಗಳನ್ನು ಕೊಡು ವಾಗ "ತನಪ್ರತ್ಯಯಮಂ ಸಂಸ್ಕೃತದೊಳ್ ಪತ್ತಿಸಲಾಗದು" ಎಂದು ಹೇಳಿ "ವಾಹಕತನಂ ಆರೋಹಕತನಮೆಂಬಿವಬದ್ಧಂಗಳ್" ಎಂಬ ಉದಾಹರಣೆ ಗಳನ್ನು ತೋರಿಸಿ ಅವು 'ಅಬದ್ಧ'ವೆಂದು ನಿಷೇಧಿಸಿದೆ. "ವಾಹಕತನಂ" ಎಂಬುದು (ಕಿ.ಪ) ಪ್ರತಿಗಳಲ್ಲಿಲ್ಲ ; (ಕ) ದಲ್ಲಿ ಇದನ್ನು ಸೇರಿಸಬಹುದು. "ಆರೋಹಕತನಂ" ಎಂಬುದನ್ನು ಕೇಶಿರಾಜ ೧೨೩೦ರಲ್ಲಿ ರಚಿತವಾದ ಜನ್ನನ 'ಅನಂತನಾಥ ಪುರಾಣ'ದಿಂದ (೨–೩೦) ಎತ್ತಿಕೊಂಡಿರಬೇಕು.[22] ತನ್ನ ಸೋದರಮಾವನ ಕಾವ್ಯಗಳಿಂದ ಗುಣಕ್ಕೆ ಪ್ರಯೋಗ ಕಾಣಿಸುವುದು (ಸೂತ್ರ ೧೭೯-೫). ದೊಡ್ಡದಲ್ಲ ; ದೋಷಕ್ಕೂ ಪ್ರಯೋಗ ತೋರಿಸುವುದು ದೊಡ್ಡದು. ಇಲ್ಲಿ 'ದಂಡಿನಲ್ಲಿ ಸೋದರಮಾವನೆ' ಎಂಬ ಗಾದೆಯ ಮಾತಿ ನಂತೆ ಕೇಶಿರಾಜನ ನಿರ್ದಾಕ್ಷಿಣ್ಯ ದೃಷ್ಟಿ ವ್ಯಕ್ತವಾಗಿದೆ.

ತನ್ನ ಕೃತಿಗಳಿಂದಲೂ ಕೇಶಿರಾಜ ಗುಣದೋಷಗಳೆರಡಕ್ಕೂ ಪ್ರಯೋಗ ಗಳನ್ನು ಕೊಟ್ಟಿರಬಹುದೆ ? ಸಂಸ್ಕೃತ ಅಲಂಕಾರಿಕರಲ್ಲಿ ಕೆಲವರು "ಯಥಾಮಮ","ನ ಯಥಾಮಮ" ಎಂದು ಹೇಳಿ ಗುಣದೋಷಗಳೆರಡಕ್ಕೂ ತಮ್ಮ ಕಾವ್ಯಗಳಿಂದ ಲಕ್ಷ್ಯಗಳನ್ನು ಕೊಡುವ ಸಂಪ್ರದಾಯವುಂಟು. ಹೀಗೇನಾದರೂ ಕೇಶಿರಾಜ ಮಾಡಿರಬಹುದೆ ? ಕುತೂಹಲಕಾರಕ ಪ್ರಶ್ನೆ. ಸೂತ್ರ ೨೩೦ ಕೆಳಗಿನ ಪ್ರಯೋಗಗಳಲ್ಲಿ ಕವಿಕೇಶವನೆಂ, ಮಲ್ಲಿಕಾರ್ಜುನ ಸುತನೆಂ ದೌಹಿತ್ರನೆಂ– ಎಂಬಿವು 'ಶಬ್ದಮಣಿದರ್ಪಣ'ದಲ್ಲಿರುವ ಸೂತ್ರ ದಿಂದಲೇ (೨) ತೆಗೆದುವು[23] ಇವು ಉಸ್ಮಾನಿಯಾ ವಿಶ್ವವಿದ್ಯಾಲಯದ 'ಶಬ್ದಮಣಿದರ್ಪಣ' ಪ್ರತಿಯಲ್ಲೂ ಲಿಂಗಣಾರಾಧ್ಯನ ವೃತ್ತಿಯುಳ್ಳ

22. ಈ ಸಂದರ್ಭದಲ್ಲಿ ಕೇಶಿರಾಜನ ದೃಷ್ಟಿಗೆ ಪಂಪನ "ಬಾಲತನ" ಎಂಬ ಪ್ರಯೋಗ (ಪಂಪಭಾರತ.೧೧—೧೩೪) ಏಕೆ ಬರಲಿಲ್ಲವೋ ಸೋಜಿಗ.

23. ಇಲ್ಲಿರುವ 'ಪೆಂಡತಿಯೆನಾದಂ' ಎಂಬ ಇನ್ನೊಂದು ಪ್ರಯೋಗ ಪಂಪಭಾರತದ್ದು (೧—೭೬)

ಮದ್ರಾಸು ಮುದ್ರಣದಲ್ಲಿಯೂ ಇಲ್ಲದಿರುವುದರಿಂದ 'ಪ್ರಕ್ಷಿಪ್ತ'ಗಳಾಗಿರಬೇಕೆಂದು ಪ್ರೊ. ಡಿ.ಕೆ. ಭೀಮಸೇನರಾಯರ ಅಭಿಪ್ರಾಯ.[24] ಪ್ರಯೋಗಗಳ ವಿಚಾರವಾಗಿ ಹಿಂದೆ ಸೂಚಿಸಿರುವ ಸಮಸ್ಯಾಬಾಹುಳ್ಯವನ್ನು ನೋಡಿದರೆ ಈ ವಿಷಯದಲ್ಲಿ ಹೀಗೆಯೇ ಸರಿ ಎಂದು ಹೇಳುವುದಕ್ಕೆ ಹಿಂದೆಗೆಯಬೇಕಾಗಿದೆ. ಸ್ವಕೀಯ ಕಾವ್ಯಗಳಿಂದ ಕೇಶಿರಾಜ ಪ್ರಯೋಗಗಳನ್ನು ತೆಗೆದುಕೊಂಡಿಲ್ಲವೆಂದೂ ಹೇಳುವಹಾಗಿಲ್ಲ. ಆಕರಗಳು ಗೊತ್ತಿಲ್ಲದ ಅವೆಷ್ಟೋ ಪ್ರಯೋಗಗಳಲ್ಲಿ ಕನಿಷ್ಠ ಪಕ್ಷ ಒಂದೆರಡಾದರೂ ಅವನ ಕಾವ್ಯಗಳಿಂದ ಬಂದಿರಬಹುದು[25].

---

24. ಶಬ್ದಮಣಿದರ್ಪಣದ ಪಾಠಾಂಶಗಳು, ಪುಟ ೪೪

25. 'ಸೂಕ್ತಿಸುಧಾರ್ಣವ'ದಲ್ಲಿ ಕೇಶಿರಾಜನ ಸ್ತುತಿರೂಪವಾದ ಒಂದು ಪದ್ಯವಿದೆ (ಪುಟ ೧೯೯–೩೮೧) ಇದನ್ನು ಬರೆದವನು ಯಾರು ? ತಂದೆ ಸಂಕಲಿಸಿದ ಗ್ರಂಥದಲ್ಲಿ ಮಗನ ಪ್ರಶಂಸೆ ಹೇಗೆ ಬಂತು ? (೧) ಕೇಶಿರಾಜನ ತರುವಾಯ ಬಂದ ಯಾವನೋ ಕವಿ ಪೂರ್ವ ಕವಿಸ್ತುವಾವಸರದಲ್ಲಿ ಈ ಪ್ರಶಂಸೆಯ ಪದ್ಯವನ್ನು ಹೇಳಿರಬಹುದು. ಅನಂತರ ಬಂದ ಪ್ರತಿಕಾರನೊಬ್ಬ 'ಸೂಕ್ತಿಸುಧಾರ್ಣವ'ದಲ್ಲಿ ಅದನ್ನು ಸೇರಿಸಿರಬಹುದು. ಆ ಗ್ರಂಥ ರಚಿತವಾದ ೧೪೦ ವರ್ಷಗಳ ಅನಂತರ ಸು. ೧೩೮೫ರಲ್ಲಿ ಬಂದ ಮಧುರ ಬರೆದ 'ಧರ್ಮನಾಥ ಪುರಾಣ'ದಿಂದ ತೆಗೆದಿರುವ ಪದ್ಯಗಳು ಆ ಗ್ರಂಥದ ಕೆಲವು ಪ್ರತಿಗಳಲ್ಲಿ ದೊರೆಯುವುದರಿಂದ ಇದು ಅಸಂಭಾವ್ಯವಲ್ಲ (೨) ತಂದೆಯ ಮೂಲಪ್ರತಿಯನ್ನು ಮಗ ತನಗಾಗಿಯೋ ಇನ್ನಾರಿಗೋ ಪ್ರತಿಮಾಡುವಾಗ ಸ್ವಕೃತ ಪದ್ಯಗಳನ್ನು ಅದರಲ್ಲಿ ಸೇರಿಸಿ ಬರೆದಿರಬಹುದು. ಹೀಗಿದ್ದರೆ ಮೇಲ್ಕಂಡ ಪದ್ಯ ಕೇಶೀರಾಜ ಕೃತವೇ ಆಗಿರಬೇಕು; ಅದು ಅವನು ಯಾವುದಾದರೂ ಕಾವ್ಯದ ಆದಿಯಲ್ಲೋ ಅಂತ್ಯದಲ್ಲೋ ಬರುವ ಪ್ರಶಂಸಾಭಾಗಕ್ಕೆ ಸೇರಿದ್ದಾಗಿರಬಹುದು (೩) ಮಲ್ಲಿಕಾರ್ಜುನನು 'ಸೂಕ್ತಿಸುಧಾರ್ಣವ'ವನ್ನು ರಚಿಸುವ ಕಾಲಕ್ಕಾಗಲೇ ಅವನ ಮಗ ಕೇಶಿರಾಜ ಪ್ರಾಪ್ತವಯಸ್ಕನಾಗಿ ಒಂದೆರಡು ಕಾವ್ಯಗಳನ್ನೂ ರಚಿಸಿದ್ದು ತಂದೆ-ಮಗ ಇಬ್ಬರೂ ಸೇರಿ 'ಸೂಕ್ತಿಸುಧಾರ್ಣವ' ಸಂಕಲನಕ್ಕೆ ಕಾರಣರಾಗಿರಬಹುದು, ಆಗ ಕೇಶಿರಾಜ ಸ್ವಕೃತ ಪದ್ಯಗಳನ್ನು ಅದರಲ್ಲಿ ಸಮಾವೇಶಗೊಳಿಸಬಹುದಾದುದ್ದು ಸಹಜವೇ ಆಗುತ್ತದೆ. ಕೇಶಿರಾಜನ ಕಾವ್ಯಗಳಿಂದ ಕೆಲವು ಪದ್ಯಗಳಾದರೂ ಆ ಗ್ರಂಥದಲ್ಲಿ ಸೇರಿಕೊಂಡಿದ್ದರೆ ಅದು ಸೋಜಿಗವಲ್ಲ.

ಈ ವಿಷಯ ಹಾಗಿರಲಿ? ಕೇಶಿರಾಜನ ಮನೋಧರ್ಮ ಅವನ ವ್ಯಾಕರಣದಲ್ಲಿ "ಮನದೊಳೋವರಿಯಿಲ್ಲ. ಬುದ್ಧಿಯೊಳ್ ವಿಸಂಚವಿಲ್ಲ" ಎಂಬಂತೆ ಸ್ಪಷ್ಟವಾಗಿ ಪ್ರತಿಫಲಿಸಿದೆ. ವ್ಯಕ್ತಿತ್ವದ ಆವಿಷ್ಕರಣ ಕವಿಕೃತಿಯ ಗುಣವಾದರೆ ಅದು ಇಲ್ಲಿ ಮಿಗಿಲಾಗಿಯೇ ಇದೆ. ಆದ್ದರಿಂದ 'ಶಬ್ದಮಣಿದರ್ಪಣ' ಕಾವ್ಯವೂ ಹೌದು, ಶಾಸ್ತ್ರವೂ ಹೌದು. ಕಾವ್ಯಲೇಪನವನ್ನು ಪಡೆದಿರುವ ಶಾಸ್ತ್ರವೆಂದರೂ ಸರಿಯೆ. ಅದು ಒಳಗಿರುವ ಮೀನುಗಳ ಚೆಲ್ಲಾಟವನ್ನು ತೆರೆದು ತೋರಿಸುವ ಶರತ್ಕಾಲದ ಹೊಳೆ, ಕೇಶಿರಾಜನ ಮನಃಕ್ರೀಡೆ ಅದರಲ್ಲಿ ರಮ್ಯವಾಗಿ ರೂಪುಗೊಂಡಿದೆ.

## ಕೃತಜ್ಞತೆ

ಈ ಗ್ರಂಥವನ್ನು ಪರಿಷ್ಕರಿಸಿ ಮುದ್ರಿಸಬೇಕೆಂದು ನನ್ನನ್ನು ಒತ್ತಾಯ ಪಡಿಸಿ ಪ್ರೋತ್ಸಾಹವನ್ನಿತ್ತವರು ಮಿತ್ರರಾದ ಪ್ರೊ. ತೀ. ನಂ. ಶ್ರೀಕಂಠಯ್ಯನವರು. ಪರಿಷ್ಕರಣಕ್ಕೂ ಮುದ್ರಣಕ್ಕೂ ಸೇರಿದ ಎಲ್ಲ ಕೆಲಸಗಳಲ್ಲಿಯೂ ಬೆಲೆಯುಳ್ಳ ಸಲಹೆ, ತಿದ್ದುಪಡಿಗಳು ನನಗೆ ಅವರಿಂದ ಬಂದಿವೆ. ಈ ವಿಷಯದಲ್ಲಿ ಅವರು ನನ್ನ ಜೊತೆ ಉದ್ದಕ್ಕೂ ದುಡಿದಿದ್ದಾರೆ. ತಮ್ಮ ಇತರ ಕೆಲಸಗಳ ಗೊಂದಲದಲ್ಲಿ ಬಿಡುವು ಮಾಡಿಕೊಂಡು ತುಂಬ ಆಸಕ್ತಿಯನ್ನು ವಹಿಸಿ ನನಗೆ ಹೆಜ್ಜೆಹೆಜ್ಜೆಗೂ ನೆರವಾಗಿದ್ದಾರೆ. "ನಿನ್ನುಪಕಾರಮನ ದೇಕಟೆಯೊಳ್ ನೀಗುವೆನೋ" ಎಂದು ಮಾತ್ರ ಅವರಿಗೆ ಹೇಳಬಲ್ಲೆ. (ಕ) ಪ್ರತಿಯನ್ನು ಉಪಯೋಗಕ್ಕಾಗಿ ನನಗೆ ದಯಮಾಡಿ ಕೊಟ್ಟವರು ಶ್ರೀಮಾನ್ ಎಚ್. ದೇವೀರಪ್ಪ ಎಂ.ಎ. ಅವರು. ಸೂತ್ರಪದ್ಯಗಳ ಮತ್ತು ಪ್ರಯೋಗಗಳ 'ಬಾಡಿಕೋರ'ಗಳನ್ನು ಸಿದ್ಧಪಡಿಸಿಕೊಟ್ಟವರೂ ಈ ಪ್ರಕಟಣೆಯ ಗುರುಭಾರವನ್ನು ಹೊತ್ತಿರುವವರೂ ನನ್ನ ಶಿಷ್ಯ-ಮಿತ್ರರಾದ ಶ್ರೀಮಾನ್ ಎಚ್. ಎಂ. ಶಂಕರನಾರಾಯಣರಾಯರು. ಈ ಮೂವರೂ ಮಹನೀಯರಿಗೆ ನನ್ನ ಹಾರ್ದಿಕವಾದ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ಪ್ರಕೃತ ಮುದ್ರಣ

ಇನ್ನು ಈ ಮುದ್ರಣದ ವಿಚಾರವಾಗಿ ಒಂದೆರಡು ಮಾತು. ಕಿಟ್ಟೆಲ್ ಅವರ ಮತ್ತು ಪರಿಷತ್ತಿನ ಮುದ್ರಣಗಳಲ್ಲಿರುವ ನಿಟ್ಟೂರ ನಂಜಯ್ಯನ ಟೀಕನ್ನೂ ಮೊದಲನೆಯದರಲ್ಲಿ ಮಾತ್ರ ಇರುವ ಪರಿಚ್ಛೇದ ಅನ್ವಯ ಗಳನ್ನೂ ಇಲ್ಲಿ ಬಿಟ್ಟಿದೆ. ಇವುಗಳಿಂದ ಅಭ್ಯಾಸಿಗಳಿಗೆ ಸಹಾಯವಾಗುವು ದಾದರೂ ಗ್ರಂಥದ ಗಾತ್ರವೂ ಅದರೊಡನೆ ಮುದ್ರಣದ ವೆಚ್ಚವೂ ಮಿತಿ ಮೀರುವುದೆಂಬ ಅಂಜಿಕೆ ಇದಕ್ಕೆ ಕಾರಣ. ಸ್ವಲ್ಪ ಶ್ರಮಪಟ್ಟರೆ ಟೀಕಿನ ಅವಶ್ಯಕತೆ ಅಷ್ಟೇನೂ ತೋರುವುದಿಲ್ಲ. ಹೀಗಿದ್ದರೂ ಇದರ ಎರಡು ಮೂರನೆಯ ಮುದ್ರಣಗಳಲ್ಲಿ ನಿಟ್ಟೂರ ನಂಜಯ್ಯನ ಟೀಕನ್ನು ಸೇರಿಸಿದೆ. ಸಹಜ ಲಬಿಗಳ ಪಟ್ಟಿ. ಧಾತುಪಾಠ, ಪ್ರಯೋಗ ಸಾರ– ಇವುಗಳನ್ನು ಅಕಾರಾದಿ ಕ್ರಮದಲ್ಲಿ ಕೊಟ್ಟಿದೆ; ಪರಿಷನ್ಮುದ್ರಣದಲ್ಲಿ ಈ ಕ್ರಮವಿದೆ ; ಕೈಬರಹದ ಪ್ರತಿಗಳಲ್ಲಿ ಇದು ಕಾಣುವುದಿಲ್ಲ. ಸೂತ್ರ ೮ರಂತೆ ಪ್ರಯೋಗ ಸಾರವನ್ನು ಬಿಟ್ಟು ಶಬ್ದ ಮಣಿದರ್ಪಣದ ಸಂಧಿಗಳ ಒಟ್ಟು ಸಂಖ್ಯೆ ೮. ಇಲ್ಲಿ ಪೀಠಿಕೆ, ಸಂಧಿ ಪ್ರಕರಣ—ಇವಕ್ಕೆ ೧, ೨ ಎಂದು ಬೇರೆ ಬೇರೆ ಸಂಖ್ಯೆ ಗಳನ್ನು ಹಾಕಿದೆ. ಇವೆರಡೂ ಸೇರಿ ಒಂದು ಸಂಧಿ ಅಥವಾ ಪ್ರಕರಣವಾಗಿರ ಬೇಕು.. ಸೂತ್ರಗಳಿಗೆ ಸಂಖ್ಯೆಯನ್ನು ಕೊಡುವಾಗ ಕಿಟ್ಟೆಲ್ ಅವರು ಪೀಠಿಕೆಯ ೧೦ ಪದ್ಯಗಳಿಗೂ 'ಸಮಾಪ್ತಿ ವಾಕ್ಯಂಗಳು' ಎಂಬಲ್ಲಿರುವ ಪದ್ಯಗಳಿಗೂ ನಡುವೆ ಬರುವ ಇನ್ನೂ ಕೆಲವಕ್ಕೂ ಸೂತ್ರ ಸಂಖ್ಯೆಯನ್ನು ಹಾಕಿಲ್ಲ; ಪರಿಷನ್ಮುದ್ರಣದಲ್ಲಿ ಸುಮಾರಾಗಿ ಹೀಗೆಯೇ ಇದೆ (ಕ)ದಲ್ಲಿ ಪ್ರತಿ ಪ್ರಕರಣಕ್ಕೂ ೧ ರಿಂದ ಸಂಖ್ಯೆಯನ್ನು ಪ್ರಾರಂಭಿಸಿದೆ. ಇಲ್ಲಿ ಎಲ್ಲ ಪದ್ಯಗಳನ್ನು ಸೂತ್ರಗಳೆಂದೇ ಭಾವಿಸಿ ಅನುಸ್ಯೂತವಾಗಿ ಸಂಖ್ಯೆಯನ್ನು ಕೊಟ್ಟಿದೆ. ಅಡಿ ಟಿಪ್ಪಣಿಗಳಲ್ಲಿ (ಅ.ಟಿ.) ಬರುವ + ಚಿಹ್ನೆ ಅಧಿಕ ಪಾಠವನ್ನು ತೋರಿಸುತ್ತದೆ; ಪ್ರಶ್ನೆ ಚಿಹ್ನೆ ಪಾಠ ಸಂದೇಹವನ್ನೂ ಚೌಕ ಕಂಸಗಳಲ್ಲಿರುವುವು ಸಂಪಾದಕ ನಿಯೋಜಿತ ಪಾಠವನ್ನೂ ಸೂಚಿಸುತ್ತದೆ.

ಅಚ್ಚಿನ ಕರಡುಗಳನ್ನು ಎರಡಲ್ಲ ನಾಲ್ಕು ಕಣ್ಣುಗಳು ನೋಡಿ ಎಚ್ಚರಿಕೆಯಿಂದ ತಿದ್ದಿದರೂ ತಪ್ಪುಗಳು ಉಳಿದಿರುವುದಕ್ಕಾಗಿ ವಿಷಾದಿಸ

ಬೇಕಾಗಿದೆ. ೧೩೭–೮ರಲ್ಲಿ .... ಜಗತ್ತ್ರಿತಯ .... ಎಂದೂ ೧೫೬–೯ರಲ್ಲಿ ಎಲ್ಲಾ ರತ್ನಂಗ ಳುಮ ನೊಳಕೊಂಡೊ..ಎಂದೂ ತಿದ್ದಿಕೊಳ್ಳಬೇಕು. ೧೨೦ರ ಎರಡನೆಯ ಪಾದಾಂತ್ಯದಲ್ಲಿ ಲಘ್ವಕ್ಷರವಿದ್ದು ಛಂದಸ್ಸಿನ ದೃಷ್ಟಿಯಿಂದ ಸರಿಯಾಗಿಲ್ಲ. [26]

ಅಜ್ಞಾನದಿಂದಲೂ ಅನ್ಯಥಾಜ್ಞಾನದಿಂದಲೂ ಅಸಮಾಧಾನದಿಂದಲೂ ನುಸುಳಿಕೊಂಡು ಬಂದಿರುವ ಸ್ಖಾಲಿತ್ಯಗಳು ಇನ್ನೂ ಹಲವು ಇರಬಹುದು· ಅವು ಕಣ್ಣಿಗೆ ಬಿದ್ದಾಗ ಸರಿಪಡಿಸಲು ಸಾಧ್ಯವಾದೀತು. "ಅಕ್ಕರಿಗರಧಿಕ ಪ್ರಜ್ಞರ್ ಕೈಕೊಂಡು ತಿರ್ದುಗೆ ದೋಷಮಂ".



---

26. ಈ ಅಂಶ ನನ್ನ ದೃಷ್ಟಿಗೆ ಬಂದುದು ಶ್ರೀ ತೀ. ನಂ. ಶ್ರೀಕಂಠಯ್ಯನವರು ತಮ್ಮ ಪ್ರತಿಯಲ್ಲಿ ಬರೆದುಕೊಂಡಿರುವ ಟಿಪ್ಪಣಿಯಿಂದ.

